**CHETANA-SANKEERTANA** - Written by : Pashu Rudrabhumi
(Vedamurthy K.M. Phalaksha Shastriji), Haledarooji - 583 129

ಪ್ರಥಮ ಆವೃತ್ತಿ : ೨೦೧೭

ಗಾತ್ರ : ಡೆಮಿ ಅಷ್ಟಾಂಶ

ಪ್ರತಿಗಳು : ೧೦೦೦

ಪುಟಗಳು : ೧೮೪ + (xviii)

ಹಕ್ಕುಗಳು : ಲೇಖಕರವು.

ಬೆಲೆ : ರೂ. ೧೨೦-೦೦

ಪ್ರಕಾಶನ : ವೇದ - ನಾದ
ಎಮ್ಮಿಗನೂರು - ಗದಗ



ಮುದ್ರಣ : ಆಶಾ ಗ್ರಾಫಿಕ್ಸ್ ಪ್ರೈ. ಲಿ.,
ಕುಮಾರಪಟ್ಟಣಂ-581 123
(ಹರಿಹರದ ಸಮೀಪ)
ರಾಣೇಬೆನ್ನೂರು ತಾ, ಹಾವೇರಿ ಜಿಲ್ಲೆ
✆ (08373) 241471



ಲಿಂ|| ವೇ.ಮೂ. ಶ್ರೀ ಕೆ.ಎಂ. ವೀರಭದ್ರಯ್ಯನವರು
ಪಾಪಿನಾಯಕನಹಳ್ಳಿ, ಹೊಸಪೇಟೆ ತಾ||, ಬಳ್ಳಾರಿ ಜಿ||
ಜನನ : 1-7-1922 – ಲಿಂಗೈಕ್ಯ : 11-8-1982

ಲಿಂ|| ಕೆ.ಎಂ. ಪಾರ್ವತಮ್ಮನವರು
ಲಿಂಗೈಕ್ಯ : 3-12-2010

# ಋಣ ಸಂದಾಯ

ಸಿಂಧು ನಾನು! ಸಿಂಧುವಿನಿಂದಗಲಿ ಬಂದ
ಬಿಂದು ನಾನು! ಎಂಬತ್ನಾಲ್ಕು ಲಕ್ಷ ಯೋನಿಗಳಲಿ
ತಿರುಗಿ ಬಂದೆ ನಾನು! ಮತ್ತೆ ಈ ಅರುವಿನ ಜನ್ಮಕೆ
ತಂದೆ ನೀನು!? ತಂದ ನೀ ಬೇರಾರೂ ಅಲ್ಲ!!
ತಂದೆ । ನೀ ನನ್ನ ತಂದೆ ॥

ತಂದೆ-ನೀ ತರುವಾಗ! 'ತಾ' 'ತಾ' ಎಂದಳು
ತಾಯಿ । ಆ ನನ್ನ ತಾಯಿ ॥
'ಮಾತೃದೇವೋಭವ ಪಿತೃದೇವೋಭವ'
ಎನ್ನುತಿವೆ ಶಾಸ್ತ್ರಂಗಳು ಅದಕೆ....!
"ಚೇತನ-ಸಂಕೀರ್ತನ" ಈ ನನ್ನ ಲೇಖನ!
ನಿಮ್ಮಿಬ್ಬರಿಗರ್ಪಣ । ಅರ್ಪಿಸಿ –
ಕೊಡುವೆ ನಾ ತರ್ಪಣ ॥



'ಪಶು-ರುದ್ರಭೂಮಿ'

॥ ಶ್ರೀ ಜಗದ್ಗುರು ಪಂಚಾಚಾರ್ಯಾ: ಪ್ರಸೀದಂತು ॥


ಲಿಂಗೈಕ್ಯ ಶ್ರೀಗಳು




ವರ್ತಮಾನ ಶ್ರೀಗಳು

**ಶ್ರೀ ಷ॥ ಬ್ರ॥ ವಾಮದೇವ ಮಹಾಂತ**
**ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು**
**ಹಂಪಿಸಾವಿರದೇವರ ಮಹಂತರ ಮಠ,**
**ಎಮ್ಮಿಗನೂರು-583 113, ಬಳ್ಳಾರಿ ಜಿಲ್ಲೆ**

## ಶುಭಾಶೀರ್ವಾದ ಸಂದೇಶ

ಕನ್ನಡ ಸಾಹಿತ್ಯ ಲೋಕದಲ್ಲಿ ರನ್ನ, ಪಂಪ, ಹರಿಹರ, ರಾಘವಾಂಕ ಬಾಯ್ತೆರೆದು ಬರೆದರೆ, ಜ್ಞಾನರತ್ನಂಗಳೆ ಉದುರುವವು. ಅವರ ಹೆಪ್ಪಿನ ತುಪ್ಪವಾಗಿ ಸಾಗಿ ಬಂದಿರುವ ಕುವೆಂಪು, ದ.ರಾ.ಬೇಂದ್ರೆ, ಜಿ.ಎಸ್. ಶಿವರುದ್ರಪ್ಪ ಇವರ ಸಾಹಿತ್ಯ ಸಾಗರದ ಸಿಹಿಯನ್ನು ಅನುಭವಿಸುತ್ತೇವೆ. ಇವರ ಸಿಹಿಯನ್ನನುಭವಿಸಲು ಮೊದಲು ನಮ್ಮ ಮನಸ್ಸಿಗೆ ಹತ್ತಿರವಿರುವ ಕಹಿಯನ್ನು ಕಳಚಿಕೊಳ್ಳಬೇಕು.

ಕಹಿ ಮಾತಿನಿಂದ, ಮಂತ್ರದಿಂದ, ಪಂಥದಿಂದ ಬಗೆಹರಿಯಬಾರದ್ದು ಮಮತೆ ಮಾತ್ರದಿಂದ ಸಾಧ್ಯ. ಮಮತೆಗೆ ಭಾಷೆ ಘನವಾಗಿ ಬಳಿಸುವುದರಿಂದ ಸಾಧ್ಯವಿಲ್ಲ. ಕೋಶ, ವೇಷ ಘನವಾಗಿ ಬರೆಸಿ ಧರಿಸುವುದರಿಂದ ಸಾಧ್ಯವಿಲ್ಲ. ಅದಕ್ಕೆ ನಮ್ಮ ವಚನವೊಂದು ಹೀಗಿದೆ!

ಕಳೆಯ ಕಳೆದು ಬೆಳೆಯ ಬೆಳೆಯುವ ವಿದ್ಯೆಯ ತೋರಿದೆಯಯ್ಯಾ!
ಹೊಟ್ಟೆ ಜುಟ್ಟಿನ ಜಿಡ್ಡು ತೊಳೆಯುವ ತಿಳಿವ ತೋರಿದೆಯಯ್ಯಾ!
ಮನದ ಕಳೆಯ ಕಳೆಯುವ ಜ್ಞಾನದ ಹೊಳೆಯ ತೋರಯ್ಯಾ ಸಾಶಿರಾಧೀಶಾ ॥

ಕಸವಿಲ್ಲದ ಬೆಳೆ, ಹೊಲಸಿಲ್ಲದ ಬಟ್ಟೆ ಕಲ್ಮಶವಿಲ್ಲದ ಮನಸ್ಸು ಮನುಷ್ಯ ಅನುಭವಿಸಿದರೆ ಅದು ಸ್ವರ್ಗಸುಖ. ಇಂತಹ ಸ್ವರ್ಗ ಸುಖದ ಸೌಖ್ಯವನ್ನು ಬೆಳೆಸಲು ಒಬ್ಬ ಕವಿ (ಸಾಹಿತಿ) ಉದಯವಾಗಿದ್ದಾನೆ. ಈ ಗ್ರಂಥದ ಕರ್ತೃ 'ಪಶು-ರುದ್ರಭೂಮಿ' ಕಾವ್ಯನಾಮಾಂಕಿತ ಶ್ರೀ ವೇ.ಮೂ. ಕು.ಮ. ಫಾಲಾಕ್ಷಯ್ಯ ಶಾಸ್ತ್ರಿಗಳು.

ಇವರ ಸಾಹಿತ್ಯದ ಕೃಷಿಯಲ್ಲಿ ಕಸಿವಿಸಿ ಕಳೆದು ಖುಷಿ ನೀಡಿರುವ ಗ್ರಂಥಗಳೆಂದರೆ 'ಪರಮಾತ್ಮ-ಜೀವಾತ್ಮ-ದೇಹಾತ್ಮ', 'ದೇಹವೇ ದೇವಿ', 'ವೈಚಾರಿಕತೆ', 'ಶ್ರೀ ಸಿದ್ದಲಿಂಗ ಮಹಾಂತರ ಪುರಾಣ' ಇನ್ನು ಅನೇಕಾನೇಕ. ಅವುಗಳ ದಾರಿಯಲೇ ಚತುಷ್ಪಥದ ದಾರಿಯಂತೆ ಜನ್ಮ ತಾಳಿರುವ "ಚೇತನ-ಸಂಕೀರ್ತನ' ಎಂಬ ಈ ಗ್ರಂಥ ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ

ಚತುಷ್ಪಥ ಹೆದ್ದಾರಿಯೂ ಇದು. ಮನುಜ ಮಥದ ಉದ್ಧಾರವೂ ಇದು.

ಉದ್ಧಾರ ಉದ್ಗಾರ ತೆಗೆದರೆ ಬರುವುದೇನಯ್ಯಾ?
ದೂರವಾಣಿಯಿಂದ ದೇವವಾಣಿ ಕೇಳಬಹುದೇನಯ್ಯಾ?
ಪೂರ್ವದ್ವಾರದಿಂದ ಪರಮಾತ್ಮನ ಸಂದರ್ಶನವಾಗಬಹುದೇನಯ್ಯಾ?
ಪರ್ವತದ ದಾರಿ ಪರಮಾತ್ಮನ ಹೆದ್ದಾರಿ ಏನಯ್ಯಾ?
ಅಂತರ್ವಾಣಿಯೇ ಶಿವವಾಣಿಯಯ್ಯಾ ಸಾಶಿರಾಧೀಶಾ ॥

ಹೀಗೆ ಇವರ ಸಾಹಿತ್ಯದಲ್ಲಿ ಉಚ್ಚಾರ ಸ್ಪಷ್ಟವಿದೆ. ವಿಚಾರ ಶ್ರೇಷ್ಠವಿದೆ. ಆಚಾರ ಉತ್ಕೃಷ್ಟವಾಗಬೇಕೆಂಬ ಹಂಬಲದಿಂದ ಸಾಹಿತ್ಯದ ಕೃಷಿಯನ್ನು ಋಷಿಯಂತೆ ಮುನ್ನಡೆಸುತ್ತಿದ್ದಾರೆ.

ಪುಟ ಸಂಖ್ಯೆ ಹೆಚ್ಚಿಸಲು ಬರೆಯದೆ, ಪುಟಕ್ಕಿಟ್ಟ ಚಿನ್ನದಂತೆ ಸ್ಪಷ್ಟವಾಗಿ ಕಾಸಿದ್ದಾರೆ, ಶೋಸಿದ್ದಾರೆ, ಯೋಚಿಸಿದ್ದಾರೆ, ಬರೆದಿದ್ದಾರೆ ದಾಸೀಮಯ್ಯ ಹೇಳಿರುವಂತೆ.

ಸಿರಿಯನಿತ್ತೊಡೆವೊಲ್ಲೆ ಕರಿಯನಿತ್ತೊಡೆವೊಲ್ಲೆ
ಪಿರಿದಪ್ಪ ರಾಜ್ಯವನಿತ್ತೊಡೆವೊಲ್ಲೆ
ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆಯಿತ್ತೊಡೆ
ನಿಮ್ಮನೆ ಇತ್ತಂತೆ ಕಾಣಾ ರಾಮನಾಥ ॥

ಹಾಗೆ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ರೇಣುಕ ಭಗವತ್ಪಾದರ ಅಭಿಪ್ರಾಯದಂತೆ

ಅಜ್ಞಾನಮಲಿನಂ ಚಿತ್ತದರ್ಪಣಂ ಯೋ ವಿಶೋಧಯೇತ್ ।
ಪ್ರಜ್ಞಾವಿಭೂತಿಯೋಗೇನ ತಮಾಹುರ್ಗುರುಸುತ್ತಮಂ ॥

ಅಜ್ಞಾನವೆಂಬ ಮಲಿನದಿಂದ ಮನಸ್ಸು ಹೊಲಸುಳ್ಳ ಕನ್ನಡಿಯಂತಾಗಿದೆ. ದರ್ಪಣ ಜನರಿಗೆ ಅರ್ಪಣವಾಗಬೇಕೆಂದರೆ ಅದು ಶುದ್ಧವಾಗಿರಬೇಕು. ಕನ್ನಡಿ ಬೂದಿಯಿಂದ ಶುದ್ಧವಾಗುವಂತೆ ಅಜ್ಞಾನ, ಅಂಧಾರಾಕ ಪ್ರಜ್ಞೆಯಿಂದ ಸ್ವಚ್ಛವಾಗಬೇಕಾಗಿದೆ. ಹಾಗೆ ಈ 'ಚೇತನ-ಸಂಕೀರ್ತನ' ಪ್ರಜ್ಞಾವಿಭೂತಿಯ ಗ್ರಂಥವಾಗಿದೆ.

ಈ ಗ್ರಂಥದಲ್ಲಿರುವ ನೂರಾರು ಕಥೆಗಳು, ಹಲವಾರು ಶ್ಲೋಕ ಸೂಕ್ತಿ ವಚನಗಳು ಸತ್ಯದರ್ಶನಕ್ಕೆ ಕನ್ನಡಿಯಾಗಿ ನಿಂತಿವೆ. ಪ್ರವಚನ ಶೈಲಿಯ ಆಧ್ಯಾತ್ಮಿಕ ಈ ಗ್ರಂಥ ಧರ್ಮಾಭಿಮಾನಿಗಳ ಕೈಗೆ ನೀಡುತ್ತಿರುವುದು ಸಂತಸದ ಸಂಗತಿ. ಅಷ್ಟೆ ಅಲ್ಲ ಕಾಲಕಾಲಕ್ಕೆ ಇವರಿಂದ ಇನ್ನೂ ಹಲವಾರು ಕೃತಿಗಳು ಹೊರಬರಲೆಂದು ಹಾರೈಸುವೆವು. ಅಲ್ಲದೆ ಧರ್ಮಾಭಿಮಾನಿಗಳು ಇವರ ಶ್ರಮ ಸಾರ್ಥಕಪಡಿಸಿಕೊಳ್ಳಲೆಂದು ಆಶಿಸುವೆವು.

ಇತ್ಯನಂತಶಿವಾಶಿಷ:

ಶ್ರೀ ಪ್ರಾ. ಬ್ರ. ವಾಮದೇವಾಚಾರ್ಯ



**ಶ್ರೀ ಷ॥ ಬ್ರ॥ ಮರುಳ ಮಹಾಂತ**
**ಶಿವಾಚಾರ್ಯ ಮಹಾಸ್ವಾಮಿಗಳು**
**ವಕ್ಕಲಿಗ ಹಿರೇಮಠ, ಸಗರ,**
**ಶಹಪೂರ ತಾ॥, ಯಾದಗಿರಿ ಜಿಲ್ಲೆ**

## ಆಶೀರ್ವಚನ

"ಇದು ಇದ್ದವರ ಕಥೆಯಲ್ಲ, ಇದ್ದು ಸತ್ತವರ ಕಥೆ! ಸತ್ತು ಇದ್ದವರ ಕಥೆ....! ಎಂಬ ಬೆನ್ನಗವಿತೆಯೊಂದನ್ನು "ಪಶು-ರುದ್ರಭೂಮಿ" ಕಾವ್ಯನಾಮಾಂಕಿತ ವೇ.ಮೂ. ಕು.ಮ. ಫಾಲಾಕ್ಷಯ್ಯ ಶಾಸ್ತ್ರಿಗಳು ಈ ಹೊತ್ತಿಗೆಯ ಹಿಂಪುಟದಲ್ಲಿ ಬರೆದು ಈ ಗ್ರಂಥದಲ್ಲಡಗಿರುವ ಸಾರವನ್ನು ಆ ಕವಿತೆಯಲ್ಲಿ ವ್ಯಕ್ತಪಡಿಸಿರುತ್ತಾರೆ.

ದೃಷ್ಟಿಪೂತಂ ನ ಸೇತಪಾದಂ ವಸ್ತ್ರಪೂತಂ ಪಿಬೇಜಲಂ
ಶಾಸ್ತ್ರಪೂತಂ ವೇದವಾಕ್ಯಂ ಮುನಪೂತಂ ಸಮಾಚರೇ ॥

ನೋಡಿ ಹೆಜ್ಜೆ ಇಡು, ಸೋಸಿ ನೀರು ಕುಡಿ, ಯೋಚಿಸಿ ಮಾತನಾಡು ಎಂಬ ಶ್ಲೋಕಾರ್ಥದಂತೆ ಮಾನವ ಜನ್ಮಕ್ಕೊಂದು ಅರ್ಥವಿದೆ. ಆ ಅರ್ಥ ಪಾರಮಾರ್ಥ. ಈ ಹೊತ್ತಿಗೆಯಲ್ಲಡಗಿರುವ ಮಹದರ್ಥ.

ಸಿದ್ಧಯ್ಯ ಪುರಾಣಿಕರು ಹೇಳುತ್ತಾರೆ, "ಕೋಗಿಲೆಗೆ ರಾಗಯೋಗ, ದುಂಬಿಗೆ ಪರಾಗಯೋಗ, ಸರ್ಪಕ್ಕೆ ಪವನಯೋಗ, ನವಿಲಿಗೆ ನಾಟ್ಯಯೋಗ" ಎಂತೆಂದು. ಹಾಗೆ ಒಮ್ಮೆ ಪರಮಾತ್ಮನ ಸಂಬಂಧವನ್ನು ಕಳೆದುಕೊಂಡು ಬಂದಂತಹ ಜೀವಾತ್ಮನೂ ಸಹ ಪುನಃ ಪರಮಾತ್ಮನಲ್ಲಿ ಯೋಗವಾಗಬೇಕಾಗಿದೆ. ಇದನ್ನೇ ಪಶು-ರುದ್ರಭೂಮಿ ಕಾವ್ಯನಾಮಾಂಕಿತ ವೇ.ಮೂ. ಕು.ಮ. ಫಾಲಾಕ್ಷ ಶಾಸ್ತ್ರಿಗಳು ಈ "ಚೇತನ-ಸಂಕೀರ್ತನ" ಎಂಬ ಈ ಗ್ರಂಥದಲ್ಲಿ ಬರೆದು ಬೀರಿರುವುದು.

ಇವರಿಂದ ಈಗಾಗಲೇ ಅನೇಕಾನೇಕ ಗ್ರಂಥಗಳು ಹೊರಬಂದಿವೆ. ಅವುಗಳೊಂದಿಗೆ ಈ ಗ್ರಂಥವೂ ಸಹ ಲೋಕಾರ್ಪಣಗೊಳ್ಳುತ್ತಿರುವುದು ನಮಗೆ ಸಂತಸ ತಂದಿದೆ. ಅಷ್ಟೇ ಅಲ್ಲ ಮುಂದೆಯೂ ಸಹ ಇವರಿಂದ ಇನ್ನೂ ಅನೇಕಾನೇಕ ಗ್ರಂಥಗಳು ಹೊರಬರಲೆಂದು ಆಶಿಸುತ್ತೇವೆ.

ಇತ್ಯನಂತಶಿವಾಶಿಷಃ

[signature]

# ಮುನ್ನುಡಿ



"ಯತೋಭ್ಯುದಯ ನಿ: ಶ್ರೇಯಸ: ಸಿದ್ಧಿ ಸ: ಧರ್ಮ" ಯಾವುದು ಇಹಲೋಕದ ಸಕಲ ಶ್ರೇಯಸ್ಸುಗಳನ್ನು ಕೊಟ್ಟು ಮು ಸಾಧಕನ ಕೈಹಿಡಿದು, ನೀಶ್ರೇಯಸ್ಕರವಾದ ಭಗವಂತನ ಬಳಿ ಕರೆದೊಯ್ಯುವುದೋ ಅದು ನಿಜವಾದ ಧರ್ಮ. ಇದು ನಮ್ಮ ಋಷಿಮುನಿಗಳು ಲೋಕ ಕಲ್ಯಾಣಾರ್ಥಕ್ಕಾಗಿ ವ್ಯಾಖ್ಯಾನಿಸಿರು ಧರ್ಮೋಕ್ತಿ.

ಇವರ ಅಪ್ಪಣೆಯಂತೆ ಜಗತ್ತಿನಲ್ಲಿ ಸದ್ಧರ್ಮವನ್ನು ಪರಿಪಾಲಿಸಿಕೊಂಡು ಬರುತ್ತಿರುವ ಏಕೈಕ ರಾಷ್ಟ್ರ ಭಾರತ. ಅಂತೆಯೇ ವಿಶ್ವದ ಸಕಲ ರಾಷ್ಟ್ರಗಳ ಭಾರತ ದೈವೀಗುಣ ಸಂಪನ್ನತೆಯ ಆಗರವಾಗಿದೆ. ದೇವರ ಅಸ್ತಿತ್ವಕ್ಕೆ ಶಿಖರಪ್ರಾಯವೆನಿಸಿ ಆದ್ದರಿಂದ ವಿದೇಶಿಯರ ಭಾವನೆಯಲ್ಲಿ ಈ ದೇಶ "ದೇವರ ಮನೆ" ಎಂದು ಹರಸಿಕೊಂಡಿ ಅದರಲ್ಲೂ ಭಾರತ ದೇಶದಲ್ಲಿರುವ ಕನ್ನಡನಾಡಿಗೆ (ಕರ್ನಾಟಕಕ್ಕೆ) ವಿಶೇಷ ಸ್ಥಾನವಿದೆಯೆಂದು ಅತಿಶಯೋಕ್ತಿಯಾಗಲಾರದು. ಅದಕ್ಕೆ ಸಾಕ್ಷಿ ಹಿಂದೆ ಆಗಿಹೋದ ಬಸವಾದಿ ಶಿವಶರಣರು, ದಾಸರು, ಸಂತಮಹಾಂತರು. ಇಲ್ಲಿಯ ಮಣ್ಣಿನ ಕಣಕಣಗಳಲ್ಲೂ ಧರ್ಮ ಆಧ್ಯಾತ್ಮ ಪ್ರತಿಬಿಂಬಿಸುತ್ತಿದೆ. ಆದ್ದರಿಂದ ಇಲ್ಲಿನ ನರರು ಹರನಾಗಿ ಹೋಗಿದ್ದಾರೆ, ಹೋಗುತ್ತಿದ್ದಾ ಹೋಗುವವರೂ ಸಹ. ಇದಕ್ಕೆ ಸಾಕ್ಷಿ ಬಸವಣ್ಣನ ಈ ವಚನದ ಒಂದೆರಡು ಸಾಲುಗಳು "ವಿಷಯವೆಂಬ ಹಸುರೆನ್ನ ಮುಂದೆ ತಂದು ಪಸರಿಸಿದೆಯಯ್ಯಾ, ಪಶುವೇನು ಬಲ್ಲದು ಹಸಿರೆಂದೆಣಿಸುವುದು..." ಎಂತೆಂದು.

ಹೀಗೆ ಪ್ರಶ್ನಿಸಿಕೊಳ್ಳುವುದು ಅಂದರೆ ಆತ್ಮಾವಲೋಕನ ಮಾಡಿಕೊಳ್ಳುವುದು ಈ ಮಣ್ಣಿನ ಗುಣ. ಆದ್ದರಿಂದ ಈ ನಾಡಿನಲ್ಲಿ ದಾರ್ಶನಿಕರು, ಶರಣರು, ಸಂತರು, ಮಹಾಂತರು ಉಪದೇಶ ನೀಡಿರುವ ವೇದಾಗಮ ಉಪನಿಷತ್ತುಗಳು ಸಾಹಿತ್ಯ ಹಾಗೂ ಪುರಾಣ ಪುಣ್ಯಕಥೆಗಳು ಜೀವಾತ್ಮನಿಗೆ ಅಂಟಿಕೊಂಡಿರುವ ಪಾಶವೀ ಕೃತ್ಯಗಳನ್ನು ಕಟ್ಟಿಹಾಕಿ ಮಾನವನನ್ನು ಮಹದೇವನನ್ನಾಗಿ, ಜೀವನನ್ನು ಶಿವನನ್ನಾಗಿ, ನರನನ್ನು ಹರನನ್ನಾಗಿ ಮಾಡು ಸೋಪಾನಗಳಾಗಿವೆ. ಈ ಕನ್ನಡನಾಡಿನ ಸಾಹಿತ್ಯ ಸಾರಸ್ವತ ಲೋಕವೇ ಹಾಗೆ. ಕಾಲ್ಪನಿಕತೆಯಿಂ ವೈಚಾರಿಕತೆಯತ್ತ, ವೈಚಾರಿಕತೆಯಿಂದ ವಾಸ್ತವಿಕತೆಯತ್ತ, ವಾಸ್ತವಿಕತೆಯಿಂದ ಆಧ್ಯಾತ್ಮದತ್ತ ಹೆಜ್ಜೆಗಳನ್ನಿರಿಸುವುದಾಗಿದೆ. ಅಂತಹ ಸಾಹಿತ್ಯದ ಸಾಹಿತಿಗಳ ಸಾಲಿನಲ್ಲಿರುವವರೇ ಈ ಗ್ರಂಥಕರ್ತೃರು.

ಪ್ರವಚನಾಚಾರ್ಯ "ಪಶು–ರುದ್ರಭೂಮಿ ಕಾವ್ಯನಾಮಾಂಕಿತ ವೇ.ಮೂ.ಕು.ಮ ಫಾಲಾಕ್ಷಯ್ಯ ಶಾಸ್ತ್ರಿಗಳವರು ಈ ಕೃತಿ ನೀಡುವ ಪೂರ್ವದಲ್ಲಿ ಈ ನಾಡಿನ ಧರ್ಮ ಜಿಜ್ಞಾಸುಗಳಿಗಾಗಿ "ಪರಮಾತ್ಮ–ಜೀವಾತ್ಮ–ದೇಹಾತ್ಮ" ಹಾಗೂ ಚಿದಾನಂದವಧೂತರ ದೇವಿ ಪುರಾಣವನ್ನು "ದೇಹವೇ ದೇವಿ" ಎಂಬ ಶೀರ್ಷಿಕೆಯಡಿಯಲ್ಲಿ ಪುರಾಣ ಪ್ರವಚನದ ಶೈಲಿಯಲ್ಲಿ

ಬರೆದು ಬೀರಿದ್ದಾರೆ. "ವೈಚಾರಿಕತೆ" ಎಂಬ ಮತ್ತೊಂದು ಗ್ರಂಥ. ಅಲ್ಲದೆ ತಮ್ಮ ದೀಕ್ಷಾ ಗುರುಗಳಾದ ಎಮ್ಮಿಗನೂರು ಮಹಂತರಮಠದ ಲಿಂಗೈಕ್ಯ ಶ್ರೀ ಷ॥ ಬ್ರ॥ ಸಿದ್ಧಲಿಂಗ ಮಹಾಂತರ ಪುರಾಣವನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿರುವರು.

ಒಮ್ಮೆ ಈ ಗ್ರಂಥಕರ್ತೃ ವೇ.ಮೂ.ಕು.ಮ. ಫಾಲಾಕ್ಷಯ್ಯ ಶಾಸ್ತ್ರಿಗಳು ಸಂಗೀತದ ಕಾಶಿಯಂದೇ ಪ್ರಖ್ಯಾತಿ ಪಡೆದಿರುವ ಗದುಗಿನ "ಯುಗ ಪುರುಷ" ಗಾನಯೋಗಿ ಶಿವಯೋಗಿ ಲಿಂ॥ ಶ್ರೀ ಡಾ॥ ಪುಟ್ಟರಾಜ ಗವಾಯಿಗಳವರ ಪುಣ್ಯ ಸಂಸ್ಮರಣೋತ್ಸವದಲ್ಲಿ ಪಾಲ್ಗೊಂಡಿದ್ದಾಗ ಗದುಗಿನ ಅನೇಕ ಯುವ ಪುರಾಣ ಪ್ರವಚನಕಾರರು, ಕೀರ್ತನಾ ಕಲಾ ಬಳಗದ ಸ್ನೇಹಿತರು "ಶಾಸ್ತ್ರಿಗಳೇ ನಿಮ್ಮ ಪುರಾಣ ಪ್ರವಚನದ ಹಾಗೂ ಸಾಧನೆಯ ಅನುಭವ ಮತ್ತು ಅನುಭಾವ ಹಾಗೂ ನಿಮ್ಮಲ್ಲಡಗಿರುವ ಕಥೆಕವನಗಳು ನಮ್ಮಂತಹ ಯುವಕರಿಗೆ ಅವಶ್ಯವಿದೆ. ಅವುಗಳನ್ನೊಳಗೊಂಡು ಶಿವ ಪುರಾಣದ (ಆತ್ಮಚರಿತ್ರೆಯ) ಶೈಲಿಯಲ್ಲಿ ಬರೆಯಬೇಕೆಂದು ಕೇಳಿಕೊಂಡರು. ಅದಕ್ಕೆ ಪ್ರತಿಫಲವೆಂಬಂತೆ ಪಂಡಿತ ಶಾಸ್ತ್ರೀಜಿಯವರು "ಚೇತನ-ಸಂಕೀರ್ತನ" ಎಂಬ ಈ ಗ್ರಂಥವನ್ನು ಜಿಜ್ಞಾಸುಗಳ ಕೈಗಿಡುತ್ತಿರುವುದು ನಮಗೆ ಸಂತಸ ತಂದಿದೆ.

ಅಸಮತೆಯಲಿ ಸಮತೆಯನು ವಿಷಯದಲಿ ಮೈತ್ರಿಯನು<br>
ಅಸಮಂಜಸದಲ್ಲಿ ಸಮಂಜಸದ ಸೂತ್ರವನು<br>
ಏತನಮಯ ಸಂಸಾರದಲಿ ವಿನೋದವನು<br>
ಕಾಣುವ ರಸಿಕತೆ ಯೋಗ ಮಂಕುತಿಮ್ಮ

ಈ ಮೇಲೆ ಡಿ.ವಿ.ಜಿ.ಯವರು ತಿಳಿಸಿರುವಂತೆ ಈ ಗ್ರಂಥದಲ್ಲಿ ಲೌಕಿಕ ಅಲೌಕಿಗಳೆರಡರ ಸಮತೆಯಿದೆ. ನರ ಹರನಾಗಲು ಅವಶ್ಯವೆನಿಸಿದ ನೂರಾಗು ಕಥೆಕವನ, ಶ್ಲೋಕ ವಚನಗಳಿವೆ. ಇಂತಹ ಗುರು ಕೃಪಾಭೂಷಿತ ಪ್ರವಚನಾಚಾರ್ಯ ವೇ.ಮೂ.ಕು.ಮ. ಫಾಲಾಕ್ಷಯ್ಯ ಶಾಸ್ತ್ರಿಗಳವರ ಪ್ರತಿಭೆಯನ್ನು ಜ್ಞಾನ ಚಕ್ಷುವಿನಿಂದ ನೋಡಿ ಗುರುತಿಸಬೇಕಷ್ಟೆ. "ಜನ ಕೇಳಲೆಂದು ಕೋಗಿಲೆ ಹಾಡುವುದಿಲ್ಲ"ವಾದರೂ ಅದರ ಕಂಠಸಿರಿಯನ್ನು ಮೆಚ್ಚಿಕೊಳ್ಳುವುದು ಪ್ರಾಜ್ಞರ ಕರ್ತವ್ಯವಾಗಿದೆ. ಆದ್ದರಿಂದ ಗುಣಗ್ರಹಣಾಶಕ್ತಿ ನಾಡಿನ ಓದುಗರಲ್ಲಿ ಬೆಳೆಯಲಿ. ಹಾಗೆ ಇವರ ಸಾಹಿತ್ಯ ಓದಿ ಗೌರವಿಸುವ ಭಾಗ್ಯ ನಮ್ಮದಾಗಲಿ. ಅಷ್ಟೆ ಅಲ್ಲ ಇವರಿಂದ ಕಾಲಾನುಕಾಲಕ್ಕೆ ಇನ್ನೂ ಅನೇಕ ಗ್ರಂಥಗಳು ಮೂಡಿಬರಲೆಂದು ಆ ಗುರುವಿನಲ್ಲಿ ಪ್ರಾರ್ಥಿಸುತ್ತೇನೆ.

ಮಹಿಮಾಶಂಕ್ರಪ್ಪ ಶಾಸ್ತ್ರಿ ಉಗ್ಗಿನ ಕೇರಿ

ವೀರೇಶ್ವರ ಪುಣ್ಯಾಶ್ರಮ<br>
ಗದಗ<br>
**9880162597**



ಶ್ರೀಮಾನ್ ವೇ। ಮೂ। ಕೆ.ಎಂ. ವೀರಭದ್ರಯ್ಯನವರು ಉಪಾಧ್ಯಾಯರಾಗಿ ನಿವೃತ್ತರಾದ ಸಂದರ್ಭದಲ್ಲಿ ಪಾಪಿನಾಯಕನಹಳ್ಳಿಯ ಕರ್ನಾಟಕ ಯುವಕ ಸಂಘದ ವತಿಯಿಂದ ಬೀಳ್ಕೊಡುಗೆ ಸಮಾರಂಭದ ಸವಿನೆನಪು ದಿನಾಂಕ : 10-7-1977



# ಸ್ಮರಣಾಂಜಲಿ

ಭಗವಂತ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ! ಜೊತೆಗೆ ಗುರುಧರ್ಮವನ್ನು ಹುಟ್ಟು ಹಾಕಿದ. ಈ ಜಗತ್ತಿನಲ್ಲಿ ಗುರುವೆನ್ನುವವನಿಲ್ಲದಿದ್ದರೆ ಅಜ್ಞಾನವೆಂಬ ಕತ್ತಲು ಆವರಿಸುತ್ತಿತ್ತು. ಆಗ ಪ್ರತಿಯೊಬ್ಬರೂ ಹೊಡೆದಾಡಿ ಬಡಿದಾಡಿ ಸಾಯುತ್ತಿದ್ದರು. ಬಹುಶ: ಆಗ ಶಿವ ನಿರ್ಮಿತ ಈ ಜಗತ್ತು ಉಳಿಯುತ್ತಿರಲಿಲ್ಲ.

"ಗು" ಎಂದರೆ ಗುಣವನ್ನು, "ರು" ಎಂದರೆ ರೂಪಿಸುವವನು. ಅರ್ಥಾತ್ ಗುಣಗಳನ್ನು ರೂಪಿಸುವವನು "ಗುರು". ಇದು ನಾನು ಹೇಳುವ ಮಾತಲ್ಲ. ನಾವು ಚಿಕ್ಕವರಿರುವಾಗ ನಮ್ಮ ಗ್ರಾಮದ (ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲೂಕು, ಪಾಪಿನಾಯಕನಹಳ್ಳಿಯ) ಅಂದಿನ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ! ಲಿಂಗೈಕ್ಯ ವೇ.ಮೂ. ಶ್ರೀ ಕೆ.ಎಂ. ವೀರಭದ್ರಯ್ಯ ಗುರುಗಳು ಹೇಳುತ್ತಿದ್ದ ನುಡಿಮುತ್ತಿದು. ಅವರು ಬೇರಾರೂ ಅಲ್ಲ! ಈ ಗ್ರಂಥಕರ್ತೃಗಳಾದ 'ಪಶು-ರುದ್ರಭೂಮಿ' ಕಾವ್ಯನಾಮಾಂಕಿತ ವೇ.ಮೂ. ಶ್ರೀ ಕು.ಮ. ಫಾಲಾಕ್ಷಯ್ಯ ಶಾಸ್ತ್ರಿಗಳವರ ಜನ್ಮದಾತರು.

ಗ್ರಂಥಕರ್ತೃರು ಈ ಗ್ರಂಥವನ್ನು ತಮ್ಮ ಮಾತಾಪಿತರಿಗೆ ಸಮರ್ಪಿಸಿರುವ ಕಾರಣ ಅಂದಿನ ಆ ನಮ್ಮ ಗುರುಗಳಲ್ಲಿ ಕಂಡುಬಂದ ಸಾಮಾಜಿಕ ಕಳಕಳಿಯ ಬಗೆಗಿನ ಒಂದೆರಡು ವಿಷಯಗಳನ್ನಿಲ್ಲಿ ವ್ಯಕ್ತಪಡಿಸುತ್ತೇನೆ.

ಸುಮಾರು ಐವತ್ತು ವರ್ಷಗಳ ಕೆಳಗಿನ ಮಾತು. ಅಂದಿನ ದಿನಗಳಲ್ಲಿ ಯಾರೊಬ್ಬರು ಎಸ್.ಎಸ್.ಎಲ್.ಸಿ. (ಮ್ಯಾಟ್ರಿಕ್) ಮುಗಿಸಿದ್ದರೆಂದರೆ, ಅಂದಿಗೆ ಅದು ಬಹಳ ದೊಡ್ಡ ವಿದ್ಯೆ. ಅಂತಹ ದಿನಗಳಲ್ಲಿ ನಮ್ಮ ಪಾಪಿನಾಯಕನಹಳ್ಳಿ ಶಾಲೆಯಲ್ಲಿ ಶಿಕ್ಷಣದ ಮಟ್ಟವಿದ್ದದ್ದು ನಾಲ್ಕನೆಯ ತರಗತಿ ಮಾತ್ರ. ಅಂದು ಇದ್ದಂಥವರು ಮಾತ್ರ ಹೆಚ್ಚಿನ ವಿದ್ಯಾಭ್ಯಾಸಕ್ಕೆ ನಗರಗಳಿಗೆ ಹೋಗುತ್ತಿದ್ದರು. ಅಂದು ಇಂದಿನ ದಿನಗಳಂತೆ ಹೊಸದಾಗಿ ಶಾಲೆಗಳನ್ನು ತೆರೆಯುವಷ್ಟು ಸುಲಭದ ಮಾತಾಗಿರಲಿಲ್ಲ. ಆದರೂ ಇಂತಹ ಸಂದಿಗ್ಧ ಪರಿಸ್ಥಿತಿ ಇರುವ ಆ ದಿನಗಳಲ್ಲಿ ಪರಮಪೂಜ್ಯ ವೀರಭದ್ರಯ್ಯ ಗುರೂಜಿಯವರು ಕಂಕಣಬದ್ಧರಾಗಿ ನಿಂತು ಹಿರಿಯ ಪ್ರಾಥಮಿಕ ಶಿಕ್ಷಣ ಅಂದರೆ ಏಳನೇ ತರಗತಿಯವರೆವಿಗೂ ಶಾಲೆ ಮುಂದುವರೆಸಿಕೊಂಡು ಹೋಗುವಂತಾಗಲು ಅವರು ಪಟ್ಟ ಶ್ರಮ ಸಣ್ಣದಲ್ಲ. ಮೊದಲನೆಯದಾಗಿ ಪ್ರತಿಯೊಂದು ತರಗತಿಗಳಲ್ಲಿ ವಿದ್ಯಾರ್ಥಿಗಳ ಸಂಖ್ಯಾಮಟ್ಟ ಕುಸಿಯದಂತೆ ಕಾಪಾಡಿಕೊಂಡು ಬರುವುದಾಗಿತ್ತು. ಇದು ಅಂದಿನ ದಿನಗಳಲ್ಲಿ ಅಷ್ಟು ಸುಲಭದ ಮಾತಾಗಿರಲಿಲ್ಲ! ಯಾಕೆಂದರೆ ಅಂದಿನ ಗ್ರಾಮೀಣ ಜನರಿಗೆ ವಿದ್ಯೆಯೆಂಬುದು ನೈವೇದ್ಯಯಾಗಿತ್ತು. ಇಂತಹ ಪರಿಸ್ಥಿತಿಯಲ್ಲೂ ಛಲದಂಕಮಲ್ಲರಂತೆ ಹೋರಾಟ ನಡೆಸಿ ಸುತ್ತಮುತ್ತಲಿನ ಹಳ್ಳಿಗಳಿಂದ ವಿದ್ಯಾರ್ಥಿಗಳನ್ನು ಕರೆತಂದರು. ಮತ್ತೆ ಅವರನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು; ಊಟದ ಸೌಲಭ್ಯವನ್ನು ಸ್ವತ: ತಾವೇ ಒದಗಿಸಿದ್ದರು. ಅಂದು ಹೊಸದಾಗಿ ಮದುವೆಯಾಗಿದ್ದವರನ್ನೂ ಸಹ ನೊಂದಣಿ ಮಾಡಿಕೊಂಡರು. ಇಂದು ಅವರೆಲ್ಲಾ ಇದ್ದಾರೆ ಹೆಸರು ಬೇಡ. ಒಟ್ಟಾರೆ ತರಗತಿಗಳಲ್ಲಿನ ಸಂಖ್ಯಾಮಟ್ಟ ಕುಸಿಯದಂತೆ ನೋಡಿಕೊಂಡರಲ್ಲದೆ

ನಮ್ಮ ಗ್ರಾಮದಲ್ಲಿ ಹಿರಿಯ ಪ್ರಾಥಮಿಕ ಶಾಲೆಯನ್ನು ಗಟ್ಟಿಗೊಳಿಸಿದರು.

ಅಷ್ಟಾದರೂ ಅವರಲ್ಲಿನ ಆಸೆ ಪೂರ್ಣಗೊಂಡಿರಲಿಲ್ಲ. ಯಾಕೆಂದರೆ ಪರಮಪೂಜ್ಯ ಗುರೂಜಿಯವರು ನಿವೃತ್ತರಾಗಿದ್ದ ಸಂದರ್ಭದಲ್ಲಿ ನಾನಾಗ ನಮ್ಮ ಗ್ರಾಮದ ಕರ್ನಾಟಕ ಯುವಕ ಸಂಘದ ಅಧ್ಯಕ್ಷನಿದ್ದೆ. ಆಗ ನಾನೇ ಪರಮಪೂಜ್ಯರ ಬೀಳ್ಕೊಡಿಗೆ ಸಮಾರಂಭವನ್ನು ಏರ್ಪಡಿಸಿದ್ದೆ ಆ ಸಂದರ್ಭದಲ್ಲಿ ಗುರೂಜಿಯವರು ತಮ್ಮ ಜೇಬಿನಿಂದ ನೂರು ರೂಪಾಯಿಗಳನ್ನು ತೆಗೆದು, "ನನಗೆ ಈ ಗ್ರಾಮದಲ್ಲಿ ಪ್ರೌಢಶಾಲೆಯ ಶಿಕ್ಷಣ ಕಣ್ತುಂಬ ನೋಡಬೇಕೆಂಬ ಕನಸಿತ್ತು. ಆದರೆ ಅದು ನನ್ನಿಂದ ಸಾಧ್ಯವಾಗಲಿಲ್ಲ. ದೈವೇಚ್ಛೆ ಏನಿತ್ತೋ ಅದು ನಡೆದಿದೆ. ಆದರೆ ಮುಂದೊಂದು ದಿನ ನೀವು ಯುವಕರೆಲ್ಲಾ ಸೇರಿ ಆ ಪ್ರಯತ್ನ ಮಾಡಿರಿ. ಅದಕ್ಕಾಗಿ ಮೂಲಧನದ ರೂಪವಾಗಿ ಈ ನನ್ನ ನೂರು ರೂಪಾಯಿಗಳನ್ನು ತೆಗೆದುಕೊಳ್ಳಿರಿ. ಮುಂದೆ ಕಾರ್ಯ ಸಾಧಿಸಿರಿ" ಹೀಗೆ ಹೇಳಿ ನೂರು ರೂಪಾಯಿಗಳನ್ನು ಕೊಟ್ಟಿದ್ದರು.

ನೂರು ರೂಪಾಯಿ ಇಂದಿನ ಮಟ್ಟಕ್ಕೆ ಅದು ಸಣ್ಣದು. ಆದರೆ ಅಂದಿನ ಆ ನೂರು ರೂಪಾಯಿ ಇಂದಿನ ಹತ್ತು ಸಾವಿರ ರೂಪಾಯಿಗಳಿಗೆ ಸಮನಾಗಿರಲ್ಲಿಕ್ಕಿಲ್ಲ. ಅಂದು ಗುರೂಜಿಯವರಿಗೆ ಅವರದೇ ಆದಂತಹ ಅನೇಕ ಕಷ್ಟಕಾರ್ಪಣ್ಯಗಳಿದ್ದವು. ಅವರಿಗೆ ತಮ್ಮ ನಿವೃತ್ತಿವೇತನದ ಆದಾಯವೊಂದು ಬಿಟ್ಟರೆ ಮತ್ತಾವ ಮೂಲಗಳಿಂದಲೂ ಆದಾಯಗಳಿರಲಿಲ್ಲ. ಒಂಬತ್ತು ಜನಗಳಿರುವ ಸಂಸಾರ ಬೇರೆ. ಈ ಎಲ್ಲದರ ಮಧ್ಯೆ ಅವರು ಮನಸ್ಸು ಮಿಡಿಯುತ್ತಿದ್ದುದು ಗ್ರಾಮದ ಶ್ರೇಯೋಭಿವೃದ್ಧಿಗಾಗಿ. ಇಂಥವರ ಜ್ಯೇಷ್ಠ ಪುತ್ರರೇ ಈ ಗ್ರಂಥಕರ್ತೃ 'ಪಶು-ರುದ್ರಭೂಮಿ' ಕಾವ್ಯ ನಾಮಾಂಕಿತ ಶ್ರೀ ವೇ.ಮೂ. ಕು.ಮ. ಫಾಲಾಕ್ಷಯ್ಯ ಶಾಸ್ತ್ರಿಗಳು.

ಸತ್ಯ ಹಾಗೂ ಸತ್ಯವಂತರನ್ನು ನಾವು ಇದ್ದಾಗ ಸತ್ಕರಿಸುವುದಿಲ್ಲ. ಅವರು ಸತ್ತನಂತರ ವೈಭವೀಕರಿಸುತ್ತೇವೆ. ಇದು ಸಾಮಾಜಿಕವಾಗಿ ಬಂದಂತಹ ಅನಿಷ್ಟ ಪದ್ಧತಿಯೋ ಅಥವಾ ಪ್ರಕೃತಿ ಧರ್ಮವೆನ್ನಬೇಕೋ ಗೊತ್ತಾಗುತ್ತಿಲ್ಲ? ಯಾಕೆಂದರೆ ವಿದ್ವತ್ತಿರುವವರನ್ನು ಸತ್ಕರಿಸದಿದ್ದರೂ ಚಿಂತೆಯಿಲ್ಲ, ಬೆಳೆಯದಂತೆ ತುಳಿಯುವವರೂ ಸಹ ಇರುತ್ತಾರೆ. ಇದಕ್ಕೇನೆನ್ನಬೇಕೋ ಗೊತ್ತಾಗುತ್ತಿಲ್ಲ ಇಂಥೆಲ್ಲ ಸಮಸ್ಯೆಗಳ ಮಧ್ಯೆಯೂ, ತಮ್ಮ ಕಷ್ಟದ ಬದುಕಿನಲ್ಲೂ, ಹತ್ತಾರು ಧಾರ್ಮಿಕ ಪುಸ್ತಕಗಳನ್ನು ಬರೆದು ಬೀರಿದ್ದಾರೆ. ಗ್ರಂಥಕರ್ತರಿಗೆ ಆ ಭಗವಂತನು ಮತ್ತಷ್ಟು ಶಕ್ತಿ ಸಾಮರ್ಥ್ಯವನ್ನು, ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲೆಂದು ಪ್ರಾರ್ಥಿಸುತ್ತೇನೆ. ಅಷ್ಟೆ ಅಲ್ಲ ಗುರೂಜಿಯವರ ಆತ್ಮಚೇತನಕ್ಕೆ ಭಕ್ತಿಪೂರ್ವಕ ನಮನಗಳನ್ನು ಸಲ್ಲಿಸುತ್ತೇನೆ.

Veerabhadra Setty

– ಜಿ ವೀರಭದ್ರ ಶೆಟ್ಟಿ
ಪಾಪಿನಾಯಕನಹಳ್ಳಿ

# ತೋರಣ ನುಡಿ

ಭಗವಂತ ಅನಂತ, ಅನಂತತೆಯ ಮೂಲ ಶೂನ್ಯ. ಶೂನ್ಯದಿಂದ ಸರ್ವೋತ್ಪತ್ತಿ. ಪುನ: ಶೂನ್ಯದಲ್ಲಿಯೇ ಸರ್ವವೂ ಲಯ, ಶೂನ್ಯ ಮತ್ತು ಅನಂತತೆಗಳೆರಡಕ್ಕೂ ಅವಿನಾಭಾವ ಸಂಬಂಧವಿದೆ. ಈ ಶೂನ್ಯದ ದೋಷಪೂರಿತ ಸ್ಥಿತಿಯೆ ನಮಗೆ ಶಕ್ತಿಯಾಗಿ, ವಸ್ತುವಾಗಿ ಗೋಚರಿಸುತ್ತಿರುವುದು. ಇದನ್ನೇ ನಮ್ಮ ದಾರ್ಶನಿಕರು 'ಮಾಯೆ' ಎಂದು ಕರೆದಿರುವುದು.

ವಿಶ್ವಭೂಪಟದಲ್ಲಿ ಇಡೀ ಈ ಭೂಮಂಡಲವನ್ನು ಒಂದೇ ಒಂದು ಸಮುದ್ರ ವ್ಯಾಪಿಸಿಕೊಂಡಿದೆ. ಆ ಒಂದೇ ಸಮುದ್ರಕ್ಕೆ ನಾವುಗಳು ಅಲ್ಲಲ್ಲಿ ಒಂದೊಂದು ಹೆಸರನ್ನಿಟ್ಟುಕೊಂಡು ಬಂದಿದ್ದೇವೆ. ಹಾಗೆ ಇರುವ ಒಬ್ಬ ಭಗವಂತನನ್ನು ನಾವು ಅನೇಕ ಹೆಸರುಗಳಿಂದ ಕರೆದಿರುವುದು. ಆತ ರಾಷ್ಟ್ರ ರಾಷ್ಟ್ರಕೊಬ್ಬ, ಧರ್ಮ ಧರ್ಮಕೊಬ್ಬೊಬ್ಬ, ಜಾತಿ ಜಾತಿಗೊಬ್ಬೊಬ್ಬನಾಗಿ ಇಲ್ಲವೇ ಇಲ್ಲ. ಇರುವ ಆ ಒಬ್ಬ ಭಗವಂತನನ್ನು ಹಲವು ನಾಮಗಳಿಂದ ಕರೆದಿದ್ದೇವೆ. ಇದು ವಾದಾತೀತ; ದ್ವಂದ್ವಾತೀತ ನಿಲುವು. ಪರಿಶುದ್ಧವಾದ ಅರಿವು.

"ಪಿಂಡಪಿಂಡೇರ್ಮತಿರ್ಭಿನ್ನ:" ಎಂಬುದನ್ನರಿಯದೆ, ತನ್ನದೇ ಸತ್ಯವೆಂದು ವಾದಿಸುವುದು ಅಜ್ಞಾನ. ಇದು ಶ್ರೇಯೋ ಮಾರ್ಗವಲ್ಲ. ಪ್ರೇಯೋಮಾರ್ಗ. ಯಾಕೆಂದರೆ ಅವರವರು ಅವರವರ ಧರ್ಮ, ಬುದ್ಧಿ, ಭಾವ, ಭಾಷೆಗಳಿಗನುಸಾರವಾಗಿ ಕರೆದುಕೊಂಡು ಬಂದಿರುತ್ತಾರೆ.

ಜಗತ್ತಿನಲ್ಲಿ 3780 ಭಾಷೆಗಳಿವೆ ಎಂದು ಹೇಳುತ್ತಿದ್ದಾರೆ. ಉದಾಹರಣೆಗೆ ವಸ್ತುವೊಂದಿದೆ ಎಂದುಕೊಳ್ಳೋಣ. ಅದು ಬಾಳೆಹಣ್ಣು ಆಗಿರಲಿ. ಆ ಬಾಳೆಹಣ್ಣನ್ನು ಅರಟಿಪಂಡು, ಬನಾನಾ, ಖೇಲಾ ಹೀಗೆ ಅವರವರು ಅವರವರ ಭಾಷೆಗಳಲ್ಲಿ ಕರೆಯುವರು. ಆದರೆ ನಮಗಿಲ್ಲಿ ಕಾಣಬರುವುದು ಭಾಷೆಯಲ್ಲಿ ಬದಲಾವಣೆ, ವಸ್ತುವಿನಲ್ಲಲ್ಲ. ಕರೆವ ಭಾಷೆ ಬದಲಾದಕ್ಷಣ ಆ ವಸ್ತುವಿನಲ್ಲಿರುವ ರೂಪ, ರುಚಿ, ಗುಣಗಳೇನೂ ಬದಲಾಗಲಿಲ್ಲ. ಅವು ಹಾಗೇ ಇದ್ದವು, ಇರುತ್ತವೆಯೂ ಸಹ. ಹಾಗೆ ಭಗವಂತನು. ಆತನನ್ನು ಯಾವ ಭಾಷೆಯಲ್ಲಿ ಕರೆದರೂ ಆತ ಒಪ್ಪಿಕೊಳ್ಳುತ್ತಾನೆ, ಅಪ್ಪಿಕೊಳ್ಳುತ್ತಾನೆ. ಆತ ಭಾಷಾಪ್ರಿಯನಲ್ಲ. ಭಾವನಾಪ್ರಿಯನು.

ಭಗವಂತನನ್ನು ಕಾಣಬೇಕೆಂಬ ಉತ್ಕಟ ಬಯಕೆವುಳ್ಳವ ಯಾರೊಬ್ಬರ ಒತ್ತಡಕ್ಕೆ ಮಣಿದು ಯಾವುದೊಂದು ಧರ್ಮವನ್ನು ಸ್ವೀಕಾರ ಮಾಡಬೇಕಾಗಿಲ್ಲ. ಎಲ್ಲಾ ಮೂಲೆಗಳಿಂದ ಹರಿದು ಬರುವ ಸದ್ವಿಷಯಗಳ ಬಗ್ಗೆ ಸ್ವತ: ಚಿಂತನ ಮಂಥನ ಮಾಡಿ ತನ್ನ ಅಂತರ್ಬೋದೆ ಹೇಳಿದ ಮಾರ್ಗ ಹಿಡಿಯಬೇಕು. ತಾ ಹೇಳಿದ್ದೇ ನಿಜವೆಂದು ವಾದಿಸಿ ಜನರನ್ನು ಬಲತ್ಕಾರದಿಂದ ತನ್ನ ಮಾರ್ಗದತ್ತ ಎಳೆದುಕೊಳ್ಳುವವ ನಿಜ ಗುರುವಲ್ಲ. ಅಂಥವನೊಬ್ಬ ಉಗ್ರಗಾಮಿ, ಭಯೋತ್ಪಾದಕ. ಯಾರೊಬ್ಬರನ್ನೂ ಬಲತ್ಕರಿಸದೆ ಸತ್ಯವನ್ನಷ್ಟೇ ಬಿತ್ತರಿಸಬೇಕು. ಅಂಥವರೇ ನಿಜವಾದ ಗುರುಗಳು.

ನನ್ನ ಬುದ್ಧಿಭಾವ ಆಚಾರ ವಿಚಾರಗಳೆಲ್ಲವುದರಲ್ಲಿಯೂ ವೀರಶೈವದ ಸಂಸ್ಕಾರಗಳು

ಅಂಟಿಕೊಂಡಿವೆ. ಅದು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು. ಹಾಗೆ ಆ ಧರ್ಮದ ಬಗ್ಗೆ ಪ್ರವಚನ ಮಾಡುವುದೂ ನನ್ನ ವೃತ್ತಿ. ಆದ್ದರಿಂದ ಆ ಧರ್ಮೀಯರು ಜಾತಿ ಗದ್ದಲದಿಂದ ಹೊರಬರಲೆಂದು ನಾನು ಪ್ರವಚನಗಳಲ್ಲಿ ಹೇಳುವ ಮೊದಲ ಮಾತು ಹೀಗಿದೆ!

"ನಿಜ ವೀರಶೈವರು ನೀವೆನಿಸಿಕೊಳ್ಳಬೇಕಿದ್ದರೆ, ಸಂಘ ಕಟ್ಟುವ ಪೂರ್ವ ಲಿಂಗ ಕಟ್ಟಿರಿ! ಲಿಂಗ ಕಟ್ಟುವ ಪೂರ್ವ ಲಿಂಗ ಕಟ್ಟಿಕೊಳ್ಳುವುದ್ಯಾಕೆ ಎಂಬುದನ್ನು ತಿಳಿದುಕೊಳ್ಳಿರಿ. ಆಗ ತಾನೇ ಸಂಘಕ್ಕೆ, ಲಿಂಗಕ್ಕೆ, ಲಿಂಗವಂತರಿಗೆ ಬೆಲೆ ಬರುವುದು" ಎಂತೆಂದು.

ಇಂದು ಜಾತಿಯ ಹೆಸರಿನ ಸಂಘ ಸಂಸ್ಥೆಗಳಿಗೇನೂ ಬರವಿಲ್ಲ. ಆದರೆ ಆ ಸಂಘ ಸಂಸ್ಥೆಗಳಲ್ಲಿ ಹಾಗೂ ಅಲ್ಲಿರುವ ಜನರಲ್ಲಿ ಆಯಾ ಧರ್ಮದ ಆಚಾರ ವಿಚಾರಗಳ ಬರ ಎದ್ದು ಕಾಣುತ್ತಿರುವುದು. ಅಷ್ಟೇ ಅಲ್ಲ ಅಲ್ಲಿ ಕಾಣಬರುವುದು ಜಾತಿಯ ವೇಷ, ಅಧಿಕಾರದ ಸಂಘರ್ಷ. ಅರ್ಥಾತ್ ಜಾತಿಯ ರಾಜಕಾರಣಕ್ಕಾಗಿ ಜನಸಾಮಾನ್ಯರಿಂದ ಹಣದ ವಸೂಲಿ. ಹಣವೃದ್ಧಿಯಾದಂತೆಲ್ಲ ಅಧಿಕಾರಕ್ಕಾಗಿ ಕಿತ್ತಾಟ. ಧರ್ಮದಿಂದ ದೈವತ್ವ ಪ್ರಾಪ್ತಿಯಾಗಬೇಕೇ ಹೊರತು, ಪ್ರೇತತ್ವ ಪ್ರಾಪ್ತಿಯಾಗಬಾರದು. ಇಂದು ಇಂತಹ ಸಂಘಸಂಸ್ಥೆಗಳು ಹುಟ್ಟಿಕೊಳ್ಳುತ್ತಿರುವುದು ಸಮಾಜದ ಉದ್ಧಾರಕ್ಕಲ್ಲ. ದುಷ್ಕರ್ಮಿಗಳ ಬಲವರ್ಧನೆಗೆ. ಇಂತಹ ಸಂಘಸಂಸ್ಥೆಗಳು ಬೇಕೇ!!?

ಬಸವಣ್ಣ 12ನೇ ಶತಮಾನದಲ್ಲಿ ಅನುಭವ ಮಂಟಪವೊಂದನ್ನು ಸ್ಥಾಪಿಸಿದ. ಅದು ಬೇರೇನೂ ಅಲ್ಲ. ವೀರಶೈವರ (ಲಿಂಗಾಯತರ) ಧರ್ಮಾಭಿವೃದ್ಧಿಯ ಸಂಸ್ಥೆ. ಆ ಅನುಭವ ಮಂಟಪದೊಳಗೆ ಭವಿಗಳಾರಿಗೂ ಪ್ರವೇಶವಿರಲಿಲ್ಲ. ಕೇವಲ ದೀಕ್ಷಾಬದ್ಧ ಭಕ್ತರಿಗೆ ಮಾತ್ರ ಪ್ರವೇಶವಿತ್ತು. ಹಾಗೆ ಅದು ಜಾತಿಯ ಸಂಸ್ಥೆಯಾಗಿರಲಿಲ್ಲ. ನೀತಿಯ–ಜ್ಯೋತಿಯ ಸಂಸ್ಥೆಯಾಗಿತ್ತು. ಅಲ್ಲಿ ಎಲ್ಲ ಜಾತಿಯವರೂ ಇದ್ದರು. ಅವರೆಲ್ಲ ಇಷ್ಟಲಿಂಗ ದೀಕ್ಷೆಯನ್ನೇ ಪಡೆದುಕೊಂಡು, ಅವರವರ ಅನುಭಾವವನ್ನು ವಚನರೂಪದಲ್ಲಿ ಪ್ರಕಟಗೊಳಿಸುತ್ತಿದ್ದರು. ಈ ಕಾರಣದಿಂದಲೇ ಆ ಅನುಭವ ಮಂಟಪದ ಹೆಸರು ಇನ್ನೂ ಅಜರಾಮರವಾಗಿ ಉಳಿದುಕೊಂಡಿರುವುದು. ಇಂತಹ ಸಂಸ್ಥೆಗಳಿಂದ ಮಾತ್ರ ಸಮಾಜದ ಉದ್ಧಾರವಾಗಲು ಸಾಧ್ಯ.

ಇಂದು ಕಂಡಕಂಡವರ ಬಾಯಲ್ಲಿ ಬಸವತತ್ವ. ಅದರಲ್ಲಿ ಕಲಿತ ಎರಡು ವಚನಗಳನ್ನು ಹೇಳಿ ಚಪ್ಪಾಳೆ ಗಿಟ್ಟಿಸಿಕೊಳ್ಳುವಂತಹ ರಾಜಕಾರಣಿಗಳೇ ಇಂದು ಹೆಚ್ಚು. ಇವರು ನುಡಿವೀರರು ನಡೆವೀರರಲ್ಲ. ಕೊರಳಲ್ಲಿ ರುದ್ರಾಕ್ಷಿಗಳಿಲ್ಲ. ಹಣೆಯ ಮೇಲೆ ಭಸ್ಮವಂತೂ ಇಲ್ಲವೇ ಇಲ್ಲ. ಇವರು ಬೊಗಳೆಬಿಡುವ ಬಸವಣ್ಣನ ಅನುಯಾಯಿಗಳು. ಇವರಿಗೆ ದೈವಭಯವಿಲ್ಲ. ಧರ್ಮದ ಭಯವಿಲ್ಲ. ಅಧಿಕಾರದ ಮದ. ಇಂಥವರಿಗೆ ಧರ್ಮಗುರುಗಳೆಂದು ಕರೆಸಿಕೊಳ್ಳುತ್ತಿರುವ ಕೆಲವರು ಹೌದಪ್ಪರಂತೆ ವರ್ತಿಸುತ್ತಿರುವುದು ದುರ್ದೈವದ ಸಂಗತಿ.

ನಾವು ಕಂಡಂತೆ ಬಸಪ್ಪ ದಾನಪ್ಪ ಜತ್ತಿ (ಬಿ.ಡಿ.ಜತ್ತಿ) ಇವರು ನಮ್ಮ ದೇಶದ ಅತ್ಯುನ್ನತ ಸ್ಥಾನವನ್ನಲಂಕರಿಸಿದವರು. ಉಪರಾಷ್ಟ್ರಪತಿ, ರಾಷ್ಟ್ರಪತಿ ಸ್ಥಾನ ಹೊಂದಿದ್ದರು. ಅಂತಹ

ಸ್ಥಾನದಲ್ಲಿದ್ದರೂ, ಸದಾ ಅವರ ಶರೀರದ ಮೇಲೆ ವೀರಶೈವ ಲಾಂಛನಗಳಾದ ಲಿಂಗ, ರುದ್ರಾಕ್ಷಿ, ಭಸ್ಮ ಎದ್ದು ಕಾಣುತ್ತಿದ್ದವು. ಇಂಥವರು ನಿಜವಾದ ವೀರಶೈವರು. ಇಂಥವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳದಿದ್ದರೆ ಈ ಹೊತ್ತಿಗೆಗೆ ಅರ್ಥಬಾರದು.

ಮೊನ್ನೆಯೊಬ್ಬ ರಾಜಕಾರಣಿ ಗುಡಿಗುಂಡಾರ ಸುತ್ತುವ ಬೇರೊಬ್ಬರನ್ನು ಹೀಗೆ ಆಡಿಕೊಂಡ! "ಉಳ್ಳವರು ಶಿವಾಲಯ ಮಾಡುವರಯ್ಯಾ ನಾನೇನು ಮಾಡುವೆ? ಬಡವನಯ್ಯಾ, ಎನ್ನ ಕಾಲೇ ಕಂಬ, ದೇಹವೇ ದೇಗುಲ..." ಹೀಗೆ ಸಭೆಯೊಂದರಲ್ಲಿ ಹೇಳಿ ಅಗ್ಗದ ಜನಪ್ರೀತಿ ಸಂಪಾದಿಸಿ ಚಪ್ಪಾಳೆ ಗಿಟ್ಟಿಸಿಕೊಂಡ. ಬಹುಶಃ ಅದೇ ಬಸವಣ್ಣನ ವಚನವೊಂದು ಹೀಗಿದೆ : "ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ; ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ; ಇದಿರಹಳಿಯಲು ಬೇಡ, ಇದೇ ಅಂತರಂಗಶುದ್ಧಿ; ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲ ಸಂಗಮದೇವರ ನೊಲಿಸುವ ಪರಿ" ಎಂತೆಂದು. ಇಂತಹ ವಚನಗಳನ್ನು ಹೇಳುವಷ್ಟು ಗಟ್ಟಿತನ ಅವರಿಗೆಲ್ಲಿ ಬರಬೇಕು. ಗೋಹತ್ಯೆ ತಡೆಗೆ ಹಲವರಿಂದ ಬೇಡಿಕೆಗಳು ಬಂದಾಗ ಆ ಪುಣ್ಯಾತ್ಮ ಒಂದು ಸಭೆಯಲ್ಲಿ ಹೇಳಿದ್ದು ಹೀಗೆ! "ಸೇವಿಸುವಂತಹ ಆಹಾರ ಅವರವರ ವೈಯಕ್ತಿಕ ವಿಚಾರಕ್ಕೆ ಬಿಟ್ಟಿದ್ದು. ನಾನೂ ಸಹ ಅದರ ಮಾಂಸ ತಿನ್ನುತ್ತೇನೆ ಅದರಲ್ಲಿ ತಪ್ಪೇನಿದೆ?" ಸಮಯ ಸಾಧಕರಿವರು. ಒಂದು ಕಡೆ 'ಬಸವಣ್ಣನ ಕಟ್ಟ ಅನುಯಾಯಿ ನಾನು' ಎಂದು ಹೇಳಿಕೊಳ್ಳುವುದು, ಮತ್ತೊಂದು ಕಡೆ ಬಕಾಸುರರಂತೆ ವರ್ತಿಸುವುದು. ಹೀಗಿರುವಾಗ ಧರ್ಮ ಎಂದರೇನು? ಎಂಬುದರ ಬಗ್ಗೆ ಸ್ವಲ್ಪ ನಾವೇ ವಿಚಾರಿಸಿ ತೀರ್ಮಾನಕ್ಕೆ ಬರಬೇಕಲ್ಲವೇ?

ಒಮ್ಮೆ ಒಂದೂರಿಗೆ ಒಂದು ತಿಂಗಳು ಪ್ರವಚನಕ್ಕೆ ಹೋಗಿದ್ದೆವು. ಅಲ್ಲಿ ಸುಮಾರು ಅರವತ್ತೈದು ಜನ ನಮ್ಮಿಂದ ಇಷ್ಟಲಿಂಗ ದೀಕ್ಷೆ ತೆಗೆದುಕೊಂಡರು. ಈ ವಿಷಯವನ್ನೊಮ್ಮೆ ನಾಲ್ಕೈದು ಜನರು ನಮ್ಮಲ್ಲಿಗೆ ಬಂದಿದ್ದಾಗ ಹೇಳುವ ಪ್ರಸಂಗ ಬಂದಿತ್ತು. ಹೇಳಿದೆವೂ ಸಹ. ಅವರಲ್ಲೊಬ್ಬ! "ದೀಕ್ಷೆ ತೆಗೆದುಕೊಂಡವರೆಲ್ಲರೂ ಲಿಂಗಾಯತರೋ ಅಥವಾ ಬೇರೆ ಬೇರೆ ಜಾತಿಯವರೋ?" ಎಂದು ಕೇಳಿಬಿಟ್ಟ. ಇಂಥವರಿಗೆ ಜಾತಿಯೆಂಬ ಜಿಡ್ಡು ಬಿಡಲಾರದಷ್ಟು ಅಂಟಿಕೊಂಡಿರುವುದು. ಈ ನಾಲ್ಕೈದು ಜನರಲ್ಲಿ ಕೆಲವರು ಲಿಂಗವನ್ನೇ ಧರಿಸಿರದಂತಹ ಜಾತಿಯ ಲಿಂಗಾಯತರಿದ್ದರು. ಇವರು ವೀರಶೈವರೇ?

ಲಿಂಗ-ರುದ್ರಾಕ್ಷಿ-ಭಸ್ಮ ಇವು ಯಾರೊಬ್ಬರ ಸೊತ್ತಲ್ಲ. ಪ್ರಪಂಚದ ಪ್ರತಿಯೊಬ್ಬರ ಸೊತ್ತು. ಅಂದರೆ ಇವುಗಳನ್ನು ಯಾರೂ ಬೇಕಾದರೂ ಧರಿಸಬಹುದು. ಇವು ಬಹಳ ಪವಿತ್ರವಾದವು. ಇವುಗಳನ್ನು ಧರಿಸುವವರೂ ಸಹ ಪಾವಿತ್ರತೆಯನ್ನು ಕಾಪಾಡಿಕೊಂಡು ಬರುತ್ತಿರಬೇಕು. ಅಂಥವರೇ ನಿಜ ಭಕ್ತರು. ಅವರೇ ಜೀವನ್ಮುಕ್ತರು. ಇದಕ್ಕೆ ಸಾಕ್ಷಿ ಹರಳಯ್ಯ, ಮಾಚಯ್ಯ, ಮಾರಯ್ಯ, ಕಕ್ಕಯ್ಯ, ಅಕ್ಕಮ್ಮ, ಲಕ್ಕಮ್ಮ, ನಾಗಮ್ಮ, ಲಿಂಗಮ್ಮ, ಅಪ್ಪಣ್ಣ, ಬೊಪ್ಪಣ, ಸಂಗಣ್ಣ ಮತ್ತು ಬಸವಣ್ಣ. ಇವರುಗಳಿಗೆಲ್ಲ ಅವುಗಳನ್ನು ಧರಿಸುವಂತಹ ಅರ್ಹತೆಯಿತ್ತು. ಮೊದಲೇ ಆ ಅರ್ಹತೆ ಪಡೆದುಕೊಂಡಿರಲಿಲ್ಲ, ಮುಂದೆ ಸ್ವಪ್ರಯತ್ನದಿಂದ ಸಂಪಾದಿಸಿಕೊಂಡರು,

ಮುಕ್ತಿ ಪಡೆದರು.

ಕತ್ತಲಿಲ್ಲದ ಬೆಳಕಿಗೆ, ವಿಷವಿಲ್ಲದ ಅಮೃತಕ್ಕೆ, ದುಃಖವಿಲ್ಲದ ಸುಖಕ್ಕೆ, ಮಿಥ್ಯವಿಲ್ಲದ ಸತ್ಯಕ್ಕೆ, ಅಜ್ಞಾನವಿಲ್ಲದ ಜ್ಞಾನಕ್ಕೆ, ಭ್ರಮೆಗಳಿಲ್ಲದ ಬ್ರಹ್ಮನಿಗೆ, ಮಾಯೆಯಿಲ್ಲದ ಶಿವನಿಗೆ. ಹೀಗೆ ಒಂದಿರದಿದ್ದರೆ ಮತ್ತೊಂದಕ್ಕೆ ಅರ್ಥ ಬರುತ್ತಿರಲಿಲ್ಲ. ಅನುಭಾವವೆಂಬ ಆನಂದ ರಸ ಹುಟ್ಟಿ ಬರಬೇಕೆಂದರೆ! ಅಡ್ಡಿ ಆತಂಕ, ವಿಘ್ನ ಭಗ್ನಗಳನ್ನು ಹೆದರಿಸಿರಲೇಬೇಕು, ಈ ದ್ವಂದ್ವಗಳೇ ಜಗತ್ತಿನ ಇರುವಿಕೆಗೆ ಕಾರಣವಾಗಿವೆ. ದ್ವಂದ್ವಗಳನ್ನು ಸಾಯಿಸಲಿಕ್ಕೆ ಬರುವುದಿಲ್ಲ. ದ್ವಂದ್ವಾತೀತ ನಿಲುವನ್ನು ತಾಳಬೇಕು ಮಾತ್ರ. ಇದನ್ನೇ ಶರಣರು, ಸಂತರು ಮಾಡಿದ್ದು. ಅವರ ನಡೆನುಡಿಗಳೇ ನಮಗೆ ಮಾರ್ಗದರ್ಶನ. ಅದೇ ಶಿವಕೀರ್ತನ. ಈ ಚಿದ್ರಸಕ್ಕೆ ಸಂಬಂಧಿಸಿದ ವಿಷಯಾದಿಗಳೇ "ಚೇತನ-ಸಂಕೀರ್ತನ" ಎಂಬ ಶೀರ್ಷಿಕೆಯುಳ್ಳ ಈ ನನ್ನ ಲೇಖನ.

ಹಿಂಭಾಗದ ರಕ್ಷಾಪುಟದಲ್ಲಿ ಬೆನ್ನವನವೊಂದನ್ನು ಹೀಗೆ ಬರೆದಿರುವೆ. "ಇದು ಇದ್ದವರ ಕಥೆಯಲ್ಲ, ಇದ್ದು ಸತ್ತವರ ಕಥೆ...! ಎಂತೆಂದು. ಶಿವಶರಣರು ಶಿವಸಾಯುಜ್ಯದತ್ತ ನಡೆದ, ಶಿವಜ್ಞಾನದ ಪರಿಚಯವೆ ಈ ಹೊತ್ತಿಗೆಯು. 'ಚೇತನ' ಎಂದರೆ 'ಮೂಲವಸ್ತು' ಅಥವಾ 'ಪರಶಿವಬ್ರಹ್ಮವು. 'ಸಂಕೀರ್ತನ' ಎಂದರೆ ಉಪಕತೆ ಹಾಗೂ ಹಲವಾರು ದೃಷ್ಟಾಂತಗಳ ಮೂಲಕ ಪ್ರವಚನಶೈಲಿಯಲ್ಲಿ ವ್ಯಾಖ್ಯಾನಿಸುವುದು. ಕಾರಣ ಈ ಹೊತ್ತಿಗೆಯಲ್ಲಿ ನೂರಾರು ಕಥೆಗಳಿವೆ. ಹಲವಾರು ಶ್ಲೋಕ ಹಾಗೂ ವಚನಗಳಿವೆ.

'ಆನಾರು?' ಎಂಬುದರಿಂದ ಹಿಡಿದು, ಗುರು-ದೀಕ್ಷೆ-ಸಾಧನೆಗೆ ಅವಶ್ಯಕತೆಯುಳ್ಳ ಹಲವಾರು ಯೋಗಗಳ ಪರಿಚಯವಿದೆ. ಹೀಗೆ ಈ ವಿಷಯಗಳ ಬಗ್ಗೆ ನನ್ನ ಶಕ್ತ್ಯಾನುಸಾರ, ಈ ಹೊತ್ತಿಗೆಯಲ್ಲಿ ಬರೆದಿಡುವ ಪ್ರಯತ್ನ ಮಾಡಿದ್ದೇನೆ.

ಈ ಹೊತ್ತಿಗೆ ಬರೆದಿರುವುದು ಬೀಗುವುದಕ್ಕಲ್ಲ! ನಾ ಮಾಗುವುದಕ್ಕೆ! ಭಗವಂತನಲ್ಲಿ ಹೋಗುವುದಕ್ಕೆ. ಹೌದು! ನಾವು ಯಾರಿಗಾದರೂ ಏನನ್ನೋ ಹೇಳುತ್ತಿದ್ದೇವೆಯೆಂದರೆ ಆ ವಿಷಯದ ಬಗ್ಗೆ ಮತ್ತೆ ಮತ್ತೆ ಕಲಿಯುತ್ತಿದ್ದೇವೆ ಎಂಬ ಅರ್ಥ. ಯಾಕೆಂದರೆ ಯಾವೊಂದು ವಿಷಯವನ್ನು ನಾವು ಮತ್ತೊಬ್ಬರಿಗೆ ಹೇಳುವುದಕ್ಕಿಂತ ಪೂರ್ವ; ಆ ವಿಷಯದ ಬಗ್ಗೆ ಹತ್ತು ಪಟ್ಟು ಅಧ್ಯಯನ ಮಾಡಿರಬೇಕು. ಆಗ ಮಾತ್ರ ಅದರ ಬಗ್ಗೆ ಒಂದು ಪಟ್ಟು ಹೇಳಲು ಸಾಧ್ಯ ಇದು ಪ್ರಕೃತಿ ಧರ್ಮ. ಆದ್ದರಿಂದ ನಾನಿಲ್ಲಿ ಹೇಳುವುದರ ಜೊತೆಗೆ ಕಲಿಯುವ ವಿದ್ಯಾರ್ಥಿಯಾಗಿದ್ದೇನೆ.

ಪ್ರತಿಯೊಬ್ಬರೂ ಹುಟ್ಟಿ ಬಂದ ನಂತರ ಸಮಾಜದ ಋಣ ತೀರಿಸಲೇಬೇಕು. ಆ ಋಣ ಸಂದಾಯವೇ ಈ ನನ್ನ ಹೊತ್ತಿಗೆ. ನಾನೊಬ್ಬ ಪ್ರವಚನಕಾರನಾಗಿರುವುದರಿಂದ, ಈ ಹೊತ್ತಿಗೆ ಪಂಡಿತೋತ್ತಮರಿಗಲ್ಲದಿದ್ದರೂ, ಸಾಮಾನ್ಯ ಪ್ರವಚನಕಾರರಿಗೋ, ಸಾಮಾನ್ಯ ಜಿಜ್ಞಾಸುಗಳಿಗೋ, ಸಹಾಯಕ್ಕೆ ಬಂದುದಾದರೆ, ನನ್ನ ಜನ್ಮ ಸಾರ್ಥಕವೆಂದು ಭಾವಿಸಿರುವೆ.

ನನ್ನ ದೀಕ್ಷಾಗುರು ಎಮ್ಮಿಗನೂರಿನ ಲಿಂ॥ ಶ್ರೀ ಷ॥ ಬ್ರ॥ ಸಿದ್ಧಲಿಂಗ ಮಹಾಂತ

ರಾಜದೇಶಿಕೇಂದ್ರ ಭಗವತ್ಪಾದಂಗಳವರು ನನ್ನ ಬುದ್ಧಿಯಲ್ಲಿ ಅನುಗ್ರಹಿಸಿರುವಷ್ಟು ಬರೆದು ಬೀರಿದ್ದೇನೆ. ನಮ್ಮೆಲ್ಲರಿಗೂ ಅವರ ಕೃಪಾಶೀರ್ವಾದ ಸದಾ ದೊರೆಯುತ್ತಿರಲೆಂದು ಪ್ರಾರ್ಥಿಸುವೆ. ಹಾಗೆ ಮಾತಾಪಿತೃಗಳಿಲ್ಲದೆ ಯಾರೊಬ್ಬರೂ ಈ ಭುವಿಗೆ ಬರಲು ಸಾಧ್ಯವಿಲ್ಲ. ಅವರ ಋಣ ಅದೆಷ್ಟು ತೀರಿಸಿದರೂ ಸಾಲದು. ಆದ್ದರಿಂದ ಈ ಗ್ರಂಥವನ್ನು ನನ್ನ ತಂದೆತಾಯಿಯರಿಗೆ ಸಮರ್ಪಣೆಗೈಯುತ್ತಿರುವೆ.

ಈ ಗ್ರಂಥ ಹೊರಬರುವಂತಾಗಲು ಹಲವಾರು ಗಣ್ಯಮಾನ್ಯರ ಸಹಾಯ ಸಹಕಾರ ದೊರೆತದ್ದಾಗಿದೆ. ಹಾಗೆ, ಈ ಹೊತ್ತಿಗೆಯನ್ನು ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟ ಆಶಾ ಗ್ರಾಫಿಕ್ಸ್‌ನ ಸಮಸ್ತ ಸಿಬ್ಬಂದಿ ವರ್ಗದವರನ್ನು ಮರೆಯಲು ಸಾಧ್ಯವಿಲ್ಲ. ಈ ಎಲ್ಲರಿಗೂ, ಓದುಗರಾದ ನಿಮ್ಮೆಲ್ಲರಿಗೂ, ನನ್ನ ದೀಕ್ಷಾಗುರು ಶ್ರೀ ಸಿದ್ಧಲಿಂಗ ಮಹಾಂತಾಖ್ಯರು, ದಯಾಮಯರಾದಂತಹ ಶ್ರೀ ಪಾರ್ವತಿ ಪರಮೇಶ್ವರರು, ಆಯುರಾರೋಗ್ಯ ಸಂಪತ್ತನಿತ್ತು ಕಾಪಾಡಲೆಂದು ಪ್ರಾರ್ಥಿಸುವೆ.

**ಕುಂಟಕವಿ**

ಎಂಟೆದೆ ಇರದವ; ತುಂಟನಾಗಿರದವ;
ರಂಟೆಕುಂಟೆಗಳ ಮರ್ಮವರಿಯದವ;
ಗಂಟು ಗಂಟುಗಳ ಬಿಚ್ಚಿ ಓದದವ
ಒಂಟಿಯಿದ್ದು ಚಿಂತನಮಂಥನ ಮಾಡದವ
ಸೊಂಟ ಬಿಗಿಹಿಡಿದು ಸಾಧನೆ ಮಾಡದವ, ಜಗದ
ನೆಂಟ ಶ್ರೀ ಗುರುಸಿದ್ಧಲಿಂಗನ ಪಾದ ಹಿಡಿಯದವ!
ಕುಂಟಕವಿ ಆತಾನು ತಿಳಿ ಪಶುವೆ

ಪಶು-ರುದ್ರಭೂಮಿ

# ವಿಷಯ ಸೂಚಿ

# ಆನಾರೆಂದರಿವುದು!

ಮಹಾತ್ಮರು 'ಮಾನವ ಜನ್ಮ ಶ್ರೇಷ್ಠ' ಎಂದಿರುವರು. ಆದರೆ ಈ ಜನ್ಮ ದೊರಕುವುದು ಅಷ್ಟು ಸುಲಭದ ಮಾತಲ್ಲ! ಕಷ್ಟಸಾಧ್ಯ. ಇದನ್ನೆ ಶ್ರೀ ಸಿದ್ಧಾಂತ ಶಿಖಾಮಣಿಯ ಪಿಂಡಸ್ಥಲದಲ್ಲಿ ರೇಣುಕ ಭಗವತ್ಪಾದರು ಹೇಳುತ್ತಾರೆ.

ಬಹುಜನ್ಮ ಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ ।
ಶುದ್ಧಾಂತಕರಣೋ ದೇಹೀ ಪಿಂಡ ಶಬ್ದೇನ ಗೀಯತೇ ॥

ಅನೇಕ ಜನ್ಮ ಜನ್ಮಾಂತರಗಳಲ್ಲಿ ಮಾಡಿದ ಪುಣ್ಯದ ಪ್ರಭಾವದಿಂದ ಪಾಪವೆಲ್ಲವೂ ನಶಿಸಿ, ನಿರ್ಮಲಗಳಾದ ಮನೋಬುದ್ಧಿಗಳುಳ್ಳ ಜೀವಾತ್ಮನೇ 'ಪಿಂಡ' ಎಂದು ಕರೆಸಿಕೊಳ್ಳುವನು. ಇದು ಈ ಶ್ಲೋಕದ ಅರ್ಥ. ಇದನ್ನೆ ಅಕ್ಕಮ್ಮ

ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ
ಎಂಬತ್ನಾಲ್ಕು ಲಕ್ಷ ಯೋನಿಯೊಳಗೆ ಬಂದೆ ಬಂದೆ!
ಬಾರದ ಭವಂಗಳನುಂಡೆ ನುಂಡೆ!
ಶುಭಾಶುಭಂಗಳ ಕಂಡೆಕಂಡೆ!
ಹಿಂದಣ ಜನ್ಮಗಳೇನಾದರೂ ಆಗಲಿ,
ಮುಂದೆ ನೀ ಕರುಣಿಸಾ ಚನ್ನಮಲ್ಲಿಕಾರ್ಜುನಾ ॥

ಎಂದ್ವಚನಿಸಿರುವಳು. ಒಂದಲ್ಲ, ಎರಡಲ್ಲ, ಎಂಬತ್ಮೂರು ಲಕ್ಷದ ತೊಂಬತ್ತೊಂಬತ್ತು ಸಾವಿರದ ಒಂಭೈನೂರಾ ತೊಂಬತ್ತೊಂಬತ್ತು (೮೩,೯೯,೯೯೯) ಜೀವರಾಶಿಯ ಯೋನಿಗಳಲ್ಲಿ ಜನಿಸಿ, ಮರಣಿಸಿ, ಕೊನೆಗೆ ಎಂಬತ್ನಾಲ್ಕನೆ (೮೪) ಲಕ್ಷವೆಂಬ ಈ ಮಾನವ ಜನ್ಮಕ್ಕೆ ಬಂದೆ. ಹಿಂದಿನ ಆ ಎಲ್ಲ ಜನ್ಮಗಳಲ್ಲೂ ಭವದ ದು:ಖವನ್ನು ಅನುಭವಿಸಿದೆ. ಇನ್ನಾದರೂ ಅದಕ್ಕೆ ವಿದಾಯ ಹೇಳುವಂತಾಗಲಿ. ಅದಕ್ಕಂತಹ ಅರಿವು ಮೂಡಿಸಿ ಮುಕ್ತಿ ಕರುಣಿಸು ಎಂಬುದು ಅಕ್ಕಮ್ಮನ ಮನೋವಾಂಛೆ.

ಇದು ಈ ಲೋಕದ ಪ್ರತಿಯೊಬ್ಬ ಮನುಷ್ಯ ಮಾಡಿಕೊಳ್ಳಬೇಕಾದಂತಹ ಪ್ರಶ್ನೆ! ಆ ಪ್ರಶ್ನೆಗೆ ಸಮಂಜಸವಾದ ಉತ್ತರ! ಹೀಗೆ ಎರಡನ್ನೂ ಹೇಳಿ ಮನುಕುಲವನ್ನು ಎಚ್ಚರಿಸಿದ್ದಾರೆ, ನಿಜಗುಣ ಶಿವಯೋಗಿಗಳು. ಅದು ಹೀಗೆ : 'ಮನುಕುಲ ಜನನದ ಲಾಭವಾವುದು? ಆನಾರೆಂದರಿವುದು!'

ನಾನಾರು? ನಾವಂದುಕೊಂಡಿರುವಂತೆ ಶರೀರ ನಾನಲ್ಲ! ಹೆಸರು ನಾನಲ್ಲ! ಇದಕ್ಕರ್ಥವೆಂಬಂತೆ ಶ್ರೀ ಸಿದ್ಧಾಂತ ಶಿಖಾಮಣಿಯ ಪಿಂಡಸ್ಥಲದಲ್ಲಿ 'ಶರೀರಾತ್ಮ ವಿವೇಕೇನ ಪಿಂಡಜ್ಞಾನಿ ಸ ಕಥ್ಯತೇ' ಎಂದು ಹೇಳಲಾಗಿದೆ. 'ಶರೀರ' ಮತ್ತು 'ಆತ್ಮ' ಇವುಗಳೆರೆಡರ ವಿವೇಕವುಳ್ಳವನೇ ಪಿಂಡಜ್ಞಾನಿ ಎನಿಸಿಕೊಳ್ಳುವನು. ಇದನ್ನೆ ಮಹಾತ್ಮರೊಬ್ಬರು "ತಾನಳಿದು ತಾನುಳಿದು ತನ್ನತಾನರಿತವನೆ ಸಂತ, ಮಹಾಂತ' ಎಂದಿರುವರು.

ಬುದ್ಧನ ಪರಮಶಿಷ್ಯ, ನಾಗಸೇನ. ಅಪ್ರತಿಮ ಬೌದ್ಧಧರ್ಮ ಪ್ರಚಾರಕ. ಆತನೊಮ್ಮೆ ಶ್ರಾವಸ್ತಿ ಎಂಬಲ್ಲಿಗೆ ಬರುತ್ತಾನೆ. ಶ್ರಾವಸ್ತಿಯ ರಾಜ ಮಿಲಿಂದನಿಗೆ ಆತ ಬಂದ ವಿಷಯ ಗೊತ್ತಾಗುವುದು. ಮಿಲಿಂದನಿಗೂ ನಾಗಸೇನನ ಪ್ರವಚನ ಕೇಳಬೇಕೆಂಬ ಆಸೆ ಬಹಳ ದಿನಗಳಿಂದ ಉಳಿದುಕೊಂಡಿತ್ತು. ಕಾರಣ ಆ ಕೂಡಲೇ ನಾಗಸೇನನ್ನು ಅರಮನೆಗೆ ಕರೆತರಲು ಮಂತ್ರಿಯನ್ನಲ್ಲಿಗೆ ಕಳಿಸಿಕೊಟ್ಟ. ಮಂತ್ರಿ ನಾಗಸೇನನಲ್ಲಿಗೆ ಬಂದು ನಮಸ್ಕರಿಸಿ, "ನಾಗಸೇನರೇ ರಾಜ ಮಿಲಿಂದನು ತಮ್ಮನ್ನು ಅರಮನೆಗೆ ಕರೆದುಕೊಂಡು ಬರಲು ನನ್ನನ್ನು ಕಳಿಸಿದ್ದಾನೆ. ಅದಕ್ಕೆ ತಾವು ಬಂದು ನಮ್ಮ ನಾಡಿನ ಜನಕ್ಕೆ ಆಶೀರ್ವಚನ ನೀಡಿ ನಮ್ಮನ್ನೆಲ್ಲ ಉದ್ದರಿಸಬೇಕು" ಎಂದು ಬೇಡಿಕೊಂಡನು.

ನಾಗಸೇನ ನಗುತ್ತಾ, "ಇಲ್ಲಾವ ನಾಗಸೇನನೂ ಇಲ್ಲ. ನಾನು ಬರುತ್ತೇನೆ" ಎಂದು ಹೇಳುತ್ತಾ ಮಂತ್ರಿಯು ಬಂದ ರಥದಲ್ಲಿ ಕುಳಿತು ಅರಮನೆಗೆ ಹೊರಟ.

ನಾಗಸೇನರ ಬರುವಿಕೆಯ ನಿರೀಕ್ಷೆಯಲ್ಲಿದ್ದ ರಾಜ ಮಿಲಿಂದನಿಗೆ ಅವರು ಅರಮನೆಯತ್ತ ಬರುವುದು ಕಂಡು ಹರ್ಷದಿಂದ ಸತ್ಕರಿಸಲು ಎದುರು ಹೋಗಿ "ನಾಗಸೇನರಿಗೆ ಸ್ವಾಗತ, ಸುಸ್ವಾಗತ" ಎನ್ನುತ್ತ ನಮಸ್ಕರಿಸಿದ.

ನಾಗಸೇನ ಪುನಃ ನಗುತ್ತಾ "ನಿನ್ನ ಸ್ವಾಗತಕ್ಕೆ ನಾನು ಕೃತಜ್ಞ, ಆದರೆ ನೀನಂದುಕೊಂಡಂತ ಇಲ್ಲಾವ ನಾಗಸೇನನು ಬಂದಿಲ್ಲ. ಬಂದಿರುವುದು ನಾನು ಮಾತ್ರ" ಎಂದಾಗ ಮಿಲಿಂದನಿಗೆ ಆಶ್ಚರ್ಯವಾಯಿತು. ಕ್ಷಣಕಾಲ ಸ್ತಬ್ಧನಾಗಿ ನಿಂತುಬಿಟ್ಟ. ಆ ಕೂಡಲೇ ನಾಗಸೇನನು ಹೇಳಿದ, "ರಾಜ ಮಿಲಿಂದ ನನ್ನ ಮಾತಿಂದ ಆಶ್ಚರ್ಯಪಡಬೇಕಾದುದಿಲ್ಲ. ಇದೇ ಆಧ್ಯಾತ್ಮದ ನಿಜಸಾರ. ಇರಲಿ ಈಗ ನಾನು ನಿಮ್ಮ ಅರಮನೆಗೆ ಬಂದದ್ದು ಯಾವುದರಲ್ಲಿ? ಅದರ ಹೆಸರೇನು?"

ಮಿಲಿಂದನುತ್ತರಿಸಿದ, "ನೀವು ಬಂದದ್ದು ರಥದಲ್ಲಿ" ಎಂದು. ಆಗ ನಾಗಸೇನ ರಾಜನಿಗೆ ರಥದ ಎಲ್ಲಾ ಬಿಡಿಭಾಗಗಳನ್ನು ಬೇರ್ಪಡಿಸುವಂತೆ ಹೇಳಿದ. ಸೇವಕರು ರಥದ ಬಿಡಿಭಾಗಗಳನ್ನು ಬೇರ್ಪಡಿಸಿದ್ದೂ ಆಯಿತು. ಆಗ ನಾಗಸೇನನು ರಥದ ಒಂದೊಂದು ಬಿಡಿ ಭಾಗಗಳ ಹತ್ತಿರ ಬಂದು ಒಂದೊಂದಾಗಿ ಮುಟ್ಟಿ ಇದೇನು? ಇದೇನು? ಎಂದು ರಾಜನನ್ನು ಪ್ರಶ್ನಿಸಿದ. ನಾಗಸೇನನು ಮುಟ್ಟಿದಂತೆಲ್ಲ ರಾಜ ಪ್ರತಿಯೊಂದರ ಹೆಸರುಗಳನ್ನು ಹೀಗೆ ಉತ್ತರಿಸುತ್ತಿದ್ದ ಅಚ್ಚು, ಕುಂಬ, ಎಲೆ, ವಂಕಿ, ನೊಗ ಇತ್ಯಾದಿ ಇತ್ಯಾದಿ. ಕೊನೆಗೆ ರಥ ತೋರಿಸು ಎಂದು ಕೇಳಿದ. ಅದಕ್ಕೆ ರಾಜ 'ಇವುಗಳನ್ನೆಲ್ಲ ಜೋಡಿಸಿದರೆ ಪುನಃ ರಥವಾಗಿ ತೋರುವುದು" ಎಂದ್ಹೇಳಿ ಮೌನವಿಸಿದ.

"ಆಧ್ಯಾತ್ಮವೆಂಬುದಿಷ್ಟೆ! ಈ ನಮ್ಮ ಶರೀರ ನಾನಲ್ಲ. ನನ್ನದು ಈ ಶರೀರದ ವ್ಯವಹಾರಕೆಂದಿಟ್ಟ ಹೆಸರು ನಾನಲ್ಲ, ನನ್ನದು. ಹಾಗೆ ಈ ಶರೀರಕ್ಕಂಟಿಕೊಂಡಿರುವ ಕಣ್ಣು, ಕೈ ಕಾಲು, ಮೂಗು, ಮುಖ ಅಲ್ಲದೆ ಇಂದ್ರಿಯಗಳಾವೂ ನಾನಲ್ಲ. ಅವೆಲ್ಲಾ ನನ್ನವೆನಿಸಿಕೊಳ್ಳುತ್ತಿವೆ. ಹಾಗಾದರೆ ನಾನೆಂಬುದೇನೋ ಒಂದಿರಬೇಕು. ಇದೆಯೂ ಸಹ. ಅದು ಇರುವಲ್ಲ. ಇರುವಾಗಿ ತೋರುವುದಲ್ಲ. ಅದು ಅವಿನಾಶಿ ಚೇತನ. ಅದರ ಪರಿಶುದ್ಧ ಅರಿವೇ ಆಧ್ಯಾತ್ಮದ ತಿರುಳು"

ಹೀಗೆ ಉಪದೇಶಿಸಿದ್ದ.

ಯಾವುದು ನಾನಲ್ಲವೋ? ಯಾವುದು ನನ್ನದಲ್ಲವೋ? ಅವುಗಳನ್ನು 'ನಾನು' 'ನನ್ನದು' ಎಂದು ಭ್ರಮಿಸಿ ನಾವು ದುಃಖಕ್ಕೆ ಕಾರಣವಾರಾಗುತ್ತಿದ್ದೇವೆ. ಈ ಕಾರಣಕ್ಕಾಗಿಯೇ ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣ ಪರಮಾತ್ಮ ಅರ್ಜುನನಿಗೆ ಹೀಗೆ ಹೇಳಿರುವುದು.

ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।
ಗತಾಸೂನಗತಾಸೂಂಶ್ಚ ನಾನು ಶೋಚಂತಿ ಪಂಡಿತಾಃ ॥ (ಭ.ಗೀ. ೨.೧೧)

ಅರ್ಜುನಾ, "ನೀನು ಬಹಳ ಪಂಡಿತನಂತೆ ಮಾತುಗಳನ್ನಾಡುತ್ತಿರುವಿ. ಯಾಕೆಂದರೆ ಯಾರಿಗಾಗಿ ನೀನು ಶೋಕಿಸಬೇಕಿಲ್ಲವೋ ಅವರಿಗಾಗಿ ನೀನು ಶೋಕಿಸುತ್ತಿರುವಿ."

ಇದು ಆಧ್ಯಾತ್ಮದ ಬೋಧನೆ. ಯಾಕೆಂದರೆ ಶರೀರ ಅನಿತ್ಯವಾದದ್ದು. ಅದನ್ನು ನಾವೆಷ್ಟೇ ಜೋಪಾನ ಮಾಡಿದರೂ ಅದು ಉಳಿಯುವಂಥದಲ್ಲ. ಹೌದು, ಆತ್ಮ ಮತ್ತು ಶರೀರಗಳ ಸಂಯೋಗ ವಿನಿಯೋಗವು ವ್ಯವಹಾರಿಕ ದೃಷ್ಟಿಯಿಂದ ಅನಿವಾರ್ಯವೇ ಆಗಿದೆ. ವಾಸ್ತವಿಕವಾಗಿ ಅದು ಸ್ವಪ್ನಕಲ್ಪಿತವಾದದ್ದು. ಅರ್ಥಾತ್ ಸ್ವಪ್ನದಲ್ಲಿನ ಘಟನೆಗಳು ಮನಸ್ಸಿಗೆ ಮಾತ್ರ ಅನುಭವವಾಗಿ ಮತ್ತವು ದೂರವಾಗುವವು (ಇಲ್ಲವಾಗುವವು). ಇದರಂತೆ ಈ ಆತ್ಮ ಮತ್ತು ಶರೀರಗಳೆರಡರ ಸಂಯೋಗವು, ವಿನಿಯೋಗ ಪಡೆಯುವ ಪರ್ಯಂತರ ಅದೊಂದು ದೀರ್ಘ ಸ್ವಪ್ನಕ್ಕೆ ಸಮಾನವಾದದ್ದು. ಆದ್ದರಿಂದ ವಿನಾಶ ಹೊಂದುವ ಶರೀರವನ್ನು ನಾನೆಂದು ಭ್ರಮಿಸುವುದು ಸರಿಯಾದುದಲ್ಲ. ಅವಿನಾಶಿ ಆತ್ಮವೇ ನಾನು. ಅದು ಸರ್ವಕಾಲಿಕ. ಆದ್ದರಿಂದ ಶ್ರೀಕೃಷ್ಣ ಪರಮಾತ್ಮ ಮತ್ತೆ ಹೀಗೆ ಮುಂದುವರೆಸಿದ್ದಾನೆ.

ನಾ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ।
ನ ಚೈವ ನ ಭವಿಷ್ಯಾಮಃ ಸರ್ವೇವಯಮತಃ ಪರಮ್ ॥ (ಭ.ಗೀ. ೨.೧೨)

ನಾನು ಯಾವ ಕಾಲದಲ್ಲಿಯೂ ಇರಲಿಲ್ಲವೆಂಬುದಿಲ್ಲ. (ಅಂದರೆ ಯಾವಾಗಲೂ ಇದ್ದೆ) ಹಾಗೆಯೇ ನೀನಾಗಲೀ ಈ ರಾಜರುಗಳಾಗಲೀ ಇರಲಿಲ್ಲವೆಂಬುದಿಲ್ಲ. (ಅಂದರೆ ಯಾವಾಗಲೂ ಇದ್ದಿರಿ) ಹಾಗೆಯೇ ಇನ್ನು ಮುಂದೆಯೂ ನಾನು ನೀವುಗಳೆಲ್ಲರೂ ಇರುವುದಿಲ್ಲವೆಂಬುದೇ ಇಲ್ಲ. (ಅಂದರೆ ಎಂದೆಂದೂ ಇರುತ್ತೇವೆ)

ಇದು ಅಭೇದ ಬೋಧನೆಯು. ನಾವು ತೋರಣನುಡಿಯಲ್ಲಿ ತಿಳಿಸಿರುವಂತೆ ಭಗವಂತ ಅನಂತ. ಅನಂತತೆಯ ಮೂಲ ಶೂನ್ಯ. ಶೂನ್ಯದಿಂದಲೇ ಸರ್ವೋತ್ಪತಿ. ಪುನಃ ಶೂನ್ಯದಲ್ಲಿಯೇ ಸರ್ವವೂ ಲಯ ಹೊಂದುವವು. ಶೂನ್ಯದ ದೋಷಪೂರಿತ ಸ್ಥಿತಿಯೇ ನಮಗೆ ಶಕ್ತಿಯಾಗಿ ವಸ್ತುವಾಗಿ ಗೋಚರಿಸುತ್ತಿರುವುದು. ಅದಕ್ಕೆ ನಮ್ಮ ಶರೀರವೂ ಹೊರತಾಗಿಲ್ಲ. ಇದನ್ನೇ ನಮ್ಮ ದಾರ್ಶನಿಕರು ಮಾಯೆಯೆಂದು ಕರೆದಿರುವುದು.

ಮಾಯೆಯ ಪ್ರತಿಯೊಂದು ವಸ್ತು (ಶಕ್ತಿ) ಗಳು ಷಡ್ಭಾವಾ ವಿಕಾರ ಹೊಂದುವವು.

ಅಂದರೆ ಜಾಯತೆ ಅಸ್ತಿ, ವಿವರ್ಧತೇ, ಪರಿಣಮತೆ, ಅಪಕ್ಷೀಯತೆ ಮತ್ತು ವಿನಶ್ಯತೇ ಐಂತೆಂಬ ಆರು ವಿಕಾರಗಳನ್ನು ನಮ್ಮ ದಾರ್ಶನಿಕರು ತಿಳಿಸಿದ್ದಾರೆ. ಅರ್ಥ ಹುಟ್ಟುವುದು, ಇರುವುದು, ಬೆಳೆಯುವುದು, ರೂಪಾಂತರ ಹೊಂದುವುದು, ಕ್ಷೀಣಿಸುವುದು, ಕೊನೆಗೊಂದು ದಿನ ಅದು ನಾಶವಾಗುವುದು. ಆದ್ದರಿಂದ ಬಸವಣ್ಣ ಈ ನಮ್ಮ ಶರೀರ ಇಂತೆಲ್ಲಾ ವಿಕಾರ ಹೊಂದುವ ಮುನ್ನ ಎಚ್ಚೆತ್ತುಕೋ ಎಂದು ಹೀಗೆ ಹೇಳಿದ್ದಾನೆ.

ನೆರೆ ಕೆನ್ನೆಗೆ ತೆರೆಗಲ್ಲಕ್ಕೆ ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ
ಕಾಲ ಮೇಲೆ ಕೈಯನೂರಿ ಕೋಲು ಹಿಡಿಯದ ಮುನ್ನ
ಮುಪ್ಪಿಂದೊಪ್ಪಳಿಯದ ಮುನ್ನ
ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ
ಕೂಡಲ ಸಂಗಮದೇವನ ॥

'ಪೂಜಿಸು ನಮ್ಮ ಕೂಡಲಸಂಗಮದೇವನ' ನಾವುಗಳಾರು ಪೂಜಿಸುತ್ತಿಲ್ಲವೇ? ಇಂತಹ ಪ್ರಶ್ನೆ ಕೆಲವರಲ್ಲಿ ಬರಬಹುದು. ಆದರೆ ನಮ್ಮ ಅನಿಸಿಕೆಗೂ, ಬಸವಣ್ಣನ ಹೇಳಿಕೆಗೂ ಅಜಗಜಾಂತರ ವ್ಯತ್ಯಾಸವುಂಟು. ನಾವು ಮಾಡುವಂತಹ ಪೂಜೆಗಳು, ನಮ್ಮ ಯಾವುದೋ ಒಂದು ಮನೋವಾಂಛಿತ ಫಲಪ್ರಾಪ್ತಿಗಾಗಿ ಮಾತ್ರ. ಆದರೆ ಬಸವಣ್ಣ ಹೇಳುತ್ತಿರುವುದು ಮುಕ್ತಿ ಅಥವಾ ಜೀವನ್ಮುಕ್ತಿ ಪಡೆದುಕೊಳ್ಳಲು. ಅಂದರೆ ಏನೊಂದನ್ನು ಪಡೆದರೆ ಅದು ಎಲ್ಲವನ್ನೂ ಪಡೆದುಕೊಂಡತಾಗಿರಬೇಕು. ಮತ್ತೇನನೂ ಬೇಡುವಂತಿರಬಾರದು. "ನಿನ್ನದೆಂಬುದು ಜ್ಞಾನರತ್ನ, ಅದನ್ನು ಧರಿಸಿದೆಯಾದೊಡೆ ನಿನ್ನಂತಹ ಸಿರಿವಂತರಿಲ್ಲ ಕಾಣಾ ಗುಹೇಶ್ವರಾ" ಎಂದಿರುವ ಹಾಗೆ, ಅದು ಆನಾರೆಂದರಿವುದು. ಅದು ಪರಿಶುದ್ಧ ಅರಿವು.

ಶಿವ ಪಾರ್ವತಿಯರೊಮ್ಮೆ ಲೋಕ ಸಂಚಾರ ಮಾಡುತ್ತಿದ್ದರು. ಅವರು ಹಾದು ಹೋಗುವ ಮಾರ್ಗದಲ್ಲಿ ಸನಕ, ಸನಂದನ, ಸನತ್ಕುಮಾರ ಮತ್ತು ಸನತ್ಸುಜಾತ ಇವರುಗಳು ಶರೀರಭಾವ ತೊರೆದು ಆತ್ಮಾನಂದದ ಸಮಾಧಿಸ್ಥಿತಿಯಲ್ಲಿ ಕುಳಿತಿದ್ದರು. ಆದ್ದರಿಂದವರಿಗೆ ಶಿವ ಪಾರ್ವತಿಯರು ತಮ್ಮ ಹತ್ತಿರ ಬರುತ್ತಿರುವುದು ಗೊತ್ತಾಗಲಿಲ್ಲ. ಮೇಲೆದ್ದುನಿಂತು ನಮಸ್ಕರಿಸಿ ಗೌರವಿಸಲಿಲ್ಲ. ಇದರಿಂದ ಆದಿಶಕ್ತಿಗೆ ಅವರ ಮೇಲೆ ಕೋಪ ಹುಟ್ಟಿ ಬಂತು. ಕೂಡಲೆ ಪಾರ್ವತಿಯು, "ಎಲೇ ಗರ್ವಿಷ್ಟರೇ, ಜಗದೊಡೆಯರಾದ ನಾವಿಬ್ಬರೂ ನಿಮ್ಮಲ್ಲಿಗೆ ಬಂದಿದ್ದರೂ ಸಹ ಗಮನಿಸದೆ, ಎದ್ದು ನಿಂತು ವಂದಿಸದೆ ಒಂಟೆಗಳಂತೆ ಕತ್ತು ಮೇಲೆ ಚಾಚಿ ಕುಳಿತಿರುವಿರಾ. ಆದ್ದರಿಂದ ನಿಮಗೀಗಲೇ ಒಂಟೆಯ ಶರೀರ ಪ್ರಾಪ್ತವಾಗಲಿ" ಎಂದು ಶಾಪ ಕೊಟ್ಟು ಮುನ್ನಡೆದಳು. ಋಷಿಕುಮಾರರು ಆ ಕ್ಷಣದಿಂದಲೇ ಒಂಟೆಗಳ ಶರೀರವನ್ನು ಧರಿಸಿ ಆ ಕಾಡಿನಲ್ಲಿ ಅಲೆದಾಡಿದರು. ಹೀಗೆ ಕೆಲವು ವರ್ಷಗಳೇ ಕಳೆದು ಹೋದವು. ಮತ್ತೊಮ್ಮೆ ಶಿವಪಾರ್ವತಿಯರು ಅದೇ ಮಾರ್ಗದಲ್ಲಿ ಸಂಚರಿಸುತ್ತಿರುವಾಗ ನಾಲ್ಕು ಒಂಟೆಗಳು ಕಂಡುಬಂದವು. ಜಗನ್ಮಾತೆಗೆ ಅರ್ಥವಾಯಿತು. ಅವು ತನ್ನ ಶಾಪದ ಪ್ರತಿರೂಪಗಳೆಂತೆಂದು. ಆದಿಶಕ್ತಿಗೆ ಪುನಃ ಅವುಗಳ

ಮೇಲೆ ಕನಿಕರ ಹುಟ್ಟಿ ಕೂಡಲೆ ತನ್ನ ಶಾಪ ಹಿಂತೆಗೆದುಕೊಂಡಳು. ಒಂಟೆಗಳಾಗಿ ತಿರುಗುತ್ತಿದ್ದ ಆ ಋಷಿಕುಮಾರರಿಗೆ ಪುನಃ ಅವರವರ ನೈಜ ಶರೀರ ಪ್ರಾಪ್ತವಾಯಿತು ಆಗ ಜಗನ್ಮಾತೆ ಕೇಳಿದಳು, "ಋಷಿಕುಮಾರರೇ, ನೀವಿದ್ದ ಸಮಾಧಿ ಸ್ಥಿತಿಯನ್ನು ಲಕ್ಷಿಸದೆ ಆವೇಶಭರಿತಳಾಗಿ ನಿಮಗೆ ಶಾಪಕೊಟ್ಟೆ. ಇದರಿಂದ ನೀವು ಬಹಳಷ್ಟು ಕಷ್ಟಗಳನ್ನು ಅನುಭವಿಸಿರಬೇಕಲ್ಲವೆ?" ಎಂದು.

ಅಮ್ಮಾ, ನಿಮ್ಮಿಬ್ಬರ (ಶಿವಶಕ್ತಿಯರ) ಸ್ವರೂಪವೇ ಆತ್ಮಚೈತನ್ಯ. ಈ ಶರೀರಗಳೆನ್ನುವವು ಆತ್ಮನು ತೊಡಬಹುದಾದಂತಹ ಬಟ್ಟೆಗಳು. ಅಂದಾಂಗ ಬಟ್ಟೆ ನೂಲಿನದಾದರೇನು? ರೇಷ್ಮೆಯದಾದರೇನು? ಬಟ್ಟೆ ಬಟ್ಟೆಯೇ ತಾಯಿ. ಇಂತಹ ಪರಿಶುದ್ಧ ಅರಿವು ನಮಗೊಮ್ಮೆ ಆಗಬೇಕಿತ್ತು. ಈ ಅರಿವಿನಿಂದ ನಾವು ಆತ್ಮನಲ್ಲಿ ನೆಲೆಗೊಳ್ಳಬೇಕಿತ್ತು. ಆ ಪರಮಾನಂದ ನಮಗೆ ಪ್ರಾಪ್ತಿಯಾಗಬೇಕಿತ್ತು. ಈ ಎಲ್ಲವೂ ದೊರೆತಾದಮೇಲೆ ಪುನಃ ಅನಂತ ದುಃಖಗಳಿಗೆ ಕಾರಣೀಭೂತವಾದಂತಹ ಈ ಜಡ ಶರೀರದ ಮೇಲೆ ಮೋಹಪಡುವುದಾದರೂ ಮತ್ತೇಕೆ ತಾಯಿ! ಅಷ್ಟು ಮಾತ್ರವಲ್ಲ ಈ ಮಾನವ ಶರೀರಕ್ಕಿಂತ ಒಂಟೆ ಶರೀರಗಳೇ ಸಾವಿರ ಪಾಲು ಮೇಲಾಗಿದ್ದವು. ಮಾನವ ಶರೀರದಲ್ಲಿದ್ದಾಗ ಪ್ರತಿನಿತ್ಯ ಸ್ನಾನಶೌಚಾದಿಗಳನ್ನು ಮಾಡಲೇಬೇಕು. ಮಲಮೂತ್ರ ವಿಸರ್ಜನೆಯ ನಂತರ ಶರೀರ ಶುದ್ಧಿಕರಿಸಿಕೊಳ್ಳಬೇಕು. ಉದರ ಪೋಷಣೆಗಾಗಿ ಪ್ರತಿನಿತ್ಯ ಅನ್ಯರಲ್ಲಿ ಭಿಕ್ಷೆ ಬೇಡಿ ತರಬೇಕು. ಆದರೆ ಈ ಒಂಟೆ ಶರೀರದಲ್ಲಿದ್ದಾಗ ಇವುಗಳಾವುದರ ಅವಶ್ಯಕತೆಯಿರುವುದಿಲ್ಲ. ಕಾಡಿನಲ್ಲಿ ಸಮೃದ್ಧವಾಗಿ ಬೆಳೆದುನಿಂತ ಗಿಡಮರಗಳೇ ಹಸಿವಿಗೆ ಆಹಾರ. ತೃಷೆ ನೀಗಿಸಲು ಹಳ್ಳಕೊಳ್ಳಗಳಿವೆ. ಮೈಮರೆತು ಆನಂದಿಸಲು ಪ್ರಕೃತಿ ಸೌಂದರ್ಯದ ಸೊಬಗು. ಆ ಕಾರಣ ನೀನು ನಮಗೆ ಒಂಟೆಯ ಜನ್ಮ ಪ್ರಾಪ್ತವಾಗಲೆಂದದ್ದು ಶಾಪವಲ್ಲ ತಾಯಿ, ಅದು ನೀ ನಮಗೆ ನೀಡಿದ ಅನುಗ್ರಹ" ಹೀಗೆಂದು ಋಷಿಕುಮಾರರು ಜಗನ್ಮಾತೆಗೆ ಹೇಳಿದರು.

ಮಹಾತ್ಮರು ಹೇಳಿರುವುದು ಇದಲ್ಲವೇ? "ತಾನಳಿದು ತಾನುಳಿದು ತನ್ನ ತಾನರಿತವನೇ ಸಂತ-ಮಹಂತ" ಎಂತೆಂದು, ನಾನಲ್ಲದ್ದನ್ನು ನಾನೆಂದು ಭ್ರಮಿಸುವುದು ಅಜ್ಞಾನ. ಅದು ದುಃಖಕ್ಕೆ ಕಾರಣ. ಅದನ್ನೇ ಅಕ್ಕಮ್ಮ ಹೀಗೆ ಹೇಳಿದ್ದಾಳೆ.

ನಾ ಹುಟ್ಟಿದಲ್ಲಿ ಸಂಸಾರ ಹುಟ್ಟಿತ್ತು
ಸಂಸಾರ ಹುಟ್ಟಿದಲ್ಲಿ ಅಜ್ಞಾನ ಹುಟ್ಟಿತ್ತು
ಅಜ್ಞಾನ ಹುಟ್ಟಿದಲ್ಲಿ ಆಸೆ ಹುಟ್ಟಿತ್ತು
ಆಸೆ ಹುಟ್ಟಿದಲ್ಲಿ ಕೋಪ ಹುಟ್ಟಿತ್ತು
ಈ ಕೋಪಾಗ್ನಿಯ ತಾಮಸ ಧೂಮ್ರ ಮುಸುಕಿದಲ್ಲಿ
ನಾ ನಿಮ್ಮ ಮರೆತು ಭವದುಃಖಕ್ಕೀಡಾದೆ
ನೀ ಕರುಣದಿಂದೆತ್ತಿ ಎನ್ನ ಮರಹ ವಿಂಗಡಿಸಿ
ನಿಮ್ಮ ಪಾದವನರುಹಿಸಯ್ಯಾ ಚನ್ನಮಲ್ಲಿಕಾರ್ಜುನಾ ॥

ಲೌಕಿಕ ದು:ಖದ ಉಗಮ ಸ್ಥಾನವೆಂತಲೂ ಹಾಗೂ ಅದು ಬೆಳೆದು ದೊಡ್ಡದಾಗುವುದನ್ನು ಸಹ ರೀತಿ ಬಹು ಮಾರ್ಮಿಕವಾಗಿ ವಚನಿಸಿದ್ದಾಳೆ. ನಾ ಹುಟ್ಟಿ ಸಂಸಾರ, ಸಂಸಾರ ಹುಟ್ಟಿ ಅಜ್ಞಾನ, ಅಜ್ಞಾನ ಹುಟ್ಟಿ ಆಸೆ, ಆಸೆ ಹುಟ್ಟಿ ಕೋಪ ಮುಂದೆ ಕೋಪ ತಾಪವಾಗಿ ಸುಡುವುದು. ಈ ಕೋಪ ತಾಪಗಳೇ ಮಾನವರ ಪಾಪಕ್ಕೆ ಕಾರಣವಾಗುವವು. ನನ್ನದು ಎಂಬ ಭವವೇ ಸಂಸಾರ.

**ಮಮೇತಿ ಬಧ್ಯತೇ ಜಂತು: ನ ಮಮೇತಿ ಪ್ರಮುಚ್ಯತೇ ।**
**ತತ್ಕರ್ಮ ಯತ್ ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ ॥**

ನನ್ನದು ಎಂಬ ಭಾವ ಬೆಳೆದಷ್ಟು, ದು:ಖ ತುಂಬರುವ ಸಂಸಾರಕ್ಕೆ ಅಂಟಿಕೊಳ್ಳುತ್ತಾರೆ. ಕಳಚಿಕೊಂಡಷ್ಟು ಬಂಧಮುಕ್ತರಾಗುತ್ತಾ ಬರುತ್ತಾರೆ. ಬಂಧನಕ್ಕೆ ಕಾರಣವಾದದ್ದು ಕರ್ಮ. ಮುಕ್ತಿ ಕಾರಣವಾದದ್ದು ಸದ್‌ವಿದ್ಯೆ. ಯಾವ ವಿದ್ಯೆಯಿಂದ ಮುಕ್ತಿಯು ಲಭಿಸುವುದಿಲ್ಲವೋ ಅದು ಸದ್‌ವಿದ್ಯೆಯಲ್ಲ.

**"ಕಾಶ್ಮೀರೇ ವಸತೇ ಕನ್ಯಾ: ಲಂಕಾಯಾ ವಸತೇ ವರ:"** ಕನ್ಯ ಕಾಶ್ಮೀರದ್ದು. ವರ ಶ್ರೀಲಂಕದ್ದು. ಎಲ್ಲಿಂದೆಲ್ಲಿಗೆ ಸಂಬಂಧ? ಮದುವೆಯ ಪೂರ್ವ ಅವಳು ನನ್ನವಳೆನಿಸಿರಲಿಲ್ಲ ಅವರ ವಂಶಜರೂ ನನ್ನವರೆನಿಸಿರಲಿಲ್ಲ. ಆದ್ದರಿಂದ ಅಂದವರ ಮನೆಯಲ್ಲಿ ಒದಗಿ ಬರುತ್ತಿದ್ದ ಸುಖದು:ಖಗಳು, ಸಾವು ನೋವುಗಳು ಅವು ಯಾವೂ ನನ್ನ ಮೇಲೆ ಪರಿಣಾಮ ಬೀರಲಿಲ್ಲ. ಎಂದು ವಿವಾಹವಾಯಿತೋ ಅಂದಿನಿಂದ ಅವಳ ಮೇಲೂ ಅವರ ವಂಶಜರ ಮೇಲೂ ನನ್ನವರೆಂಬ ಮೋಹ ಹುಟ್ಟಿಕೊಂಡಿತು. ಅಂದಿನಿಂದ ಪ್ರಾರಂಭಗೊಂಡ ಮೋಹ, ಆಸೆ, ದು:ಖ, ಕೋಪ, ತಾಪ, ಪಾಪಗಳಿಗೆ ಕಾರಣವಾಯಿತು.

ಯಾವುದೊಂದು ವಸ್ತು ನಮ್ಮಲ್ಲಿಗೆ ಬರುವ ಪೂರ್ವ ಅದು ಅಂಗಡಿಯಲ್ಲಿತ್ತು (ಬೇರೆಯವರದಾಗಿತ್ತು). ನಾವು ಕೊಂಡು ತಂದ ನಂತರ ಅದು ನಮ್ಮದಾಯಿತು. ನಮ್ಮದಾದ ಅದೇ ವಸ್ತು ಹಾಳಾದರೆ, ಕಳೆದರೆ, ಸುಟ್ಟರೆ, ಕೆಟ್ಟರೆ ನಮಗಾಗ ದು:ಖವಾಗುವುದು. ಅದೇ ವಸ್ತು ಅಂಗಡಿಯಲ್ಲಿದ್ದಾಗ ಸುಟ್ಟಿದ್ದರೆ, ಕೆಟ್ಟಿದ್ದರೆ ನಮಗಾಗ ದು:ಖವೆನಿಸುತ್ತಿರಲಿಲ್ಲ. ಯಾಕೆಂದರೆ ಆಗಿನ್ನು ಆ ವಸ್ತುವಿನ ಮೇಲೆ ನನ್ನದು ಎಂಬ ಮೋಹಭಾವ ಮೂಡಿರಲಿಲ್ಲ. ಇದೇ ಸಂಸಾರ.

ಜಗತ್ತು ಈಶ ನಿರ್ಮಿತ. ಸಂಸಾರ ಮಾನವ ನಿರ್ಮಿತ. ಹೌದು, ಬಾಹ್ಯಪ್ರಪಂಚದಲ್ಲಿ ಕಾಣುವ ಯಾವೊಂದು ಜಡ ವಸ್ತುಗಳಾಗಲಿ, ವ್ಯಕ್ತಿಗಳಾಗಲಿ ಸಂಸಾರವಲ್ಲ. ಆದರೆ ಆ ವಸ್ತು ಮತ್ತು ವ್ಯಕ್ತಿಗಳ ಮೇಲೆ ಅಭಿಮಾನ ತಾಳುವುದೇ ಸಂಸಾರ.

ಪರಿವ್ರಾಜಕನಾದ ಒಬ್ಬ ಸನ್ಯಾಸಿ ತಿರುಗಾಡುತ್ತಾ ಒಂದು ಅರಮನೆಯ ಹೆಬ್ಬಾಗಿಲ ಹತ್ತಿರ ಬಂದ. ಕಾವಲುಗಾರರಾರೂ ಇರಲಿಲ್ಲ. ನೇರ ಒಳನಡೆದು, ಸಿಂಹಾಸನವನ್ನೇರಿ ರಾಜ ಗಾಂಭೀರ್ಯದಿಂದ ಕುಳಿತುಬಿಟ್ಟ. ಆ ವೇಳೆಗೆ ರಾಜನೂ ಬಂದ. ಸಿಂಹಾಸನದ ಮೇಲೆ ಕುಳಿತಿರುವುದು ಒಬ್ಬ ಸನ್ಯಾಸಿಯಾದ್ದರಿಂದ ಹೆಚ್ಚಿಗೆ ಘರ್ಜಿಸದೆ, "ಏನಯ್ಯಾ, ಯಾರನ್ನು ಕೇಳಿ ಒಳಬಂದೆ?. ಇದೇನು ಧರ್ಮಛತ್ರ ಎಂದುಕೊಂಡಿರುವೆಯಾ?" ಎಂದು ಕೇಳಿದ. ಅದಕ್ಕೆ ಸನ್ಯಾಸಿಯು

"ಧರ್ಮಛತ್ರ ಎಂದರೇನು?" ಎಂದು ಕೇಳಿದ. ಹೀಗೆ ಪ್ರಶ್ನೆ ಕೇಳಿದ್ದು ಓರ್ವ ಸನ್ಯಾಸಿಯಾದ್ದರಿಂದ ಸಿಟ್ಟನ್ನು ನಿಗ್ರಹಿಸಿಕೊಂಡು ರಾಜ ಸುಮ್ಮನಿದ್ದ. ಪುನ: ಸನ್ಯಾಸಿ ಹೇಳಿದ! "ಬರೋರು ಬರುತ್ತಿರುತ್ತಾರೆ, ಹೋಗೋರು ಹೋಗುತ್ತಿರುತ್ತಾರೆ. ಇಂಥವರೇ ಇರಬೇಕು ಎಂಬ ನೀತಿನೇಮಗಳಿರುವುದಿಲ್ಲ. ಅಂತಹದ್ದೇ ಧರ್ಮಛತ್ರ" ಎಂತೆಂದು.

ಪುನ: ಸನ್ಯಾಸಿ ಕೇಳಿದ!

"ಹೌದು ನೀವೆಷ್ಟು ದಿನಗಳಿಂದ ಈ ಅರಮನೆಯಲ್ಲಿದ್ದೀರಿ?"

"ನಲವತ್ತು ವರ್ಷಗಳಿಂದ."

"ಅದಕ್ಕೂ ಮೊದಲು ಇಲ್ಲಾರಿದ್ದರು?"

"ನಮ್ಮ ತಂದೆ."

"ಅವರಿಗೂ ಮುಂಚೆ."

"ನಮ್ಮಜ್ಜ."

"ಹೋಗಲಿ ಬಿಡು ನಿನ್ನ ನಂತರ ಇಲ್ಲಿಗ್ಯಾರು ಬರುತ್ತಾರೆ?"

"ನನ್ನ ಮಗ."

"ಸರಿ ಮತ್ತೆ, ಬರೋರು ಬರುತ್ತಿರುತ್ತಾರೆ. ಹೋಗೋರು ಹೋಗುತ್ತಿರುತ್ತಾರೆ. ಯಾರೋಬ್ಬರೂ ಏನನ್ನೂ ಹೊತ್ತುಕೊಂಡು ಹೋಗುವುದಿಲ್ಲ. ಹೀಗೀರುವಾಗ ನಿನ್ನ ಅರಮನೆಯೂ ಧರ್ಮಛತ್ರವಲ್ಲದೆ ಮತ್ತಿನ್ನೇನು? ಇಗೋ ಈಗ ನಾನೂ ಕೂಡ ಹೊರಟೆ" ಎಂದು ಮುಸುನಗುತ್ತಾ ಸನ್ಯಾಸಿ ಹೊರನಡೆದ.

ರಾಮಕೃಷ್ಣ ಪರಮಹಂಸರು ಹೇಳುತ್ತಾರೆ, "ನೀನು ಇಲ್ಲಿ ಒಬ್ಬ ಅತಿಥಿಯಂತಿರು. ಯಜಮಾನನಂತಿರಬೇಡ" ಎಂತೆಂದು. ಆದರೆ ನಾವು ಆಸೆ ಮತ್ತು ಆಸಕ್ತಿಗಳಿಂದ ದು:ಖವನ್ನನುಭವಿಸುತ್ತಿದ್ದೇವೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮ ಹೇಳುತ್ತಾನೆ.

ಧ್ಯಾಯತೋ ವಿಷಯಾನ್ ಪುಂಸ: ಸಂಗಸ್ತೇಷೋಪ ಜಾಯತೇ ।
ಸಂಗಾತ್ಸಂಜಾಯತೇ ಕಾಮ: ಕಾಮಾತ್ಕ್ರೋಧೋಽಭೀಜಾಯತೇ (ಭ.ಗೀ.೨.೬೨)

ವಿಷಯುಗಳನ್ನು ಚಿಂತಿಸುವ ಪುರುಷನಿಗೆ ಆ ವಿಷಯುಗಳ ಮೇಲೆ ಆಸಕ್ತಿವುಂಟಾಗುತ್ತದೆ. ಆಸಕ್ತಿಯಿಂದ ವಿಷಯಗಳ ಕಾಮನೆ (ಆಸೆ) ಉಂಟಾಗುತ್ತದೆ. ಆ ಕಾಮನೆ (ಆಸೆ)ಯಲ್ಲಿ ಭಗ್ನವುಂಟಾದಾಗ, ಕ್ರೋಧವು ಉತ್ಪನ್ನವಾಗುತ್ತದೆ. ಇದನ್ನೆ ಅಕ್ಕಮಹಾದೇವಿ "ಆಸೆ ಹುಟ್ಟಿದಲ್ಲಿ ಕೋಪ ಹುಟ್ಟಿತ್ತು" ಎಂದಿರುವುದು.

ಕಾಮದ (ಆಸೆ) ಮತ್ತೊಂದು ಮುಖವೇ ಕ್ರೋಧ. ಸರ್ವಸಂಗ ಪರಿತ್ಯಾಗಿಗಳೆಂದು ಹೇಳಿಕೊಳ್ಳುವ ಅದೆಷ್ಟೋ ಸನ್ಯಾಸಿಗಳು ಕಾಮವನ್ನು ತ್ಯಜಿಸಿದ್ದೇವೆ ಎಂದು ಹೇಳಿಕೊಳ್ಳುವುದುಂಟು.

ಆದರವರ ತಪ್ಪು ಕಲ್ಪನೆ. ಯಾಕೆಂದರೆ ಅವರು ಸಿಟ್ಟನ್ನು (ಕ್ರೋಧವನ್ನು) ಗೆದ್ದಿರುವುದಿಲ್ಲ. ಮೇಲಿನ ಶ್ಲೋಕದ ಅಭಿಪ್ರಾಯದಂತೆ, ಕಾಮನೆಗಳಿಗೆ ಭಗ್ನವುಂಟಾದಾಗ ಕ್ರೋಧವು ಉತ್ಪನ್ನವಾಗುವುದು ಎಂತೆಂದು. ಅಂದಮೇಲೆ ಇನ್ನು ಅವರಲ್ಲಿ ಕಾಮನೆಗಳು ಉಳಿದುಕೊಂಡಿರುತ್ತವೆ ಎಂಬ ಅರ್ಥವು.

ದಯಾನಂದ ಸರಸ್ವತಿಗಳವರದೊಂದು ಸಿದ್ಧಾಂತ. ಅವರ ಸಿದ್ಧಾಂತದ ಪ್ರಕಾರ ಮೂರ್ತಿ ಪೂಜೆ ಮಾಡುವಂತಿರಲಿಲ್ಲ. ಈ ಬಗ್ಗೆ ಅವರೊಮ್ಮೆ ವಾರಣಾಸಿ (ಕಾಶಿ)ಯಲ್ಲಿ ಅಬ್ಬರದ ಪ್ರಚಾರ ನಡೆಸಿದ್ದರು. ಇವರ ಪ್ರವಚನದ ಪ್ರಭಾವಕ್ಕೊಳಗಾದ ಬಹಳಷ್ಟು ಜನ ದೇವಸ್ಥಾನಗಳಿಗೆ ಹೋಗುವುದನ್ನು ನಿಲ್ಲಿಸಿಬಿಟ್ಟರು. ಪ್ರತಿ ದೇವಸ್ಥಾನಗಳಲ್ಲಿ ಬರುವಂತಹ ಭಕ್ತರ ಸಂಖ್ಯೆ ಬಹಳಷ್ಟು ಕಡಿಮೆಯಾಯಿತು. ದಯಾನಂದ ಸರಸ್ವತಿಗಳು ವಾಸವಾಗಿದ್ದ ಕೋಣೆಯ ಸಮೀಪದಲ್ಲಿಯೇ ಒಂದು ದೇವಾಲಯವಿತ್ತು. ಆ ದೇವಸ್ಥಾನದ ಅರ್ಚಕನಿಗಂತೂ ಅವರ ಮೇಲೆ ಎಲ್ಲಿಲ್ಲದ ಕೋಪ. ಯಾಕೆಂದರೆ ಅರ್ಚಕನು ದಯಾನಂದ ಸರಸ್ವತಿಗಳು ಆ ದೇವಸ್ಥಾನದ ಮುಂದೆ ಹಾದು ಹೋಗುವಾಗಲೆಲ್ಲ ಬಾಯಿಗೆ ಬಂದಂತೆ ಬೈಯುತ್ತಿದ್ದ. ಇದಾವುದನ್ನು ಅವರು ತಮ್ಮ ಗಮನಕ್ಕೆ ತಂದುಕೊಳ್ಳದೆ ಓಡಾಡುತ್ತಿದ್ದರು.

ಮೂರ್ತಿಪೂಜೆ ವಿರೋಧವಾಗಿದ್ದರೂ ಅವರಲ್ಲಿ ಒಂದು ನೇಮವಿತ್ತು. ತಾವು ಏನನ್ನಾದರೂ ತಿನ್ನುವ ಪೂರ್ವದಲ್ಲಿ ಅದನ್ನು ಮತ್ತೊಬ್ಬರಿಗೆ ಹಂಚಿಯೇ ತಿನ್ನುತ್ತಿದ್ದರು. ಒಂದು ದಿನ ಆ ಬೀದಿಯಲ್ಲಿ ಯಾವೊಬ್ಬ ಅತಿಥಿಯೂ ಅವರ ಕಣ್ಣಿಗೆ ಬೀಳಲಿಲ್ಲ. ತಾವೇ ಹುಡುಕುತ್ತಾ ಹೊರನಡೆದರು. ದೇವಸ್ಥಾನದ ಬಳಿ ಆ ಅರ್ಚಕ ಕುಳಿತ್ತಿದ್ದ. ಹತ್ತಿರ ಬಂದಾಗ ಅವನಿಗೆ ಅವರ ಮೇಲೆ ಕೋಪ ಉಕ್ಕೇರಿ ಬಂತು. ಪುನ: ಎಂದಿನಂತೆ ಅವರನ್ನು ಅವಾಚ್ಯ ಶಬ್ದಗಳಿಂದ ನಿಂದಿಸಹತ್ತಿದ. ಬೈದು ಬೈದು ಸುಮ್ಮನಾದ ನಂತರ ದಯಾನಂದರು ತಮ್ಮ ನೇಮವನ್ನು ಆತನಿಗೆ ತಿಳಿಸಿ, ನೀವು ಬಂದು ನನ್ನ ಆತಿಥ್ಯ ಸ್ವೀಕರಿಸಬೇಕೆಂದು ಕೇಳಿಕೊಂಡರು.

ಅವರ ಮೇಲೆ ಪೂಜಾರಿಗ್ಯಾಕೋ ಸಂಶಯ. ಆಗವನ ಮನಸ್ಸು ಮಾತಾಡಿತು. "ನಾನಿವರನ್ನು, ಅತ್ತ ಹೋದರೂ ಬೈಯ್ಯುತ್ತಿದೆ. ಇತ್ತ ಬಂದ್ರೂ ಬೈಯ್ಯುತ್ತಿದೆ. ಈಗ ಬ್ಯಾರೆ ಎದುರಿಗೇ ಬೈದೀನಿ. ಅದಕ್ಕೆ ಇವ್ರು ನನ್ನ ತನ್ನ ಕೋಣೆಗೆ ಕರ್‍ಕೊಂಡು ಹೋಗಿ ಹೊಡೆಯೋಣ ಅಂದ್ಕೊಂಡಿರಬೇಕು. ಆಗಲಿ ಅದೇನಾಗ್ತೈತೋ ಆಗಿಹೋಗ್ಲಿ. ಇವ ನಾಲ್ಕೈದು ಸಲ ಒದ್ರೆ ನಾನು ಒಮ್ಮೆಯಾದ್ರೂ ಒದಿಯೋಣ ಅಂದ್ಕೊಂಡು ಅವರ ಹಿಂದೆ ಹೋದ. ಆದ್ರೆ ದಯಾನಂದ ಸರಸ್ವತಿಗಳು ಅವನನ್ನು ಅತಿಥಿಯಂತೆ ಸತ್ಕರಿಸಿದರು. ಹಾಲು ಹಣ್ಣು ಹಂಪಲು ಕೊಟ್ಟು ನಮಸ್ಕರಿಸಿ ತಾವು ತಿನ್ನಲು ಪ್ರಾರಂಭಿಸಿದರು.

ಪೂಜಾರಿಯು ಅಂದುಕೊಂಡಂತೆ ಅಲ್ಲಿ ಏನೂ ನಡಿಲಿಲ್ಲ. ಗಾಬರಿಯಾಗಿ ಅವರ ಮುಖವನ್ನು ನೋಡುತ್ತಾ "ಅಲ್ಲ ಸ್ವಾಮಿ, ನೀವು ಬಂದಾಗ್ನಿಂದ ನಾ ನಿಮ್ಮನ್ನು ಅತ್ತ ಹೋದ್ರು ಬೈತಿದ್ದೆ, ಇತ್ತ ಬಂದ್ರೂ ಬೈತಿದ್ದೆ. ಇದ್ಯಾವುದನ್ನೂ ನೀವು ನಿಮ್ಮ ತಲ್ಯಾಗೆ ಇಟ್ಕೊಂಡಿಲ್ಲವೇನು?" ಅಂತ ಪ್ರಶ್ನಿಸಿದ.

ಅದಕ್ಕವರು "ಅಲ್ಲ ಸ್ವಾಮಿ ಒಳ್ಳೊಳ್ಳೆ ವಿಚಾರಗಳನ್ನೇ ನನ್ನ ತಲ್ಯಾಗ ಇಟ್ಕೊಳ್ಳಾಕೆ

ಜಾಗ ಉಳಿದಿಲ್ಲ. ಇನ್ನು ಕೆಟ್ಟ ವಿಚಾರಗಳಿಗೆ ಜಾಗ ಎಲ್ಲಿಂದ ತರ್ಲಿ" ಎಂತೆಂದರು.

ಇದು ಶಿವಶರಣರ ಸಂತರ ಮಹಾಂತರ ಲಕ್ಷಣ. "ಖುದ್ ಮಿಟೇತೋ ಖುದಾ ಮಿಲೇಗಾ" ಎಂತೆಂದು ಹಿಂದಿ ಕವಿಯೊಬ್ಬರು ಹೇಳಿದ್ದಾರೆ. ಅಂದರೆ ಅಹಂಕಾರ ಸತ್ತರೆ ಮಾತ್ರ ದೇವರು ಸಿಗುತ್ತಾನೆ ಎಂದು. 'ನಾನು' ಎಂಬ ಅಹಂಕಾರ ನನ್ನದು ಎನ್ನುವ ಮಮಕಾರ. ಇದೆ ಸಂಸಾರ. ಇಲ್ಲಿ ಆಸೆ, ದು:ಖ, ಕೋಪ, ತಾಪ ಹಾಗೂ ಪಾಪಗಳೆಲ್ಲವೂ ಇವೆ. 'ಪಾಪಿ ಸಮುದ್ರ ಹೊಕ್ಕರೂ ಮೊಳಕಾಲ್ಮಟ್ಟ ನೀರು' ಎಂಬ ಗಾದೆಯಂತೆ ಸಂಸಾರ ದು:ಖದಿಂದೆಂದೂ ದೂರವಾಗಿಲ್ಲ.

ವಿಷ್ಣುವಿನ ನರಸಿಂಹ ಅವತಾರದಲ್ಲಿ ಹಿರಣ್ಯಕಶ್ಯಪನ ಸಂಹಾರವಾಯಿತು. ನಂತರ ನರಸಿಂಹ ಪ್ರಸನ್ನನಾಗಿ ಪ್ರಹ್ಲಾದನನ್ನು ಕೇಳುತ್ತಾನೆ. "ಕಂದಾ ನನಗಾಗಿ ನೀನು ಬಹಳಷ್ಟು ಬಾಧೆಪಟ್ಟೆ. ಇನ್ನು ನನ್ನೊಲುಮೆ ನಿನಗಾಗಿದೆ. ನಿನಗೇನು ವರಬೇಕು ಕೇಳಿಕೋ ಪ್ರಸಾದಿಸುತ್ತೇನೆ" ಎಂತೆಂದು. ಪ್ರಹ್ಲಾದನದಕ್ಕುತ್ತರವಾಗಿ, "ಹೇ ಭಗವಂತ ನಿನ್ನನುಗ್ರಹವನ್ನು ನಿರಾಕರಿಸಲಾರೆ. ನಿನಗೇನು ವರ ಕೊಡಬೇಕೆಂದಿದ್ದಲ್ಲಿ ಈ ನನ್ನ ಹೃದಯದಲ್ಲಿ ಯಾವೊಂದು ಕೋರಿಕೆಗಳೇ ಇಲ್ಲದಂತೆ ಮಾಡಿಬಿಡು. ಅದನ್ನೇ ನಾನು ಮಹಾಪ್ರಸಾದವಾಗಿ ಸ್ವೀಕರಿಸುವೆ.

ಆಸೆಗಳೆಲ್ಲಾ ಸತ್ತು ಹೋದರೆ ಆನಂದಕ್ಕೆ ಮಿತಿಮೇರೆಗಳೇ ಇರುವುದಿಲ್ಲ. ಆತ ಜೀವಾತ್ಮನಲ್ಲ ಪರಮಾತ್ಮ. ಇದೇ ನಿಜವಾದ ಆಧ್ಯಾತ್ಮ. ಆದರೆ ಲೌಕಿಕದ ಸಿದ್ಧಾಂತಗಳೇ ಬೇರೆಯಾಗಿರುತ್ತವೆ. ಅಣಕು ಎಂಬಂತೆ ಇದಕ್ಕೊಂದು ದೃಷ್ಟಾಂತ ಮಾರ್ಕಂಡೇಯ ಪುರಾಣದಲ್ಲಿದೆ. ಒಬ್ಬ ತನ್ನ ಮನೆಯಲ್ಲಿ ಗಿಳಿಯೊಂದನ್ನು ಸಾಕಿಕೊಂಡಿದ್ದಾನೆ. ಜೊತೆಗೊಂದು ಬೆಕ್ಕನ್ನೂ ಸಾಕಿದ್ದ. ಆ ಬೆಕ್ಕು ಆಗೊಮ್ಮೆ ಈಗೊಮ್ಮೆ ಇಲಿಗಳನ್ನು ಕೊಲ್ಲುತ್ತಿತ್ತು. ಅದನ್ನು ಕಂಡ ಆತ ಹೀಗೆ ವೇದಾಂತಿಗಳಂತೆ ಮಾತನಾಡುತ್ತಿದ್ದ. "ಪಾಪ ಆ ಇಲಿಯ ಆಯುಷ್ಯ ಮುಗಿದಿತ್ತು. ಅದಕ್ಕದು ಸತ್ತಿತು" ಎಂತೆಂದು. ಒಮ್ಮೆ ಅವರು ಮನೆಯಲ್ಲಿರಲಿಲ್ಲ. ಎಲ್ಲರೂ ಹೊರ ಹೋಗಿದ್ದರು. ಪುನ: ಮನೆಗೆ ಬಂದು ಬಾಗಿಲು ತೆಗೆದು ನೋಡಿದಾಗ ಆ ಬೆಕ್ಕು ಅವರು ಸಾಕಿದ ಗಿಳಿಯನ್ನು ತಿನ್ನುತ್ತಿತ್ತು. ಆಗವನಿಗೆ ಬಹಳ ದು:ಖವಾಯಿತು. "ಅಯ್ಯೋ ಹೀಗಾಗಬಾರದಿತ್ತು. ನಾವೇ ತಪ್ಪು ಮಾಡಿದೆವು. ಪಂಜರದ ಬಾಗಿಲಿಗೆ ಬೀಗ ಹಾಕಲಾರದ್ದೇ ದೊಡ್ಡ ತಪ್ಪು ಎಂದು ಪರಿತಪಿಸಿದ. ಅನುಕೂಲ ಸಿಂಧುಗಳು ನಾವು. ವೇದಾಂತವನ್ನೂ ಹೇಳುತ್ತೇವೆ. ರಾದ್ಧಾಂತವನ್ನೂ ಮಾಡುತ್ತೇವೆ. ನಮ್ಮಂಥವರ ನಾಟಕ ಆ ಭಗವಂತ ಅರಿಯಲಾರನೇ. ಇಂಥವರಿಂದ ನಾವು ಪಂಡಿತರೆನಿಸಿಕೊಳ್ಳುವುವೇ ವಿನ: ಜ್ಞಾನಿಗಳೆನಿಸಿಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ಸರ್ವಜ್ಞ ಹೇಳುತ್ತಾನೆ.

ಅಕ್ಕರವು ತರ್ಕಕ್ಕೆ ಲೆಕ್ಕವು ಗಣಿತಕ್ಕೆ
ಮಿಕ್ಕ ಓದುಗಳು ತಿರುಪಕ್ಕೆ ಮೋಕ್ಷಕ್ಕಾ
ರಕ್ಕರವೇ ಸಾಕು ಸರ್ವಜ್ಞ ॥

ಮಿಕ್ಕೆಲ್ಲ ಓದುಗಳು ತಿರುಪಕ್ಕೆ ಸಮಾನ. ಕೇವಲ ಉದರ ಪೋಷಣೆಗಷ್ಟೆ. ಮಾನವ ಜನ್ಮದ ಗುರಿಸಾಧನೆಗಲ್ಲ. ಇದಕ್ಕೆ ನನ್ನದೊಂದು ಸಾಹಿತ್ಯ.

ಎರಕೂಳು ತಿಂದ್ ತಿಂದು
ನರಕದಾ ಹುಳಕ್ಕಿಂತ ಕೀಳಾದೆ
ಪರಧನಕೆ ಕೈಯೊಡ್ಡಿ
ಪರಪದವಿ ಕಳಕೊಂಡೆ
ತಿರುತಿರುದು ಬೇಡ್ಬೇಡಿ
ಮನ ದುರ್ಬಲವಾಯ್ತು
ಶ್ರೀ ಗುರು ಸಿದ್ಧಲಿಂಗೇಶಾ
ನೀ ಕೊಟ್ಟ ಸಂಪದವನರಿಯದಾ
ಅವಿವೇಕಿ ನಾನು! ಅರುವಿನಾ
ವರವನುಗ್ರಹಿಸಿ ಸಲಹಯ್ಯಾ
ಎಮ್ಮಿಗನೂರೇಶ ॥

ಗುರುಗಳೊಬ್ಬರು ಆಗರ್ಭ ಶ್ರೀಮಂತನಾದ ಭಕ್ತನೋರ್ವನ ಮನೆಗೆ ಹೋಗಿದ್ದರು. ಆ ಶ್ರೀಮಂತನಿಗೆ ಆಸ್ತಿ ಅಂತಸ್ತುಗಳ ಮದವಿರಲಿಲ್ಲ. ಆದರೆ ಆತನ ಮಗ ತದ್ವಿರುದ್ಧ. ಅವನಿಗೆ ಧನಮದ, ವಿದ್ಯಾಮದ, ಯೌವನದಮದ, ಅಧಿಕಾರಮದ ಹಾಗೂ ಸ್ವೇಚ್ಛಾಮದಗಳು ತಾಂಡವವಾಡುತ್ತಿದ್ದವು. ಅದು ಗುರುಗಳಿಗೆ ಅರ್ಥವಾಯಿತು. ಯಾಕೆಂದರೆ ಗುರುಗಳು ಅವರ ಮನೆಗೆ ಹೋದಾಗ ಅವನು ಕುಳಿತಂತಹ ಶೈಲಿ, ಅವನ ಹಾವಭಾವ ತಿಳಿಸಿದ್ದವು. ಆದರೂ ಗುರುಗಳು ಅವನನ್ನು "ಏನಪ್ಪಾ ಬಹಳ ಓದಿದಂತೆ ಕಾಣುತ್ತಿದೆ. ಏನು ಓದಿರುವೆ? ಕೆಲಸ ಏನು ಮಾಡುತ್ತಿರುವೆ?" ಎಂದು ಕೇಳಿದರು.

ಅದಕ್ಕವನು ಅಹಂಕಾರದಿಂದ "ಎಂ.ಎ. ಮಾಡಿಕೊಂಡಿದ್ದೀನಿ, ಬೆಂಗಳೂರಲ್ಲಿ ಲಕ್ಚರ್ ಇದ್ದೀನಿ" ಅಂದ.

"ಮುಂದೇನು ಮಾಡಬೇಕೆಂದಿರುವೆ?"

"ಮದುವೆ ಮಾಡಿಕೊಳ್ಳುವೆ."

"ಮತ್ತೆ ಮುಂದೆ?"

"ಮಕ್ಕಳಾಗುತ್ತವೆ, ಚೆನ್ನಾಗಿ ಓದಿಸುತ್ತೇನೆ. ಅವರಿಗಾಗಿ ಬಹಳಷ್ಟು ಆಸ್ತಿಪಾಸ್ತಿ ಮಾಡುತ್ತೇನೆ."

"ಆಮೇಲೆ?"

"ವಯಸ್ಸಾಗುತ್ತೆ ಮೊಮ್ಮಕ್ಕಳ ಜೊತೆ ಕಾಲ ಕಳೆಯುತ್ತೇನೆ."

"ಮತ್ತೆ?"

"ಮತ್ತೆ ಮತ್ತೆ ಅಂದ್ರೆ ಮತ್ತೇನು ಹೇಳ್ಲಿ-ಒಂದಿನ ಸಾಯ್ತಿನಿ."

ಆಗ ಗುರುಗಳು ಹೇಳಿದರು, "ನಿನ್ನ ಈ ವಿದ್ಯೆ ಎಲ್ಲಿಯವರೆಗೆ ಕೆಲಸ ಮಾಡ್ತು. ಸಾಯೋವರೆಗೆ ಮಾತ್ರ. ಆದ್ರೆ ಸತ್ತಮೇಲೆ ಏನಾಗ್ತೀನಿ? ಹುಟ್ಟೋಕ್ಕಿಂತ ಮುಂಚೆ ನಾನೇನಾಗಿದ್ದೆ? ನಾನಿಲ್ಲಿ ಬಂದಿರುವುದಾದರೂ ಏಕೆ? ಹಾಗೂ ನಾನಾರು? ಇದೆಲ್ಲವನ್ನು ನಿನ್ನ ಎಂ.ಎ. ಪದವಿಯಲ್ಲಿ ಓದಿಲ್ಲವೆ? ಇದನ್ನೋದಿದ್ದರೆ ನೀನೆಷ್ಟು ಓದಿದ್ದರೂ ವ್ಯರ್ಥ. ತಿರುಕನಿಗೂ ನಿನಗೂ ವ್ಯತ್ಯಾಸವಿರಲಿಕ್ಕೆ ಸಾಧ್ಯವಿಲ್ಲ. ಯಾಕೆಂದರೆ ಅವನು ತನ್ನ ಕೊನೆಯ ಉಸಿರಿರುವ ಪರ್ಯಂತರ ಬದುಕಿದ್ದಾದರೂ ಹೊಟ್ಟೆ ಹಾಗೂ ಬಟ್ಟೆಗಾಗಿ. ನೀನೂ ಅಷ್ಟಕ್ಕೆ ಬದುಕಿ ಸತ್ತರೆ ಇಬ್ಬರಲ್ಲೂ ವ್ಯತ್ಯಾಸವಿರಲು ಸಾಧ್ಯವಿಲ್ಲ" ಹೀಗೆ ಹೇಳಿ ಮೌನವಿಸಿದರು.

ನಿರ್ಗುಣಸ್ಯ ಹತಂರೂಪಂ ದುಶ್ಶೀಲಸ್ಯ ಹತಂ ಕುಲಂ ।
ಅಸಿದ್ಧಸ್ಯ ಹತಾವಿದ್ಯಾ ಅಭೋಗೇನ ಹತಂ ಧನಂ ॥ (ಚಾಣುಕ್ಯನೀತಿ)

ಗುಣವಿಲ್ಲದ ರೂಪ ವ್ಯರ್ಥವಾದುದು. ದುರಾಚಾರಗಳೇ ಕುಲಕ್ಕೆ ಕಂಟಕವೆನಿಸುವವು. ಸಿದ್ಧಿಯಿಲ್ಲದ ವಿದ್ಯೆ ಅನರ್ಥವಾದುದು. ಸುಖಕ್ಕೆ ಬಾರದ ಹಣ ಇದ್ದೂ ಸತ್ತಂತಿರುವುದು. ಚಾಣುಕ್ಯನಿಲ್ಲಿ ಸಿದ್ಧಿ ಇಲ್ಲದ ವಿದ್ಯೆ ಅನರ್ಥ ಎಂದು ಹೇಳಿದ್ದಾನೆ. ಇದನ್ನೇ ಶಂಕರಾಚಾರ್ಯರು "ಕಸ್ತ್ವಂಕೋಹಂ ಕುತ ಆಯಾತ:? ಎಂದಿದ್ದಾರೆ. ನೀನಾರು? ಎಲ್ಲಿಂದ ಬಂದೆ? ನಿನ್ನ ಜೀವನದ ಪರಮಗುರಿಯೇನು? ಇದನ್ನರಿಯುವುದೇ ಸದ್‌ವಿದ್ಯೆ ಎಂದಿರುವರು.

ಛಾಂದೋಗ್ಯ ಉಪನಿಷತ್ತಿನಲ್ಲಿ ಒಂದು ಕಥೆಯಿದೆ. ಉದ್ಧಾಲಕನೆಂಬ ಮಹರ್ಷಿಯ ಮಗ ಶ್ವೇತಕೇತು. ಅವನಿಗಾಗಲೆ ೧೨ ವರ್ಷ. ತಂದೆಯೊಂದು ದಿನ ಮಗನನ್ನು ಕರೆದು, "ಮಗೂ, ನಮ್ಮ ವಂಶದಲ್ಲಿ ಪ್ರತಿಯೊಬ್ಬರೂ ವೇದಾಗಮ ಪಂಡಿತರು. ಆದ್ದರಿಂದ ನೀನೂ ಸಹ ಈ ವಂಶದ ಕೀರ್ತಿಯನ್ನು ಬೆಳಗಿಸಲು ಯೋಗ್ಯ ಗುರುವಿನಿಂದ ಸದ್ವಿದ್ಯೆಯನ್ನು ಅರಿತು ಬರಬೇಕು. ಇದೇ ನನ್ನ ಆಸೆ ಹೋಗಿ ಬಾ" ಎಂದು ಆಶೀರ್ವದಿಸಿ ಕಳುಹಿಸಿದರು. ಶ್ವೇತಕೇತು ತಂದೆಯ ಅಪ್ಪಣೆಯಂತೆ ಯೋಗ್ಯ ಗುರುಗಳನ್ನು ಶೋಧಿಸಿದ. ಅವರಲ್ಲಿ ೧೨ ವರ್ಷಗಳ ಪರ್ಯಂತರ ವಿದ್ಯೆಯನ್ನು ಕಲಿತ. ಸಕಲ ವಿದ್ಯಾಪಾರಾಂಗತನಾಗಿ ಗುರುಗಳಿಂದ ಆಶೀರ್ವಾದ ಪಡೆದು ಮರಳಿ ತಂದೆಯಲ್ಲಿಗೆ ಬಂದ. ಶ್ವೇತಕೇತುವಿನಲ್ಲಿ ವಿದ್ಯೆಯೇನೋ ಅಪಾರವಾಗಿತ್ತು. ಆದರೆ ವಿದ್ಯೆಯಲ್ಲಿ ನನ್ನನ್ನು ಮೀರಿಸುವವರ್‍ಯಾರೂ ಇಲ್ಲವೆಂಬ ಅಹಂಕಾರ ತಾಂಡವವಾಡುತ್ತಿತ್ತು. ತಂದೆ ಒಂದೆರಡು ದಿನ ಸುಮ್ಮನಿದ್ದು ಒಂದು ದಿನ ಶ್ವೇತಕೇತುವನ್ನು ತನ್ನ ಬಳಿ ಕರೆದು "ಮಗೂ, ನಾ ಹೇಳಿದಂತೆ ಸಕಲ ವಿದ್ಯಾಪಾರಾಂಗತನಾಗಿ ಬಂದಿರುವೆಯಲ್ಲವೆ?" ಎಂದು ಕೇಳಿದ.

"ಹೌದಪ್ಪಾ, ನನ್ನನ್ನು ಮೀರಿಸುವವರಾರೂ ಇರಲಿಕ್ಕಿಲ್ಲ" ಎಂತೆಂದ. ಮಗನ ಅಹಂಕಾರ ತಂದೆಗೆ ಸ್ವಲ್ಪ ನೋವುಂಟು ಮಾಡಿತು. ಯಾಕೆಂದರೆ ಒಬ್ಬ ಸುಭಾಷಿತಕಾರ ಹೇಳುತ್ತಾನೆ,

ಕಾವ್ಯಶಾಸ್ತ್ರ ವಿನೋದೇನ ಕಾಲೋ ಗಚ್ಛತಿಧೀಮತ ।
ವ್ಯಸನೇನ ಚ ಮೂರ್ಖಾಣಾಂ ನಿದ್ರಾಯ ಕಲಹೇನ ॥

ಕಾವ್ಯಶಾಸ್ತ್ರಗಳನ್ನು ವಿನೋದ (ತರ್ಕ)ಕ್ಕೆ ಬಳಸಿ ಕಾಲಾಹರಣ ಮಾಡುವುದು, ಮೂರ್ಖನು

ನಿದ್ರೆಯಲ್ಲಿ ಕಲಹ ಮಾಡುವುದು ಎರಡೂ ಒಂದೇ ಎಂತೆಂಬುದಾಗಿದೆ. ಆದರೂ ತಂದೆ ಮಗನನ್ನು "ಮಗೂ ನಿನ್ನ ಗುರುಗಳು ನಿನಗೆ ತಿಳಿಯದದ್ದನ್ನು ತಿಳಿಸುವ ವಿದ್ಯೆ ಹೇಳಿ ಕೊಟ್ಟಿರುವರೇ?" ಎಂದು ಕೇಳಿದಾಗ ಮಗ ವಿಚಲಿತನಾದ. ನಾಲಿಗೆ ಒಣಗಿತು. ಆದರೂ "ಅಪ್ಪಾಜಿ, ಅಂತಹ ವಿದ್ಯೆ ಯಾವುದು? ಬಹುಶಃ ಗುರುಗಳಿಗೆ ಆ ವಿದ್ಯೆ ತಿಳಿದಿರಲಿಕ್ಕಿಲ್ಲ. ದಯಮಾಡಿ ನನಗೆ ಆ ವಿದ್ಯೆಯನ್ನು ಹೇಳಿಕೊಡಿ" ಎಂದು ಬೇಡಿಕೊಂಡ.

"ಮಗೂ, ಮಡಿಕೆ ಕುಡಿಕೆಗಳಿಗೆ ಮಣ್ಣೇ ಮೂಲ. ಆಭರಣಾದಿಗಳಿಗೆ ಚಿನ್ನ ಬೆಳ್ಳಿಗಳೇ ಮೂಲ. ಹಾಗೆ ನಿನಗೂ ನನಗೂ ಈ ಜಗತ್ತಿನಲ್ಲಿರುವ ಸಮಸ್ತಕ್ಕೂ ಮೂಲವೊಂದಿದೆ. ಅದನ್ನರಿತಾಗ ಮಾತ್ರ ನಾವು ಪೂರ್ಣಜ್ಞರಾಗುವುದು. ಅದು ತಿಳಿಯಲಾರದ್ದು! ಅದನ್ನೇ ತಿಳಿಯಬೇಕು. ಅದು ಸದ್‌ವಿದ್ಯೆ ಎಂದು ಹೇಳಿದಾಗ ಶ್ವೇತಕೇತುವಿಗೆ ಮತ್ತಷ್ಟೂ ಕುತೂಹಲ ಹೆಚ್ಚಾಯಿತು. ಕೂಡಲೆ "ಅಪ್ಪಾಜಿ, ನನಗೆ ಆ ವಿದ್ಯೆಯನ್ನು ತಿಳಿಸಿಕೊಡಿ" ಎಂದು ಕೇಳಿದ.

ತಂದೆ, "ಅಲ್ನೋಡು ಅದೊಂದು ಮರವಲ್ಲವೆ? ಆ ಮರದ ಕಾಂಡವನ್ನು ಎಲ್ಲಿ ಕೆತ್ತಿದರೂ ಒಂದು ರೀತಿಯ ದ್ರವ ಬರುವುದು. ಅಂದರೆ ಆ ಮರ ಬದುಕಿದೆ ಎಂದರ್ಥ. ಯಾಕೆಂದರೆ ಆ ಮರದಲ್ಲಿ ಜೀವವೆಂಬ ರಸವಿದೆ. ಆದರೆ ಆ ಮರದ ಯಾವುದಾದರೂ ಕೊಂಬೆಯನ್ನು ಕಡಿದು ಹಾಕಿದರೆ ಕೆಲ ದಿನಗಳ ನಂತರ ಆ ಕೊಂಬೆ ಬಾಡಿ ಹೋಗುವುದು. ಕಾರಣವಿಷ್ಟೆ, ಆ ಕೊಂಬೆಯಲ್ಲಿ ಜೀವವೆಂಬ ಚೈತನ್ಯರಸ ಇಲ್ಲವಾಗುವುದು. ಆದರೆ ಮರ ಬಾಡುವುದಿಲ್ಲ. ಅದರಲ್ಲಿ ಜೀವವೆಂಬ ಚೈತನ್ಯರಸ ಇರುತ್ತದೆ. ಹಾಗೆ ಮಾನವರ ಶರೀರವೂ ಸಹ. ಯಾವಾಗ ಈ ಶರೀರದಿಂದ ಜೀವ (ಪ್ರಾಣ)ವೆಂಬ ಚೈತನ್ಯವು ಅಗಲಿ ಹೋಗುವುದೋ ಆ ಕ್ಷಣವೇ ಮನುಷ್ಯ ಸಾಯುವನು. ಆಗ ಈ ಶರೀರವು ಒಣಗಿದ ಕಟ್ಟಿಗೆಯಂತಾಗುವುದು. ಆದರೆ ಈ ಶರೀರದಿಂದ ಹೊರಹೋದಂತಹ ಆತ್ಮಚೈತನ್ಯಕ್ಕೆ ಸಾವೆಂಬುದಿರುವುದಿಲ್ಲ. ಅದು ಅವಿನಾಶಿ, ವಿಶ್ವವ್ಯಾಪಿ. ಆ ಆತ್ಮವೇ ನಾನು, ನೀನು ಹಾಗೂ ಈ ಪ್ರಪಂಚದಲ್ಲಿರುವ ಸಕಲ ಚರಾಚರ ವಸ್ತುಗಳು" ಎಂದು ಹೇಳಿದ.

"ಅಪ್ಪಾಜಿ ನಾವೇಕೆ ಆ ಆತ್ಮವನ್ನು ನೋಡಲಿಕ್ಕಾಗುತ್ತಿಲ್ಲ?" ಎಂದು ಕೇಳಿದ.

"ಮಗು ಆತ್ಮವನ್ನು ನೋಡಲು ಬಾರದು. ಅದನ್ನು ಅರಿಯಬೇಕಷ್ಟೇ. ಅಲ್ನೋಡು ಅಲ್ಲೊಂದು ಮರವಿದೆ. ಆ ಮರದಲ್ಲಿ ಹಣ್ಣುಗಳಿವೆ. ಆ ಹಣ್ಣುಗಳೊಳಗೆ ಬೀಜಗಳಿರುತ್ತವೆಯಲ್ಲವೇ? ಆ ಬೀಜಗಳನ್ನು ಎರಡು ಹೋಳಾಗಿ ಮಾಡಿ ನೋಡಿದರೆ ಅದರಲ್ಲಿ ಮೊಳಕೆಯಿರುತ್ತದೆ. ಅದೇ ಮುಂದೆ ಮರವಾಗುವುದು. ಅರ್ಥಾತ್ ಮರದಲ್ಲಿ ಬೀಜವಿದೆ, ಬೀಜದೊಳಗೆ ಮರವಿದೆ. ಇದನ್ನೇ ನಮ್ಮ ಶಾಸ್ತ್ರಗಳು "ಬೀಜಾಂಕುರನ್ಯಾಯ" ಎಂದು ಕರೆದಿರುವುದು.

"ಸರ್ವಂ ಶಿವಮಯಂ ಜಗತ್" ಎಂಬಂತೆ ಆ ಆತ್ಮಚೇತನವೇ ನಾನು, ನೀನು, ಈ ಜಗತ್ತಿನಲ್ಲಿ ಕಾಣುವ ಸಮುವಸ್ತ್ರವೂ ಆಗಿದೆ. ಇದೇ ತಿಳಿಯದ್ದನ್ನು ತಿಳಿಸುವ ವಿದ್ಯೆ

ಯಾವುದೊಂದನ್ನು ತಿಳಿದರೆ ಮತ್ತೆಲ್ಲವನ್ನೂ ತಿಳಿಯುವಂತಹ ವಿದ್ಯೆ. ಈ ಅವಿನಾಶಿ ಆತ್ಮನೇ ನಾನು ನೀನು ಸಮಸ್ತವೂ ಆಗಿರುವುದು. ಇದನ್ನೇ ನಿಜಗುಣ ಶಿವಯೋಗಿಗಳು ಹೇಳಿರುವುದು. "ಮನುಜಕುಲ ಜನನದ ಲಾಭವಾಗುವುದು? ಆನಾರೆಂದರಿವುದು" ಎಂತೆಂದು.

ಈ ಅರಿವು ಕೇವಲ ಕೇಳುವುದರಿಂದ ಬರುವಂತಹದಲ್ಲ. ಸಾಧನೆಯೂ ಬಲಿಯಬೇಕಿದೆ. ಸಾಧಕನು ತನ್ನ ನಿಜ ಸ್ವರೂಪವನ್ನರಿಯಲು ತನ್ನ ಮನಸ್ಸನ್ನು ದೇಹದಿಂದ ಪ್ರಾಣಕ್ಕೆ, ಪ್ರಾಣದಿಂದ ಒಳ ಮನಸ್ಸಿಗೆ, ಒಳಮನಸ್ಸಿನಿಂದ ಒಳಬುದ್ಧಿಗೆ, ಒಳಬುದ್ಧಿಯಿಂದ ಅಹಂಕಾರಕ್ಕೆ ಅಂದರೆ ದೇಹ ಪ್ರಾಣ ಮನಸ್ಸು ಹಾಗೂ ಬುದ್ಧಿ ಇವುಗಳೆಲ್ಲವನ್ನೂ ಒಂದೊಂದಾಗಿ ನಾಶಗೊಳಿಸಿ, ಕೊನೆಗೆ ಅಹಂಕಾರವನ್ನೂ ನಾಶಗೊಳಿಸಿಕೊಂಡಾಗ ಮಾತ್ರ ನಾವು ನಮ್ಮ ನಿಜಸ್ವರೂಪದಲ್ಲಿ ಅಂದರೆ ಆತ್ಮನಲ್ಲಿ ನೆಲೆಗೊಳ್ಳಲು ಸಾಧ್ಯವಾಗುವುದು. ಅದನ್ನೇ ಮುಕ್ತಿ, ಜೀವನ್ಮುಕ್ತಿ ಎಂದು ಕರೆದಿರುವುದು.

## ವಿದ್ಯಾರ್ಥಿ ನಾನು!

ಶಿವ ಸೃಷ್ಟಿಸಿರುವ
ಮಾಯೆಯ!
ಮಾಯೆ ಸೃಷ್ಟಿಸಿರುವ
ಜೀವರ!
ಜೀವ ನೆಲೆಸಿರುವ
ಜಗವ!
ಅಧ್ಯಯನ ಮಾಡಲು ಬಂದ
ವಿದ್ಯಾರ್ಥಿ ನಾನು ।
ಅರಿವೆಂಬ ಸದ್ಗುರು
ಶ್ರೀ ಸಿದ್ಧಲಿಂಗನ
ಗರಡಿಯಲಿ ಪಳಗಿ....
ಹರನರುವಿನ ಗುರಿ ಮುಟ್ಟಲು ಬಂದ
ವಿದ್ಯಾರ್ಥಿ ನಾನು ।
ಬಡ ವಿದ್ಯಾರ್ಥಿ ನಾನು ॥

ಪಶು-ರುದ್ರಭೂಮಿ

# ವೈರಾಗ್ಯಮೇವಾಽಭಯಂ

ಜೀವಾತ್ಮ ನಿರಂತರ ಹುಡುಕಾಟದಲ್ಲಿದ್ದಾನೆ. ಹುಡುಕಾಟ ನಿಲ್ಲುತ್ತಿಲ್ಲ. ನಿಲ್ಲುವಂತಾಗಲು ಶಾಶ್ವತವಾದ ತೃಪ್ತಿ ಸಿಕ್ಕಬೇಕು. ಅದರದು ಸಿಗುತ್ತಿಲ್ಲ. ಯಾಕೆಂದರೆ ಅಂತಹದ್ದಿರುವುದೇ ಒಂದು ಕಡೆ. ಜೀವಾತ್ಮ ಹುಡುಕುತ್ತಿರುವುದು ಮತ್ತೊಂದು ಕಡೆ. ಹೀಗಾಗಿ ಅದು ಗೊಂದಲಕ್ಕೆ ಕಾರಣವಾಗಿದೆ. ಈ ಬಗ್ಗೆ ಗರುಡ ಪುರಾಣದಲ್ಲಿ ಹೀಗೆ ಹೇಳಿದೆ.

ನಿಸ್ವೋವಷ್ಟಿ ಶತಂಶತಿ, ದಶಶತಂ ಲಕ್ಷಂ ಸಹಸ್ರಾಧಿಪೋ
ಲಕ್ಷೇಶ: ಕ್ಷಿತಿಪಾಲತಾಂ ಕ್ಷಿತಿಪತಿಶ್ಚಕ್ರೇಶ್ವರತ್ವ ಪುನ:
ಚಕ್ರೇಶ: ಸುರರಾಜ ತಾಂ ಸುರಪತಿ ಬ್ರಹ್ಮಾಸ್ಪದಂ ವಾಂಛತಿ
ಬ್ರಹ್ಮೇ ವಿಷ್ಣು ಪದಂ ಪುನ:ಪುನರಹೋ ಆಶಾವದಿಂ ಕೋಗತಾ: ॥

ಮನುಷ್ಯ ಏನೂ ಇಲ್ಲದಿದ್ದಾಗ ನೂರು ಬೇಕೆನ್ನುತ್ತಾನೆ. ನೂರು ಸಿಕ್ಕಾದರೆ ಸಾವಿರಕ್ಕಾಸೆ. ಸಾವಿರ ದೊರೆತಾದರೆ ಲಕ್ಷ, ಲಕ್ಷ ದೊರೆತಾದರೆ ರಾಜನಾಗಬೇಕೆಂಬ ಆಸೆ. ರಾಜನಾದರೆ ಚಕ್ರವರ್ತಿ. ಅಷ್ಟಕ್ಕೂ ತೃಪ್ತಿಯಿಲ್ಲ. ಭೂಲೋಕ ಬಿಟ್ಟು ಸುರಲೋಕದಲ್ಲಿರುವ ಇಂದ್ರ ಪದವಿಯ ಆಸೆ. ಇಂದ್ರ ಪದವಿ ಸಿಕ್ಕ ಮೇಲೆ ಬ್ರಹ್ಮಪದವಿಯಾಸೆ. ಅದೂ ದೊರೆತಾದರೆ ವಿಷ್ಣುಪದವಿಯ ಮೇಲೆ ಹಂಬಲ.

ಮಾನವರಲ್ಲಿ ಆಸೆ ದೊಡ್ಡದಾದಂತೆಲ್ಲಾ, ಮಾಯೆ ದೊಡ್ಡದಾಗುತ್ತಾ ಹೋಗುವುದು. ಮಾಯೆ ದೊಡ್ಡದಾದಂತೆಲ್ಲಾ ದು:ಖ ದೊಡ್ಡದಾಗುವುದು. ಇದನ್ನರಿತ ನಮ್ಮ ಶರಣ ಸಂತರು ಮೊದಲು ಗೆದ್ದದ್ದು ಆಸೆಯನ್ನು. ಆಸೆಯೆಂಬ ಪ್ರಧಾನಿ, ಮಾಯೆಯೆಂಬ ರಾಣಿ ಸಹಜವಾಗಿ ಸೋತು ಹೋಗುವರು. ಆಗವನು ಅರಸ (ಶಿವ)ನಾಗುವನು. ದು:ಖವು ಮಾಯವಾಗಿ ನಿತ್ಯಾನಂದ ಪ್ರಾಪ್ತಿಯಾಗುವುದು. ಇದನ್ನನುಭವಿಸಿದ ಅಂಬಿಗರ ಚೌಡಯ್ಯ ಹೀಗೆ ಹೇಳಿದ್ದಾನೆ.

ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ,
ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ,
ಹೆಂಡರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ,
ಬದುಕಿದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ,
ಇಂತೀ ಹಲವು ಚಿಂತೆಗಳಲ್ಲಿ ಇಪ್ಪವರ ಕಂಡೆನು
ಶಿವ ಚಿಂತೆಯಲ್ಲಿದ್ದರರೊಬ್ಬರನೂ ಕಾಣೆನೆಂದಾತ
ನಮ್ಮ ಅಂಬಿಗಯ ಚೌಡಯ್ಯ ॥

ಪ್ರಯಾಣಿಕನೊಬ್ಬ ಕಾಡಿನಲ್ಲಿ ನಡೆದು ಹೋಗುತ್ತಿದ್ದ. ಬೇಸಿಗೆಯ ಮಟಮಟ ಮಧ್ಯಾಹ್ನ ನಡೆದು ಆಯಾಸವಾಗಿತ್ತು. ಒಂದು ದೊಡ್ಡಮರದ ಕೆಳಗೆ ಕುಳಿತ. ಮನಸ್ಸೆಂಬ ಮರ್ಕಟ. ಅದಕ್ಕೆ ಹಲವಾರು ಕಾಮನೆಗಳು ಮೂಡಿ ಬರುವುದು ಸಹಜ. ಬಾಯಾರಿ ದಾಹ ಹೆಚ್ಚಾದ್ದರಿಂದ 'ಒಂದೆರಡು ಎಳನೀರು ಸಿಕ್ಕಿದರೆ ಚೆನ್ನಾಗಿತ್ತು' ಎಂದುಕೊಂಡ. ಆದರೆ ಆತ ಕುಳಿತುಕೊಂಡಿದ್ದ

ಮರ ಸಾಮಾನ್ಯವಾದುದಲ್ಲ. ಅದು ಕಲ್ಪವೃಕ್ಷ. ಅದು ಆತನಿಗೆ ಗೊತ್ತಿಲ್ಲ. ಆದರೂ ಆ ಕಲ್ಪವೃಕ್ಷ ಆ ವ್ಯಕ್ತಿ ಕಲ್ಪಿಸಿಕೊಂಡಂತಹ ಎಳನೀರಿರುವ ಕಾಯಿಗಳನ್ನು ಆತನ ಮುಂದೆ ಪ್ರತ್ಯಕ್ಷಗೊಳಿಸಿತು. ಆತನಿಗೆ ಆಶ್ಚರ್ಯವಾಯಿತು. ಆದರೂ ಅವುಗಳನ್ನು ಕುಡಿದು ದಾಹ ನೀಗಿಸಿಕೊಂಡ.

ಸ್ವಲ್ಪ ಸಮಯದ ನಂತರ ಹಸಿವಾಯಿತು. 'ಊಟಕ್ಕೇನಾದರೂ ಸಿಕ್ಕಿದರೆ' ಅಂದುಕೊಳ್ಳುವಷ್ಟರಲ್ಲಿ ವಿವಿಧ ಭೋಜನ ಸಾಮಗ್ರಿಗಳು ಆತನ ಮುಂದೆ ಪ್ರತ್ಯಕ್ಷವಾದವು. ಹೊಟ್ಟೆತುಂಬ ಆನಂದದಿಂದ ಊಟ ಮಾಡಿದ. ನಿದ್ದೆ ಬಂದಂತಾಯಿತು. ಮನಸ್ಸಿನಲ್ಲಿ 'ಮಲಗಲು ಮೆತ್ತನೆಯ ಹಾಸಿಗೆ ಇದ್ದಿದ್ದರೆ' ಅಂದುಕೊಂಡ. ತಕ್ಷಣ ಮಂಚ, ದಿಂಬು, ಮೆತ್ತನೆಯ ಹಾಸಿಗೆ ಕಾಣಿಸಿಕೊಂಡವು. ಹಾಗೆ 'ಅರಮನೆಯೊಂದಿದ್ದರೆ' ಎಂದುಕೊಂಡ. ಕೂಡಲೆ ಅರಮನೆಯೊ ನಿರ್ಮಾಣವಾಗಿ ತನ್ನೆದುರಿಗೆ ಕಂಡಿತು. ಅಷ್ಟಕ್ಕೂ ಸುಮ್ಮನಾಗದೆ, 'ಅರಮನೆಯಲ್ಲಿ ಸೇವಕರು, ದಾಸಿಯರು, ಅಪ್ಸರೆಯಂತಹ ಸ್ತ್ರೀಯರೂ ಇದ್ದಿದ್ದರೆ' ಅಂದುಕೊಳ್ಳುವಷ್ಟರಲ್ಲಿ ಅವರೂ ಪ್ರತ್ಯಕ್ಷವಾದರು. ಯಾಕೋ ಸ್ವಲ್ಪ ಭಯಭೀತನಾಗಿ 'ಇದೇನು ಭೂತಗೀತ ಚೇಷ್ಟೆಯೇ? ಅದು ನನ್ನನ್ನು ತಿಂದು ಹಾಕಿದರೆ?' ಎಂದುಕೊಳ್ಳುವಷ್ಟರಲ್ಲಿ ಅದೂ ನಡೆದೇ ಹೋಯಿತು. ಈ ಕಥೆಯ ತಾತ್ಪರ್ಯವಿಷ್ಟೇ! ದುರಾಸೆಯ ಮನುಷ್ಯನಿಗೆ ತನ್ನ ಅತ್ಯಮೂಲ್ಯವಾದ ಜೀವ (ಪ್ರಾಣ)ವೂ ಸಹ ಮುಖ್ಯವೆನಿಸುವುದಿಲ್ಲ ಎಂತೆಂಬುದು.

ಒಬ್ಬ ಸಾಧು ಹಡಗಿನಲ್ಲಿ ಪ್ರಯಾಣಿಸುತ್ತಿದ್ದ. ಅದೇ ಹಡಗಿನಲ್ಲಿದ್ದ ಓರ್ವ ವ್ಯಕ್ತಿಗೆ ಆ ಸಾಧುವಿನ ಮೇಲೆ ವಿಪರೀತ ಭಕ್ತಿ ಮೂಡಿಕೊಂಡಿತು. ಅದಕ್ಕವನು ತನ್ನಲ್ಲಿದ್ದ ಚಿನ್ನದ ಸರವೊಂದನ್ನು ಸಾಧುವಿಗೆ ಕೊಟ್ಟು ನಮಸ್ಕರಿಸಿದ. ಆ ಸಾಧು ಸರವನ್ನು ತಿರುವು ಮುರುವು ನೋಡಿ ಸಮುದ್ರಕ್ಕೆ ಎಸೆದುಬಿಟ್ಟ. ಅವನಿಗೆ ಎಲ್ಲಿಲ್ಲದ ಕೋಪ ಉಕ್ಕಿ ಬಂತು. ಸಾಧುವನ್ನು ಬೈಯುತ್ತ, ತನ್ನ ಜೀವದ ಹಂಗನ್ನೇ ತೊರೆದು ಹಡಗಿನಿಂದ ಸಮುದ್ರಕ್ಕೆ ಜಿಗಿಯಲು ಯತ್ನಿಸಿದ. ಸಾಧು ಕೂಡಲೆ ಅವನನ್ನು ಗಟ್ಟಿಯಾಗಿ ಹಿಡಿದು ತಡೆದ. ಆಗ ಆ ವ್ಯಕ್ತಿ ಸಿಟ್ಟಿನಿಂದ "ಬಿಡು ನನ್ನ ಕೈ, ನಿನಗದರ ಬೆಲೆಯೇನು ಗೊತ್ತು?" ಎಂದು ಕಿರುಚಿಕೊಂಡ. ಸಾಧು ನಸುನಗುತ್ತ "ನನಗೆ ಗೊತ್ತಿಲ್ಲವೆ ಅದರ ಬೆಲೆ! ಹೇಳುತ್ತೇನೆ ಕೇಳು, ನಿನ್ನ ಜೀವಕ್ಕೂ ಸಮವಾಗಲಾರದಷ್ಟಿದೆ. ಅದರ ಬೆಲೆ. ಆದ್ದರಿಂದಲ್ಲವೇ ನೀನು ನಿನ್ನ ಪ್ರಾಣದ ಹಂಗನ್ನೇ ತೊರೆದು ಸಮುದ್ರದಲ್ಲಿ ಹಾರಲು ಯತ್ನಿಸಿದ್ದು. ಅದಕ್ಕೆ ಇದಕ್ಕಿಂತಲೂ ಬೆಲೆ ಕಟ್ಟುವವರಾರಿದ್ದಾರೆ?" ಎಂದು ಕೇಳಿದ್ದ. ಹೌದು! ಭಗವಂತ ಕೆಲವರಿಗೆ ಏನನ್ನೂ ಕೊಡದೆ ನಿರ್ಗತಿಕರನ್ನಾಗಿ ಮಾಡಿ, ದುಃಖ ಕೊಟ್ಟಿದ್ದರೆ! ಮತ್ತೆ ಕೆಲವರಿಗೆ ಏನೆಲ್ಲವನ್ನೂ ಕೊಟ್ಟು! ನೆಮ್ಮದಿಯನ್ನು ಹಾಳು ಮಾಡಿ ದುಃಖಿಸುವಂತೆ ಮಾಡಿರುತ್ತಾನೆ. ಮಾನವರ ಆಸೆ ಅದೆಷ್ಟು ದೊಡ್ಡದೆಂಬುದಕ್ಕೆ ಒಬ್ಬ ಸಂಸ್ಕೃತ ಕವಿ ಹೀಗೆ ಹೇಳುತ್ತಾನೆ.

ಗಿರಿರ್ಮಹಾನ್ ಗಿರೇರಬ್ಧಿರ್ಮಹಾನ್ ಅಬ್ಧೇರ್ನಭೋಮಹಾತ್ ।
ನಭೋಽಸೋಽಪಿ ಮಹದ್ಬ್ರಹ್ಮ ತತೋಪ್ಯಾಶಾಗರೀಯಸಿ ॥

ಎಲ್ಲಕ್ಕಿಂತ ಪರ್ವತ ದೊಡ್ಡದು, ಪರ್ವತಕ್ಕಿಂತ ಸಾಗರ ದೊಡ್ಡದು, ಸಾಗರಕ್ಕಿಂತ

ಆಕಾಶ ದೊಡ್ಡದು, ಆಕಾಶಕ್ಕಿಂತ ಬ್ರಹ್ಮ ದೊಡ್ಡದು, ಬ್ರಹನಿಗಿಂತ ಆಸೆಯೇ ದೊಡ್ಡದು.

'ಆಸೆಯೇ ದ್ದುಃಖಕ್ಕೆ ಮೂಲ' ಎಂಬುದು ಬುದ್ಧ ಸಿದ್ಧಾಂತ. ಆದರೂ ಲೌಕಿಕರು ಹೆಣ್ಣು, ಹೊನ್ನು, ಮಣ್ಣುಗಳ ಮೇಲಿನ ಆಸೆಯಿಂದ ಮುಕ್ತರಾಗಿ ಹೊರಬರುತ್ತಿಲ್ಲ.

ಹೇಮ ನಿನ್ನದಲ್ಲ, ಭೂಮಿ ನಿನ್ನದಲ್ಲ,
ಕಾಮಿನಿ ನಿನ್ನವಳಲ್ಲ, ಇವೆಲ್ಲ ಜಗಕ್ಕಿಕ್ಕಿದ ವಿಧಿ
ನಿನ್ನದೆಂಬುದು ಜ್ಞಾನರತ್ನ, ಅದನ್ನು ಧರಿಸಿದೆಯಾದೊಡೆ
ನಿನ್ನಂತಹ ಸಿರಿವಂತರಿಲ್ಲ ಕಾಣಾ ಗುಹೇಶ್ವರಾ ॥

ಒಬ್ಬ ಮಹಾತ್ಮ ಹೇಳುತ್ತಾನೆ, "ಬಲಿತ ಲೌಕಿಕಂಗೆ ಸತಿ ಪುತ್ರಾದಿಗಳೇ ಬ್ರಹ್ಮ" ಎಂತೆಂದು. ಜೀವಾತ್ಮ ಈ ದುಃಖದ ಪ್ರಪಂಚಕ್ಕೆ ಬಿಡಿಸಿಕೊಳ್ಳಲಾರದಷ್ಟು ಅಂಟಿಕೊಂಡು ಬಿಟ್ಟಿದ್ದಾನೆ. ಇದರಿಂದ ಹೊರಬಂದವರು ವಿರಳರು.

ಭರ್ತೃಹರಿ ಮಧ್ಯಪ್ರದೇಶದ ಉಜ್ಜಯಿನಿಯ ಚಕ್ರವರ್ತಿ. ಕೆಲ ಸಂಶೋಧಕರ ಅಭಿಪ್ರಾಯದಂತೆ ಈತನಿದ್ದಿದ್ದು ಒಂದನೇ ಶತಮಾನದಲ್ಲಿ. ಹಾಗೆ ಈತ ಸುಪ್ರಸಿದ್ಧ ರಾಜ ವಿಕ್ರಮಾದಿತ್ಯನ ತಮ್ಮನೆಂಬುದು ಕೆಲ ಇತಿಹಾಸ ತಜ್ಞರ ಅಭಿಪ್ರಾಯ. ಇದು ಕಟ್ಟುಕಥೆಯಲ್ಲ. ಆತನಿದ್ದ ಎಂಬುದಕ್ಕೆ ಆತ ರಚಿಸಿರುವ ತ್ರಿಶತಕಗಳೇ ಸಾಕ್ಷಿ. ಅದರಲ್ಲಿ ಒಂದನೆಯದು ಶೃಂಗಾರ ಶತಕ. ಎರಡು ಮತ್ತು ಮೂರನೆಯವು ನೀತಿ ಮತ್ತು ವೈರಾಗ್ಯ ಶತಕಗಳು.

ಭರ್ತೃಹರಿ ಮೊದಲು ಮಹಾನ್ ರಸಿಕ (ಕಾಮಿ). ತಾ ಬಯಸಿದ ಹೆಣ್ಣನ್ನು ಮೋಹಿಸದೆ ಬಿಡುತ್ತಿರಲಿಲ್ಲ. ಅಂತೆಯೇ ಆತ ಮೊದಮೊದಲು ಶೃಂಗಾರ ಶತಕಗಳನ್ನು ಬರೆದದ್ದು. ಈತನ ಗುರು, ಗೋರಕ್ಷನಾಥರು. ಅವರು ಈತನ ಕೆಟ್ಟ ಹವ್ಯಾಸ ಬಿಡಿಸಲು ಅದೆಷ್ಟೋ ಬಾರಿ ಪ್ರಯತ್ನಿಸಿ ವಿಫಲರಾಗಿದ್ದರು. ಕೊನೆಗೊಮ್ಮೆ ಗುರುಗಳು ಭರ್ತೃಹರಿ ಕೈಗೆ ಒಂದು ಹಣ್ಣನ್ನು ಕೊಟ್ಟು, "ಈ ಹಣ್ಣಲ್ಲಿ ನನ್ನ ತಪಸ್ಸಿನ ಫಲವಡಗಿದೆ. ಯಾರಿದನ್ನು ಸೇವಿಸುವರೋ ಅವರಿಗೆ ಮುಪ್ಪು ಬಾರದು. ಮುಪ್ಪಿನ ಕಾಲದಲ್ಲೂ ಯೌವನದ ಕಾಂತಿ ಪ್ರಜ್ವಲಿಸುತ್ತಿರುವುದು. ನಿನ್ನ ರೂಪಕ್ಕೆ ಮಾರು ಹೋಗದವರಿರಲಿಕ್ಕಿಲ್ಲ. ಇದನ್ನು ಸೇವನೆ ಮಾಡಿ ನಿನ್ನ ಭೋಗಜೀವನದಲ್ಲಿ ಆನಂದಿಸು" ಎಂದು ಹೇಳಿ ಹೊರಟುಹೋದರು.

ಭರ್ತೃಹರಿ ಕೈಯಲ್ಲಿ ಹಣ್ಣನ್ನು ಹಿಡಿದುಕೊಂಡು ಹೀಗೆ ಆಲೋಚಿಸಿದ. "ನಾನು ಚಕ್ರವರ್ತಿ. ಹೇಗಿದ್ದರೇನು? ನನ್ನ ಅಧಿಕಾರ ವಾಣಿಯನ್ನು ಪ್ರತಿಯೊಬ್ಬರೂ ಪಾಲಿಸಲೇಬೇಕು. ಪಾಲಿಸುವರೂ ಸಹ. ಆದ್ದರಿಂದ ನಾನು ಸೌಂದರ್ಯವಂತನಾಗಿರುವುದಕ್ಕಿಂತಲೂ, ನನ್ನ ಮೋಹದ ಸತಿ ಸದಾ ಸೌಂದರ್ಯವಂತಳಾಗಿರಬೇಕು" ಅಂದುಕೊಳ್ಳುತ್ತ ತನ್ನ ಕಿರಿಯ ಹೆಂಡತಿಗೆ ಆ ಹಣ್ಣಿನ ಮಹತ್ವವನ್ನು ತಿಳಿಸಿ ಅವಳಿಗೆ ತಿನ್ನಲು ಹೇಳಿ ಹೊರಬಂದ.

ಅವಳಾದರೋ ಆ ಹಣ್ಣು ತಿಂದಳೇ? ಇಲ್ಲ! ಯಾಕೆಂದರೆ ಭರ್ತೃಹರಿಯಿಂದ ಸಿಗಬೇಕಾದಂತಹ ಸಂಪೂರ್ಣ ಸುಖ ಅವಳಿಗೆ ಸಿಕ್ಕಿರಲಿಲ್ಲ. ಅವಳಾದರೋ ಆ ಸುಖವನ್ನು

ಅರಮನೆಯಲ್ಲಿದ್ದ ಅಶ್ವಚಾರಕನೊಬ್ಬನಿಂದ ಕದ್ದುಮುಚ್ಚಿ ಅನುಭವಿಸಿ ಆನಂದಿಸುತ್ತಿದ್ದಳು. ಆದ್ದರಿಂದ ಅವಳು 'ನನಗಿಂತ ನನ್ನ ಪ್ರಿಯತಮ ಸದಾ ಸುಂದರನಾಗಿರಬೇಕೆಂದು ಆಲೋಚಿಸಿ, ಆ ಹಣ್ಣಿನ ಮಹಿಮೆಯನ್ನು ಅವನಿಗೆ ತಿಳಿಸಿ, ಆ ಹಣ್ಣು ಅವನಿಗೆ ಕೊಟ್ಟು ತಿನ್ನಲು ಹೇಳಿದಳು.

ಅವನೂ ಸಹ ಅದನ್ನು ತಿನ್ನಲಿಲ್ಲ. ಈ ರಾಣಿ ಒಂದಲ್ಲ ಒಂದು ದಿನ ತನಗೆ ಕೈಕೊಡುವವಳೆಂದು ಭಾವಿಸಿದ. ಆದ್ದರಿಂದ ತಾನು ಮನಸಾ ಪ್ರೀತಿಸುತ್ತಿದ್ದ ಪ್ರೇಯಸಿಯೋರ್ವಳಿಗೆ ಕೊಟ್ಟು ಅದರ ವೃತ್ತಾಂತವನ್ನೆಲ್ಲ ಆಕೆಗೆ ತಿಳಿಪಡಿಸಿದ. ಆದರೆ ಅವಳೂ ಸಹ ಅದನ್ನು ತಿನ್ನಲಿಲ್ಲ. ಯಾಕೆಂದರೆ ಆಗಾಗ ಬಂದು ಭರ್ತೃಹರಿಯು ಅವಳೊಂದಿಗೆ ದೈಹಿಕ ಸಂಪರ್ಕಹೊಂದಿ ರಮಿಸಿ ಹೋಗುತ್ತಿದ್ದ. ಆದ್ದರಿಂದ ಅವಳು ಭರ್ತೃಹರಿಯನ್ನು ಮನಸಾರೆ ಮೆಚ್ಚಿಕೊಂಡಿದ್ದಳು. ಪ್ರಯುಕ್ತ ಆ ಹಣ್ಣನ್ನು ಅವಳೂ ತಿನ್ನದೆ, ಬಂದು ಭರ್ತೃಹರಿಯ ಕೈಗಿಟ್ಟು ಅದರ ವೃತ್ತಾಂತ ತಿಳಿಸಿದಳು. ಭರ್ತೃಹರಿ ಆಶ್ಚರ್ಯಚಕಿತನಾದ. ಬೆವರೊಡೆದ. ಒಣಗಿದ ನಾಲಿಗೆಯಿಂದ ಅವಳೊಂದಿಗೆ ಮಾತನಾಡಿ ಆ ಹಣ್ಣು ತನ್ನಲ್ಲಿಗೆ ಹೇಗೆ ಬಂತೆಂಬ ವೃತ್ತಾಂತವನ್ನು ಅರಿತ. ಪುನ: ಅಶ್ವಚಾರಕನ್ನು ಕರೆಸಿ ಕೇಳಿದ. ಅವನು ಸತ್ಯವನ್ನು ಮರೆಮಾಚಲಿಲ್ಲ. ತನಗೂ ಕಿರಿ ರಾಣಿಗೂ ಇರುವ ಅನೈತಿಕ ಸಂಬಂಧದಿಂದ ಹಿಡಿದು ಹಣ್ಣಿನ ಪರ್ಯಂತರ ಸಮಸ್ತ ವಿಷಯವನ್ನೂ ತಿಳಿಸಿ, "ಪ್ರಭು ನಾನು ಮಹಾಪಾಪಿ, ರಾಜದ್ರೋಹಿ. ನನಗೆಂತಹ ಶಿಕ್ಷೆ ಕೊಟ್ಟರೂ ಕಡಿಮೆಯಿಲ್ಲ. ನೀವ್ಯಾವ ಶಿಕ್ಷೆ ನೀಡಿದರೂ ನಾನು ಅನುಭವಿಸಲು ಸಿದ್ಧನಿರುವೆ" ಎಂದು ತಲೆ ಬಾಗಿದ.

ಭರ್ತೃಹರಿ ಮಧ್ಯಪ್ರದೇಶದ ಚಕ್ರವರ್ತಿ. ಅಂತಹ ಸಂದರ್ಭದಲ್ಲಿ ಆತ ತನ್ನ ಬುದ್ಧಿಯನ್ನು ಕೋಪದ ಕೈಗೆ ಕೊಟ್ಟು ಏನು ಬೇಕಾದರೂ ಮಾಡಬಹುದಿತ್ತು. ಅಶ್ವಚಾರಕನನ್ನು ಕಿರಿರಾಣಿಯನ್ನು ತುಂಡು ತುಂಡು ಮಾಡಿ ಕತ್ತರಿಸಬಹುದಿತ್ತು. ಆದರದು ಹಾಗಾಗಲಿಲ್ಲ. ಅದು ಭರ್ತೃಹರಿಯ ಜೀವನದ ಭಾಗ್ಯೋದಯದ ಬಾಗಿಲು ತೆರೆಸಿದ ಸಂದರ್ಭವಾಗಿತ್ತು. ಪ್ರಾಕೃತಿಕ ವಸ್ತು ವ್ಯಕ್ತಿಗಳ ಮೇಲಿನ ಮೋಹ ಸಂಪೂರ್ಣ ನಷ್ಟವಾಗಿತ್ತು. ಜ್ಞಾನಭಾಸ್ಕರ ಉದಯಿಸಿದ್ದ. ಅಜ್ಞಾನದ ಕತ್ತಲು ಅಡಗಿಹೋಗಿತ್ತು.

ಶಿಶುನಾಳ ಷರೀಫ ಸಾಹೇಬರು ತನ್ನ ಹೆಂಡತಿ ಸತ್ತನಂತರ "ಮೋಹದ ಹೆಂಡತಿ ತೀರಿದ ಬಳಿಕ ಮಾವನ ಮನೆಯ ಹಂಗಿನ್ಯಾಕೋ?" ಎಂದು ಹಾಡಿದರು. ಅಂದರೆ ಅರ್ಥ ಮೋಹಕ್ಕೊಳಗಾಗಿ ತನ್ನ ಜೀವನ ಅಲ್ಲಿಗೆ ಅಂತ್ಯವಾಯಿತೆಂದು ಅವರು ಭಾವಿಸಲಿಲ್ಲ. ಅದು ಆರಂಭ ಎಂದು ಭಾವಿಸಿ ಆಧ್ಯಾತ್ಮದತ್ತ ಹೆಜ್ಜೆಯಿಟ್ಟರು. ಹಾಗೆ ಭರ್ತೃಹರಿಯೂ ಸಹ ರಾಜ್ಯ, ದೇಶ-ಕೋಶ, ಹೆಂಡಿರು-ಮಕ್ಕಳು ಇವೆಲ್ಲಕ್ಕೆ ವಿದಾಯ ಹೇಳಿ, ಆಧ್ಯಾತ್ಮದ ಗುರಿಸಾಧನೆಯತ್ತ ಹೆಜ್ಜೆ ಇಟ್ಟನು. ಅದಕ್ಕೆ ಈ ಕೆಳಗಿನ ವಿಷಯಗಳೇ ಸಾಕ್ಷಿ. ಅಲ್ಲದೆ ಆ ಹಣ್ಣು ಎಲ್ಲೆಲ್ಲಿಯೋ ಪಯಣಿಸಿ ಪುನ: ತನ್ನಲ್ಲಿಗೆ ಬಂದಾಗ ಭರ್ತೃಹರಿ ತನ್ನ ಶೃಂಗಾರ ಶತಕವೊಂದರಲ್ಲಿ ಹೀಗೆ ಹೇಳಿಕೊಂಡಿದ್ದಾನೆ.

ಯಾಂ ಚಿಂತಯಾಮಿ ಸತತಂಮಯಿ ಸಾ ವಿರಕ್ತ ।
ಸಾಮಾನ್ಯಮಿಚ್ಛತಿ ಜನಂ ಸ ಜನೋನ್ಯಸಕ್ತಾ ॥

ಅಸ್ಮತ್ಕೃತೇ ಚ ಪರಿತುಷ್ಯತಿಕಾಚಿದನ್ಯಾ ।
ದಿಕ್ ತಾಂ ಚ ತಂ ಮದನಂ ಚ ಇಮಾಂ ಚ ಮಾಂ ಚ (ಶೃಂಗ.೩೩)

"ನಾನು ಯಾರನ್ನು ಪ್ರೀತಿಸಿ ಚಿಂತಿಸುತ್ತಿರುವೆನೋ ಅವಳು ಅಷ್ಟೇ ಗಾಢವಾಗಿ ಬೇರೊಬ್ಬನನ್ನು ಪ್ರೀತಿಸಿ ಪ್ರಣಯಿಸುತ್ತಿದ್ದಳು. ಆದರೋ ಅವಳು ವಿಧಿಯಿಲ್ಲವೆಂದು ಭಾವಿಸಿ ಒಲ್ಲದ ಮನಸ್ಸಿನಿಂದ ನನ್ನಲ್ಲಿ ವಿರಕ್ತಳಾಗುತ್ತಿದ್ದಳು. ಇನ್ನವಳು ಮನಸಾರೆ ಪ್ರೀತಿಸುತ್ತಿದ್ದ ಪ್ರಿಯತಮನೋ? ನಾನು ಪ್ರೀತಿಸುತ್ತಿರುವವಳನ್ನು ನಿರ್ಲಕ್ಷಿಸಿ, ಅವಳಿಗಾಗಿ ತಾನು ಪ್ರಾಣ ಕೊಡುವವನಂತೆ ನಟಿಸಿ ಅವಳಲ್ಲಿ ಅನುರಕ್ತನಾಗುತ್ತಿದ್ದ. ಆದರೆ ಅವನು ಬೇರೊಬ್ಬಳನ್ನು ಮನಸಾರೆ ಪ್ರೀತಿಸುತ್ತಿದ್ದ. ಹಾಗೆ ನಂಬಿಕೆಯನ್ನೂ ಇಟ್ಟಿದ್ದ. ಆದರೆ ಅವನ ಪ್ರೇಯಸಿಯಾದರೋ ಅವಳು ನನ್ನಲ್ಲಿ ತನ್ನ ಹೃದಯವನ್ನು ಮಾರಿಕೊಂಡಿದ್ದಳು!!"

"ಹೀಗೆ ನಾ ವಂಚನೆಗೊಳಪಟ್ಟ ಆ ಪ್ರಿಯತಮೆಗೂ, ಆ ನನ್ನ ಪ್ರಿಯತಮೆಗೆ ಮೋಸಗೈದ ಅವಳ ಪ್ರಿಯತಮನಿಗೂ, ಅವನು ನಂಬಿದ್ದರೂ ಅವನನ್ನು ಬಿಟ್ಟು ನನ್ನನ್ನು ಪ್ರೀತಿಸುತ್ತಿರುವವಳಿಗೂ, ಹಾಗೆ ಅವಳನ್ನು ವಂಚಿಸುತ್ತಿರುವ ನನಗೂ, ಧಿಕ್ಕಾರ! ಧಿಕ್ಕಾರ! ಅಷ್ಟು ಮಾತ್ರವಲ್ಲ! ಇಂತಹ ವಿಕಾರಗಳನ್ನು ಸರ್ವರ ಹೃದಯಗಳಲ್ಲಿ ಹುಟ್ಟಿ ಹಾಕುವಂತಹ ಆ ಕುಸುಮಾಯುಧ ಕಾಮನಿಗೂ ಧಿಕ್ಕಾರ! ಧಿಕ್ಕಾರ! ಶತಧಿಕ್ಕಾರ!"

ಕಾಮದ ಮತ್ತೊಂದು ಮುಖವೇ ಕ್ರೋಧ" ಎಂಬುದನ್ನಲ್ಲದೆ ಹಾಗೂ ಶಂಕರಾಚಾರ್ಯರು ಹೇಳುತ್ತಾರೆ. 'ಅಹಂ ಅಮೇತಿ ನೈಸರ್ಗಿಕೋವಂ ಲೋಕವ್ಯವಹಾರ' ಎಂತೆಂದು. ಅಂದರೆ ಈ ಲೋಕದಲ್ಲಿ ಕಲಿಸದೆ (ಕಲಿಯದೆ) ಬರುವಂತಹವು ಯಾವುಗಳಾದರೂ ಇದ್ದರೆ! ಅವು 'ನಾನು' ಎಂಬ ಅಹಂಕಾರ ಮತ್ತು 'ನನ್ನದು' ಎಂಬ ಮಮಕಾರ. ಆದರೆ ಭರ್ತೃಹರಿಯಲ್ಲಿನ ಅಹಂಕಾರ, ಮಮಕಾರ ಹಾಗೂ ಕಾಮಕ್ರೋಧಾಧಿ ಅರಿಷಡ್ವೈರಿಗಳೆಲ್ಲವೂ ನಾಶವಾಗಿ ಹೋಗಿದ್ದವು. ಆದ್ದರಿಂದ ಮುಂದೆ ತನ್ನದೊಂದು ವೈರಾಗ್ಯಶತಕದಲ್ಲಿ ಹೀಗೆ ಹೇಳಿದ್ದಾನೆ.

ಭೋಗೇ ರೋಗಭಯಂ, ಕುಲೇಚ್ಯುತಿಭಯಂ, ವಿತ್ತೇನೃಪಲಾದ್ಭಯಂ
ಮೌನೇದೈನ್ಯಭಯಂ, ಬಲೇರಿಪುಭಯಂ, ರೂಪೇಜರಾಯ ಭಯಂ;
ಶಾಸ್ತ್ರೇವಾದಿಭಯಂ, ಗುಣೇ ಖಲಭಯಂ ಕಾಯೇ ಕೃತಾಂತಾದ್ಭಯಂ;
ಸರ್ವವಸ್ತು ಭಯಾನ್ವಿತಂ ಭುವಿನ್ನಣಾಂ ವೈರಾಗ್ಯಮೇವಾಽಭಯಂ ॥

ಭೋಗ ಅತಿಯಾದರೆ ರೋಗಗಳ ಭಯ, ಉತ್ತಮ ಕುಲದವರಿಗೆ ಜಾತಿ ಭ್ರಷ್ಟತೆಯ ಭಯ. ಸಂಪತ್ತಿರುವವರಿಗೆ ರಾಜರ, ಕಳ್ಳಕಾಕರ ಭಯ. ಮೌನಿಯಾಗಿದ್ದರೆ ದೈನ್ಯತೆಯ ಭಯ. ಬಲವುಳ್ಳವನಾಗಿದ್ದರೆ ಶತ್ರುಗಳ ಭಯ. ರೂಪವಂತರಿಗೆ ಕಾಮಿಗಳ ಭಯ. ಶಾಸ್ತ್ರಜ್ಞರಿಗೆ ವಾದಿಗಳ ಭಯ. ಗುಣವಂತರಿಗೆ ದುರ್ಗುಣಿಗಳ ಭಯ. ಈ ನಮ್ಮ ಶರೀರಕ್ಕಂತೂ ಸದಾ ಮರಣದ ಭಯ ಆವರಿಸಿದೆ. ಹೀಗೆ ಜಗತ್ತಿನಲ್ಲಿರುವ ಸರ್ವವೂ ಭಯವುಳ್ಳದ್ದಾಗಿದೆ. ಆದರೆ ವೈರಾಗ್ಯವು ಮಾತ್ರ ಅಭಯವಾದದ್ದು, ಅಂದರೆ ಭಯಗಳೆಲ್ಲವನ್ನೂ ಜಯಿಸಿದ್ದು.

ಜನ್ಮದು:ಖಂ ಜರಾದು:ಖಂ ಜಾಯಾದು:ಖಂ ಪುನ: ಪುನ:
ಸಂಸಾರ ಸಾಗರ ದು:ಖಂ ತಸ್ಮಾದ್ಜಾಗ್ರತ ಜಾಗ್ರತ ॥

ಶಂಕರಾಚಾರ್ಯರು ಹೇಳುತ್ತಾರೆ, ಹುಟ್ಟುವಾಗಲೂ ದು:ಖಿಸುತ್ತಲೇ ಹುಟ್ಟುತ್ತೇವೆ. ವೃದ್ಧಾಪ್ಯದಲ್ಲಿಯೂ ದು:ಖವಿದೆ. ಸಾಯುವಾಗಲೂ ದು:ಖಪಡಬೇಕಾಗುವುದು. ಅಷ್ಟು ಮಾತ್ರವಲ್ಲ ಸಂಪೂರ್ಣ ಸಂಸಾರವೆಂಬ ಸಾಗರವೇ ದು:ಖಮಯವಾಗಿದೆ. ಎಚ್ಚೆತ್ತುಕೋ ಎಚ್ಚೆತ್ತುಕೋ ಎಂತೆಂದು ಹೇಳುವರು.

'ಭೋಗೇ ರೋಗ ಭಯಂ' ಎಂದಿದ್ದಾನೆ ಭರ್ತೃಹರಿ. ಅಂದರೆ ಈ ಭೋಗಕ್ಕೆ ಸಂಬಂಧಪಟ್ಟವು ಐದು. ಶಬ್ದ, ಸ್ಪರ್ಶ, ರೂಪ, ರಸ, ಗಂಧ. ಇವುಗಳನ್ನು ನಮ್ಮ ದಾರ್ಶನಿಕರು ವಿಷಯಗಳೆಂದು ಕರೆದಿದ್ದಾರೆ. ಈ ಪಂಚ ವಿಷಯಗಳನ್ನು ಪಂಚೇಂದ್ರಿಯಗಳು ಸ್ವಾಧಿಸುವುವು. ಈ ಐದೂ ಇಂದ್ರಿಯಗಳಲ್ಲಿ ಎರಡು ಮಾತ್ರ ಬಲವಾದ ಇಂದ್ರಿಯಗಳು. ಒಂದು ರಸಸ್ವಾದ ಮಾಡುವ ಜಿಹ್ವೇಂದ್ರಿಯ, ಮತ್ತೊಂದು ಸ್ಪರ್ಶಾನಂದಪಡುವ ಜನನೇಂದ್ರಿಯ. ಈ ಎರಡು ಇಂದ್ರಿಯಗಳ ಸುಖದ ಆಸೆಗೆ ಬಲಿಯಾದವನು, ಅಧ:ಪತನ ಹೊಂದುವನು. ಸರ್ವಜ್ಞ ಈ ಎರಡು ಇಂದ್ರಿಯಗಳಿಂದಾಗಬಹುದಾದಂತಹ ಅನಾಹುತಗಳ ಬಗ್ಗೆ ಎಚ್ಚರಿಸಿದ್ದಾನೆ.

ಒಮ್ಮೆ ಉಂಡವ ತ್ಯಾಗಿ, ಇನ್ನೊಮ್ಮೆ ಉಂಡವ ಭೋಗಿ
ಬಿಮ್ಮಗುಂಡವ ನೆರೆಹೋಗಿ, ಯೋಗಿ ತಾ
ಸುಮ್ಮನಿರುತಿಹನು ಸರ್ವಜ್ಞ ॥

ನಾಲಿಗೆ ಕಟ್ಟಿಹನು ಕಾಲನಿಗೆ ದೂರಿಹನು
ನಾಲಿಗೆ ರುಚಿಯ ಮೇಲಾಡುತ್ತಿರುವವನು
ಕಾಲನ ಹತ್ತಿರವಕ್ಕು ಸರ್ವಜ್ಞ ॥

ಜಿಹ್ವೇಂದ್ರಿಯದ ಗುಣವನ್ನು ತಿಳಿಸಿ, ಮತ್ತೆ ಜನನೇಂದ್ರಿಯ ಲಕ್ಷಣವನ್ನು ಹೀಗೆ ಹೇಳಿದ್ದಾನೆ.

ಮುಟ್ಟಿದಂತಿರಬೇಕು, ಮುಟ್ಟದಲೆ ಇರಬೇಕು
ಮುಟ್ಟಿಯೂ ಮುಟ್ಟದಿರ ಪರಸ್ತ್ರೀಯ
ಮುಟ್ಟಿದವ ಕೆಟ್ಟ ಸರ್ವಜ್ಞ ॥

ಸುರಪ ಹಂಸನು, ಶಶಿಯು ಕರಕರದ ರಾವಣನು
ವರಕೀಚಕಾದಿ ಬಲಯುತರು ಕೆಟ್ಟಿಹರು
ಪರಸತಿಯ ಪಿಡಿದು ಸರ್ವಜ್ಞ ॥

ಅಂದರೆ ಈ ಭೋಗಭೂಮಿಯಲ್ಲಿ ವಿಷಯಾದಿಗಳೊಂದಿಗೆ ಇರುವುದು ತಪ್ಪಲ್ಲ. ಆದರೆ ಆ ವಿಷಯಗಳಿಗೆ ಗುಲಾಮರಾಗಿರಬಾರದು. ಅದನ್ನೇ ಅನುಭವಿಗಳು ಹೇಳಿರುವುದು, 'ಊಟಕ್ಕಾಗಿ ಬದುಕಬಾರದು, ಬದುಕುವುದಕ್ಕಾಗಿ ಊಟ ಮಾಡಬೇಕು' ಎಂತೆಂದು. ವಿಷಯಾದಿಗಳ ಬಳಕೆ ಪ್ರಕೃತಿಧರ್ಮ. ಅವುಗಳನ್ನು ಸಂಪೂರ್ಣವಾಗಿ ವಿರೋಧಿಸಿದರೆ

ಸತ್‌ಸಾಧನೆಗೆ ಅವಕಾಶವಿರುವುದಿಲ್ಲ. ಆದ್ದರಿಂದ ಅಕ್ಕಮ್ಮ ಹೇಳುತ್ತಾಳೆ, "ಹಾವಿನ ಹಲ್ಲನು ಕಳೆದು ಹಾವನಾಡಿಸಬಲ್ಲರೇ ಹಾವಿನ ಸಂಗವೇ ಲೇಸು ಕಂಡಯ್ಯಾ" ಎಂತೆಂದು.

ಒಂದು ದೇವಸ್ಥಾನ. ಅಲ್ಲಿ ಧಾರ್ಮಿಕೋಪದೇಶ ನಡೆದಿತ್ತು. ಗುರುಗಳು ಸ್ವರ್ಗ ಮತ್ತು ನರಕಗಳ ಬಗ್ಗೆ ಬೋಧಿಸುತ್ತಿದ್ದರು. ಉಪದೇಶದ ಕೊನೆಯಲ್ಲಿ "ಸ್ವರ್ಗಕ್ಕೆ ಹೋಗಿ ಸುಖಪಡಬೇಕೆನ್ನುವವರು ಯಾರ್‍ಯಾರು? ಅಂಥವರು ಕೈ ಮೇಲೆತ್ತಿರಿ" ಎಂದು ಕೇಳಿದರು. ಅಲ್ಲಿದ್ದ ಶಿಷ್ಯರಲ್ಲಿ ಒಬ್ಬನನ್ನು ಬಿಟ್ಟು, ಮತ್ತೆಲ್ಲರೂ ಕೈ ಎತ್ತಿದರು. ಗುರುಗಳಿಗೆ ಆಶ್ಚರ್ಯವಾಯಿತು. ಮತ್ತೆ ಕುತೂಹಲವು ಹುಟ್ಟಿ "ನರಕಕ್ಕೆ ಹೋಗುವ ಇಚ್ಛೆವುಳ್ಳವರಾರು? ಕೈಎತ್ತಿರಿ" ಎಂದು ಮತ್ತೆ ಹೇಳಿದರು. ಆಗ ಯಾರೊಬ್ಬರೂ ಕೈ ಎತ್ತಲಿಲ್ಲ. ಹೋಗಲಿ ಸ್ವರ್ಗದ ಆಸೆಯಿಲ್ಲದವನಾದರೂ ಕೈ ಎತ್ತಬೇಕಿತ್ತು. ಅವನೂ ಸಹ ಎತ್ತಲಿಲ್ಲ. ಆಗ ಮತ್ತೆ ಗುರುಗಳು ಅವನನ್ನುದ್ದೇಶಿಸಿ "ಏನಪ್ಪಾ ನೀನು ಸ್ವರ್ಗಕ್ಕೂ ಕೈ ಎತ್ತಲಿಲ್ಲ, ನರಕಕ್ಕೂ ಕೈ ಎತ್ತಲಿಲ್ಲ, ಮತ್ತೇನು ಮಾಡಬೇಕೆಂದಿರುವಿ?" ಎಂದು ಪ್ರಶ್ನಿಸಿದರು. ಆಗ ಆ ವ್ಯಕ್ತಿ ಎರಡೂ ಕೈಗಳನ್ನು ಮೇಲೆತ್ತಿ ಹಿಡಿದ. ಗುರುಗಳಿಗೆ ಅವನ ಮನಸ್ಸಿನಲ್ಲಿದ್ದ ಮರ್ಮ ಅರ್ಥವಾಗಲಿಲ್ಲ. ಆಗ "ಅಯ್ಯಾ ನಿನ್ನ ಅಂತರಂಗದಲ್ಲಿನ ವಿಷಯವನ್ನು ಇನ್ನಾದರೂ ಬಹಿರಂಗಪಡಿಸು" ಎಂದು ಗುರುಗಳು ಕೇಳಿದರು.

"ಗುರುಗಳೇ, ನನಗೆ ಎಲ್ಲಿಯೋ ಇರುವಂತಹ ಸ್ವರ್ಗ ನರಕಾದಿಗಳಿಗೆ ಹೋಗುವಂತಹ ಇಚ್ಛೆಯಿಲ್ಲ. ನಾನು ಇಲ್ಲಿಯೇ ಇರುತ್ತೇನೆ. ಇಲ್ಲೇ ಎರಡೂ ಇವೆ. ನಾವು ನಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿದ್ದರೆ! ಸ್ವರ್ಗ ತಾನಾಗಿಯೇ ಸೃಷ್ಟಿಗೊಳ್ಳುವುದು. ಅವುಗಳ ಮೇಲೆ ಹತೋಟಿ ಕಳೆದುಕೊಂಡರೆ! ನಮ್ಮ ಬದುಕೇ ನರಕಸದೃಶ್ಯವಾಗುವುದು" ಎಂದು ಹೇಳಿದಾಗ, ಗುರುಗಳು "ನಾನಲ್ಲಪ್ಪಾ ಗುರು. ನನಗೆ ಗುರುವಿನ ಯೋಗ್ಯತೆಯೂ ಇಲ್ಲ. ಇಂದಿನಿಂದ ನೀನೇ ನನ್ನ ಗುರು" ಎಂದು ವ್ಯಕ್ತಪಡಿಸಿದರು.

ಇಂದ್ರಿಯಾಣ್ಯೇವ ತತ್ಸರ್ವಂ ಯತ್ ಸ್ವರ್ಗ ನರಕಾವುಭೌ ।
ನಿಗ್ರಿಹೀತಾ ವಿಸೃಷ್ಟಾನಿ ಸ್ವರ್ಗಾಯ ನರಕಾಯ ಚ ॥

ಇಂದ್ರಿಯಗಳೇ ಸ್ವರ್ಗ ಮತ್ತು ನರಕಗಳು. ಅವುಗಳನ್ನು ನಿಯಂತ್ರಣದಲ್ಲಿಟ್ಟುಕೊಂಡರೆ ಸ್ವರ್ಗ ಸೃಷ್ಟಿಯಾಗುವುದು. ಅವುಗಳನ್ನು ಮನಬಂದಂತೆ ಹರಿಬಿಟ್ಟರೆ ಜೀವನ ಸದೃಶ್ಯವಾಗುವುದು. ಇದು ಈ ಶ್ಲೋಕಾರ್ಥ.

"ಊಟ ಔಷಧಿಯಾಗಿರಬೇಕೇ ವಿನ: ಔಷಧಿಗಳೇ ಊಟವಾಗಬಾರದು" ಈ ಮಾತು ಜಿಹ್ವೇಂದ್ರಿಯಕಷ್ಟೆ ಅಲ್ಲ, ಸರ್ವೇಂದ್ರಿಯಗಳ ಸ್ವಾದಕ್ರಿಯೆಗೂ ಅನುಸರಿಸುವುದು. ಆಯಾ ಇಂದ್ರಿಯಗಳಿಗೆ, ಆಯಾ ವಿಷಯಗಳು ಪ್ರಕೃತಿಧರ್ಮದಂತೆ ಬಳಕೆಯಾಗಬೇಕು. ಆದರೆ ಆ ಕ್ರಿಯೆ ವಿಕೃತರೂಪ ತಾಳಬಾರದು. ಈ ಉದ್ವೇಗದಿಂದ ಒಬ್ಬ ಆಂಗ್ಲಕವಿ ಹೇಳುತ್ತಾನೆ, 'Precaution is bettern than cure' ಎಂತೆಂದು. ಅಂದರೆ "ರೋಗ ಬಂದಮೇಲೆ ಗುಣಪಡಿಸಲು ಹೆಣಗಾಡುವುದಕ್ಕಿಂತ, ರೋಗ ಬರದಂತೆ ಮೊದಲೇ ಎಚ್ಚರ ವಹಿಸುವುದು ಒಳ್ಳೆಯದು". ಎಚ್ಚರವಿದ್ದರೆ ಸ್ವರ್ಗ, ಎಚ್ಚರ ತಪ್ಪಿದರೆ ನರಕ ಎಂಬ ಸಂದೇಶವಿದು.

ಭರ್ತೃಹರಿ 'ಭೋಗೇ ರೋಗ ಭಯಂ' ಪ್ರಾರಂಭಿಸಿ ಮುಂದೆ ಪ್ರಪಂಚದಲ್ಲಿ ಮಾನವರನ್ನು ಕಾಡುವ ಹತ್ತು ಹಲವು ಭಯಗಳನ್ನು ತೋರಿಸಿ ಎಚ್ಚರಿಸಿದ್ದಾನೆ. ಆದರೆ ಅವೆಲ್ಲವನ್ನೂ ವಿಶ್ಲೇಷಣೆ ಮಾಡಲಾಗುವುದಿಲ್ಲ. ಯಾಕೆಂದರೆ ಅದು ಅತಿಯೆನಿಸಬಾರದು. ಅಲ್ಲದೆ ಪುಸ್ತಕಕ್ಕೂ ಒಂದು ಸೀಮೆ (ಗಡಿ) ಇರುತ್ತದೆ. ಆ ಗಡಿ ಮೀರಬಾರದು. ಆದ್ದರಿಂದ ಇಲ್ಲಿ ಕೆಲವನ್ನು ಮಾತ್ರ ವಿಶ್ಲೇಷಿಸಿದ್ದೇನೆ.

'ಕುಲೇ ಚ್ಯುತಿ ಭಯಂ' ಈ ಹೇಳಿಕೆಯನ್ನು ಜಾತಿಯ ರೂಪದಲ್ಲಿ ಪರಿಗಣಿಸಬಾರದು. ಯಾಕೆಂದರೆ ಹಿಂದೆ ಒಬ್ಬ ಹೆಂಗಸಿಗೆ ಬುದ್ಧ ಹೇಳಿದ್ದನಂತೆ 'ಸಾವಿಲ್ಲದ ಮನೆಯಲ್ಲಿ ಸಾಸಿವೆ ತೆಗೆದುಕೊಂಡು ಬಾಮ್ಮಾ' ಎಂದು. ಆದರೆ ಇಂದೇನಾದರೂ ಆ ಬುದ್ಧ ಇದ್ದು, ಇಂದಿನ ಜನರ ಸ್ಥಿತಿಯನ್ನು ನೋಡಿದ್ದರೆ ಬಹುಶಃ ಬುದ್ಧ ಹೀಗೆ ಹೇಳುತ್ತಿದ್ದನೋ ಏನೋ? 'ಅಮ್ಮಾ ಕುಡುಕರಿಲ್ಲದ ಮನೆಯಲ್ಲಿ ಅಡಿಕೆಯೊಂದನ್ನು ತೆಗೆದುಕೊಂಡು ಬಾ' ಎಂತೆಂದು. ಆದ್ದರಿಂದ 'ಬ್ರಹ್ಮ ಜಾನೇತಿ ಇತಿ ಬ್ರಾಹ್ಮಣಃ' ಎಂತೆಂಬ ಶಾಸ್ತ್ರೋಕ್ತಿಯನ್ನು ಅನುಸರಿಸುವುದು ಬಹಳ ಉತ್ತಮ. ಯಾರು ಬ್ರಹ್ಮನನ್ನು ಅರಿತಿರುತ್ತಾರೋ ಅಂಥವರು ಬ್ರಾಹ್ಮಣರು. ಬ್ರಹ್ಮಜ್ಞಾನಿಗಳು ಸರ್ವ ಜಾತಿಯಲ್ಲೂ ಇದ್ದಾರೆ. ಅಂಥವರಿಗೆ ಇಂತಹ ಭಯಗಳಿದ್ದರೂ ಇರಬಹುದು, ಇಲ್ಲದೆಯೂ ಇರಬಹುದು. ಭಯ ಇದ್ದವರ ಹಾಗೂ ಭಯ ಇಲ್ಲದವರ ಈ ಎರಡರ ಬಗ್ಗೆ ಇಲ್ಲಿ ನೋಡೋಣ.

ಗಾಡಗೇ ಮಹಾರಾಜ್ ಎಂಬ ಸಂತ ಹಿಂದೆ ಆಗಿ ಹೋಗಿದ್ದಾನೆ. ಆತನೊಮ್ಮೆ ತನ್ನ ಶಿಷ್ಯರಿಗೆ ಕುಟೀರದ ಹೊರಗೆ ಉಪದೇಶ ನೀಡುತ್ತಿದ್ದ. ಆಗ ಮಧ್ಯ ವಯಸ್ಸಿನ ಹೆಂಗಸೊಬ್ಬಳು ಅಲ್ಲಿಗೆ ಬಂದು "ನಾನು ನಿಮ್ಮ ಬಳಿ ಏಕಾಂತದಲ್ಲಿ ಮಾತನಾಡಬೇಕು" ಎಂದಳು. ಸಂತರದಕ್ಕೆ "ನನ್ನಲ್ಲಿ ಏಕಾಂತಕ್ಕೆ ಅವಕಾಶವಿಲ್ಲ, ಏನಿದ್ದರೂ ಇಲ್ಲೇ ಹೇಳಬಹುದು" ಎಂದರು. ಕೂಡಲೇ ಆಕೆ ಸಿಟ್ಟಿನಿಂದ ಹೊರಟುಹೋದಳು. ಸ್ವಲ್ಪ ಸಮಯದ ನಂತರ ಆಕೆ ತನ್ನ ಮಗನನ್ನು ಕಳುಹಿಸಿದಳು. ಅವನು ಅವರಲ್ಲಿಗೆ ಬಂದ. ಆಗ ಅಲ್ಲಿ ಯಾರೂ ಇರಲಿಲ್ಲ. ಮಹಾರಾಜರೊಬ್ಬರೇ ಇದ್ದರು. "ಸಾಧು ಮಹಾರಾಜ್, ನಿಮ್ಮಲ್ಲಿಗೆ ನಮ್ಮಮ್ಮ ಬರುವಳಂತೆ, ಯಾವಾಗ ಬರಬೇಕು ಕೇಳಿಬಾ ಎಂದು ಹೇಳಿ ಕಳಿಸಿದ್ದಾಳೆ" ಎಂದು ಕೇಳಿದ.

ಮಹಾರಾಜರು "ಈಗ ಸದ್ಯಕ್ಕೆ ನಿಮ್ಮಮ್ಮ ಇಲ್ಲಿಗೆ ಬರುವುದು ಬೇಡ, ನಿಮ್ಮಮ್ಮನ ಸೀರೆಯೊಂದನ್ನು ಮೊದಲಿಲ್ಲಿಗೆ ತೆಗೆದುಕೊಂಡು ಬಂದು ಈ ಮಠದ ಹೊರಗಡೆ ಕಟ್ಟಿರುವ ಈ ದಾರಕ್ಕೆ ಒಣಹಾಕು, ಆಮೇಲೆ ನಿಮ್ಮಮ್ಮ ನನ್ನಲ್ಲಿಗೆ ಬರುವ ಸಮಯ ತಿಳಿಸುತ್ತೇನೆ" ಎಂದು ಹೇಳಿ ಅವನನ್ನು ಕಳುಹಿಸಿದರು. ಅವನು ಮನೆಗೆ ಹೋಗಿ ತಾಯಿಗೆ ತಿಳಿಸಿ, ತಾಯಿಯ ಒಂದು ಒದ್ದೆ ಸೀರೆಯನ್ನು ತಂದು ಮಠದ ಹೊರಗೆ ಒಣಹಾಕಿದ.

ಆ ಹುಡುಗ ಆಮೇಲೆ ಒಳಗಿದ್ದ ಮಹಾರಾಜರನ್ನು ಕರೆದು, "ಸ್ವಾಮಿ ನೀವು ಹೇಳಿದಂತೆ ಮಾಡಿರುವೆನು. ಈಗ ಹೇಳಿರಿ, ಅಮ್ಮನನ್ನು ಯಾವಾಗ ಬರಲು ಹೇಳಲಿ?" ಎಂದು ಪ್ರಶ್ನಿಸಿದ.

ಮಹಾರಾಜರು, "ಇನ್ನೆರಡು ತಾಸು ಬಿಟ್ಟು ಬರಲು ನಿಮ್ಮಮ್ಮನಿಗೆ ತಿಳಿಸು" ಎಂದು ಹೇಳಿ ಆ ಹುಡುಗನನ್ನು ಮನೆಗೆ ಕಳುಹಿಸಿದರು. ತಾವೂ ಸಹ ಕುಟೀರದ ಒಳಗೆ ಹೋಗಿ

ಬಾಗಿಲು ಹಾಕಿಕೊಂಡು ಬಿಟ್ಟರು.

ಆಶ್ರಮದ ಮುಂದೆ ಓಡಾಡಿದ ಭಕ್ತರು ಅಲ್ಲಿ ಒಣಹಾಕಿದ್ದ ಸೀರೆಯನ್ನು ನೋಡಿದರು. ಈ ಸುದ್ದಿ ಊರೆಲ್ಲ ಹರಡಿತು. ಆಶ್ರಮದ ಬಳಿ ಜನಜಂಗುಳಿ ಸೇರಿತು. "ಅಯ್ಯೋ ಕಾಲ ಕೆಟ್ಟು ಹೋಯಿತು. ಸಾಧು ಸಂತರೇ ಸೀರೆಯ ಮೋಹಕ್ಕೊಳಗಾದರೆ ಇನ್ನು ನಮ್ಮ ನಿಮ್ಮೆಲ್ಲರ ಗತಿಯೇನು" "ಬಹುಶ: ಈ ಸೀರೆ ಯಾರದ್ದಿರಬಹುದು? ಯಾವ ಹೆಂಗಸು ಸಾಧುನಿವ ಸಂಗ ಸರಸವಾಡುತ್ತಿರಬಹುದು" ಇತ್ಯಾದಿ ಇತ್ಯಾದಿ ಮಾತುಗಳನ್ನು ಜನ ಆಡಿಕೊಳ್ಳುತ್ತಿದ್ದರು. ಆ ಸಮಯಕ್ಕೆ ಆ ಹೆಂಗಸೂ ಸಹ ಅಲ್ಲಿ ನಿಂತಿದ್ದಳು. ಆಗ ಮಹಾರಾಜರು ಕುಟೀರದಿಂದ ಹೊರಬಂದು ಆ ತಾಯಿಯನ್ನು ಕರೆದು, "ನೋಡು ತಾಯಿ ಕೇವಲ ನಿನ್ನ ಸೀರೆ ಈ ಮಠದ ಮುಂದೆ ಒಣಹಾಕಿದ್ದಕ್ಕೆ ಜನ ಈ ರೀತಿಯೆಲ್ಲ ಅನುಮಾನಿಸಿದರು, ಇನ್ನು ನೀನೇನಾದರೂ ಬಂದು ಏಕಾಂತದಲ್ಲಿ ಮಾತನಾಡಿದ್ದರೆ ಗತಿ ಏನಿತ್ತು?" ಎಂದು ಪ್ರಶ್ನಿಸಿದರು. ಆಗ ಅಲ್ಲಿದ್ದ ಜನರಿಗೆ ಸತ್ಯ ಮನವರಿಕೆಯಾಯಿತು. ತಮ್ಮ ತಪ್ಪು ಅಭಿಪ್ರಾಯಕ್ಕೆ ತಾವೇ ಪಶ್ಚಾತ್ತಾಪಪಟ್ಟರು.

"ಸಹವಾಸದಿಂದ ಸಂನ್ಯಾಸಿ ಕೆಟ್ಟ" ಎಂಬ ನಾಣ್ಣುಡಿಯಂತೆ ಕೆಲವೊಬ್ಬರು ಇಂತಹ ವಸ್ತು, ವ್ಯಕ್ತಿ ಮತ್ತು ವಿಷಯಗಳಿಂದ ದೂರವಿದ್ದು, ತಮ್ಮ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳುತ್ತಾರೆ. "ಸಂತೆಯಲ್ಲೊಂದು ಮನೆಯ ಮಾಡಿ ಜನರಿಗಂಜಿದೊಡೆಯಂತಯ್ಯಾ" ಎಂಬ ಶರಣರ ವಚನದಂತೆ ಕೆಲವರು ಎಲ್ಲಿದ್ದರೂ ತಮ್ಮ ಪಾವಿತ್ರತೆಗೆ ಧಕ್ಕೆ ತಂದುಕೊಳ್ಳುವುದಿಲ್ಲ. ಚೊಕ್ಕ ಬಂಗಾರ ತಿಪ್ಪೆಯಲ್ಲಿದ್ದರೂ ಅಷ್ಟೇ, ಅದು ಅದಾಗಿಯೇ ಉಳಿದಿರುತ್ತದೆ. ಹಾಗೆ ಕೆಲವರು.

ಬುದ್ಧನ ಕಾಲವದು. ಒಬ್ಬ ವೇಶ್ಯೆಯಿದ್ದಳು. ಅವಳು ತ್ರಿಲೋಕ ಸುಂದರಿ. ವೇಶ್ಯೆ ಕುಲದಲ್ಲಿ ಹುಟ್ಟಿದ್ದರೂ ಸಹ ಅವಳು ಯಾರೊಬ್ಬರಿಗೂ ತನ್ನ ಮೈ ಹಾಗೂ ಮನಸ್ಸು ಕೊಟ್ಟಿರಲಿಲ್ಲ. ಆ ದೇಶದ ರಾಜ ಅವಳ ಸೌಂದರ್ಯಕ್ಕೆ ಮಾರು ಹೋಗಿದ್ದ. ಅವಳು ತನ್ನಲ್ಲಿ ಅನುರಕ್ತಳಾಗುವಂತೆ ಪ್ರೇಮ ಭಿಕ್ಷೆಯನ್ನು ಬೇಡಿದ್ದ. ಆದರೆ ಅವಳೊಪ್ಪಿರಲಿಲ್ಲ. ಆದರೂ ರಾಜ ಅವಳು ಒಂದಿಲ್ಲೊಂದಿನ ತನಗೆ ಒಲಿದೇ ಒಲಿಯುತ್ತಾಳೆಂದು ಭಾವಿಸಿದ್ದ. ಆಸೆಯನ್ನು ಇಟ್ಟುಕೊಂಡಿದ್ದ. ಆದರೆ ಮುಂದೆ ನಡೆದುದ್ದೇ ಬೇರೆ.

ಬುದ್ಧನಿಗಿದ್ದ ಹಲವು ಶಿಷ್ಯರಲ್ಲಿ ಪರಮಶಿಷ್ಯರಿಬ್ಬರು. ಆನಂದಭಿಕ್ಷು ಹಾಗೂ ಪೂರ್ಣಪ್ರಜ್ಞನೆಂಬುವವರು. ಒಮ್ಮೆ ಆಕೆ ಆನಂದಭಿಕ್ಷುವನ್ನು ನೋಡಿ ಮನಸಾ ಮೆಚ್ಚಿಕೊಂಡಿದ್ದಳು. ಆದ್ದರಿಂದೊಮ್ಮೆ ಬುದ್ಧನ ಆಶ್ರಮಕ್ಕೆ ನೇರ ಹೋಗಿ ಆನಂದಭಿಕ್ಷುವನ್ನು "ನಿಮ್ಮ ಮೇಲೆ ನಾನು ಮೋಹ ತಾಳಿದ್ದೇನೆ: ಕಾರಣ ನೀವು ಬಂದು ನನ್ನ ಮನೆಯಲ್ಲಿ ಒಂದು ವರ್ಷ ಇದ್ದು ಹೋಗಬೇಕು" ಎಂದು ಕೇಳಿಕೊಂಡಳು.

ಆನಂದಭಿಕ್ಷು "ನಾನೀಗ ಬುದ್ಧನ ಶಿಷ್ಯ. ಆದ್ದರಿಂದ ನಾನು ಸ್ವತಂತ್ರನಲ್ಲ. ಬುದ್ಧನ ಆಜ್ಞಾಪಾಲಕನು. ಕಾರಣ ಹೋಗಿ ಬುದ್ಧನನ್ನು ಕೇಳು. ಬುದ್ಧನು ಒಪ್ಪಿ ಕಳಿಸಿಕೊಟ್ಟರೆ ನಾ ಬರುವೆ" ಎಂದು ಹೇಳಿದ. ಕೂಡಲೆ ಅವಳು ಬುದ್ಧನಲ್ಲಿಗೆ ಬಂದು ತನ್ನ ಮನದ ಬಯಕೆಯನ್ನು ಹೇಳಿಕೊಂಡು, ಆನಂದಭಿಕ್ಷುವನ್ನು ತನ್ನೊಡನೆ ಕಳಿಸುವಂತೆ ಬೇಡಿಕೊಂಡಳು. ಬುದ್ಧ ಅದಕ್ಕೊಪ್ಪಿ

ಆನಂದಭಿಕ್ಷುವನ್ನು ಅವಳೊಡನೆ ಕಳಿಸಿಕೊಟ್ಟ.

ಅಲ್ಲಿನ ಬಹಳಷ್ಟು ಶಿಷ್ಯರು ಇದನ್ನೆಲ್ಲಾ ಗಮನಿಸಿ, ಸಂಕಟ ಹಾಗೂ ಅಸೂಯೆಯಿಂದ "ಪ್ರಭು ಅವಳು ವೇಶ್ಯೆ. ಕುಣಿತಾಳೆ, ಮೈಮೇಲೆ ಬೀಳ್ತಾಳೆ, ನರ್ತಿಸುತ್ತಾಳೆ, ಭೋಗಕ್ಕೆ ಕರಿತಾಳೆ, ಮಂಚದ ಮೇಲೆ ಆನಂದಭಿಕ್ಷುವಿನ ಜೊತೆಗೆ ಅನುರಕ್ತಳಾಗುತ್ತಾಳೆ" ಹೀಗೆಲ್ಲಾ ವರ್ಣಮಯವಾಗಿ ಹೇಳಲಾರಂಭಿಸಿದರು.

ಬುದ್ಧ "ಅದರ ಪರಿಚಯವೆಲ್ಲ ನಿಮಗ್ಯಾವಾಗ ಆಗಿತ್ತು?" ಎಂದು ಕೇಳಿದಾಗ ಎಲ್ಲರೂ ಉಗುಳು ನುಂಗುತ್ತ ಒಳನಡೆದರು.

ವರ್ಷಗಳೇನೋ ಕಳೆದವು. ಆನಂದಭಿಕ್ಷು ಮತ್ತು ವೇಶ್ಯೆ ಇಬ್ಬರೂ ಪುನಃ ಬುದ್ಧನಿರುವ ಆಶ್ರಮಕ್ಕೆ ಬಂದರು. ಇಬ್ಬರೂ ವಂದಿಸಿ ನಿಂತಾದ ಮೇಲೆ ವೇಶ್ಯೆ ಬುದ್ಧನಿಗೆ ಹೇಳಿದಳು, "ಮಹಾಪ್ರಭು ನಾನು ಧನ್ಯಳಾದೆ. ನನ್ನ ಜೀವನ ಪಾವನವಾಯಿತು. ನಿಮ್ಮ ಶಿಷ್ಯನಿಂದ ಅಜ್ಞಾನ ಅಡಗಿ ಹೋಯಿತು. ಕಾಮಕ್ರೋಧಗಳು ನಾಶವಾಗಿ ಹೋದವು. ನಾನೀಗ ನಿರ್ಮೋಹಿಯೂ, ನಿರಂಕಾರಿಯೂ ಆಗಿದ್ದೇನೆ. ನನಗೆ ಬೌದ್ಧದೀಕ್ಷೆಯನ್ನನುಗ್ರಹಿಸಿ ನನ್ನನ್ನು ಕೃತಾರ್ಥಳನ್ನಾಗಿ ಮಾಡಿ ಎಂದಳು ದೈನ್ಯತೆಯಿಂದ.

"ಮಕರಂದ ಮಾಡುವುದು ಹೂವಿನಾ ಧರ್ಮ. ಆ ಮಕರಂದವನು ಮಧುವನ್ನಾಗಿ ಮಾಡುವುದು ದುಂಬಿಯಾ ಧರ್ಮ. ಹಾಲ ಕರೆವುದು ಹಸುವಿನಾ ಧರ್ಮ. ಹಾಲನ್ನು ಕರೆದು ತುಪ್ಪವನು ಮಾಡುವುದು ಮಾನವನ ಧರ್ಮ. ಮಾನವನ ಮಾಡುವುದು ನಿಸರ್ಗದ ಧರ್ಮ. ಮಾನವನ ಮಹಾನುಭವನ ಮಾಡುವುದು ನಿಜ ಗುರುವಿನ ಧರ್ಮ" ಎಂಬ ಕವಿಯ ವಾಣಿಯಂತೆ ಮಹಾಂತರು ಮಾನವರನ್ನು ಸಹ ಮಹಾಂತರನ್ನಾಗಿ ಮಾಡಿ ಬಿಡುವರು. ಇಲ್ಲಿ ಬುದ್ಧನಾಗಲಿ ಆನಂದಭಿಕ್ಷುವಾಗಲಿ ಸಮಾಜಕ್ಕೆ, ಜನರಿಗೆ ಹೆದರಲಿಲ್ಲ. ತಮ್ಮನರಿತ ತಾವು, ತಮಗೆ ತಾವೇ ಮೋಸ ಮಾಡಿಕೊಳ್ಳದಂತೆ ಜೀವನ ನಡೆಸಿದವರು. ಇದನ್ನೇ ಆತ್ಮಸಾಕ್ಷಿ ಎನ್ನುವುದು.

ಈಗ 'ಶಾಸ್ತ್ರೇ ವಾದಿಭಯಂ' ಎಂಬ ವಿಷಯಕ್ಕೆ ಬರೋಣ. ಈ ಅಪವಾದ ಅದ್ವೈತ ಶಿಖಾಮಣಿ ಶಂಕರಾಚಾರ್ಯರನ್ನೂ ಬಿಟ್ಟಿಲ್ಲ. ಕುಮಾರಿಲನು, ಮಂಡನಮಿಶ್ರನ ಗುರು. ಅದ್ವೈತದ ಬಗ್ಗೆ ವಾದಿಸಿ ತನ್ನ ಶಿಷ್ಯ ಮಂಡನಮಿಶ್ರನನ್ನು ಮೊದಲು ಗೆದ್ದು ಬಾ ಎಂದು ಹೇಳಿ ಶಂಕರರಲ್ಲಿಗೆ ಕಳಿಸಿಕೊಡುತ್ತಾನೆ. ಇಬ್ಬರೂ ವಾದಕ್ಕೆ ಅಣಿಯಾಗುವರು. ಇದಕ್ಕೆ ಮಂಡನಮಿಶ್ರನ ಹೆಂಡತಿ ಉಭಯಭಾರತಿಯನ್ನು ತೀರ್ಪುಗಾರಳನ್ನಾಗಿ ನೇಮಿಸುತ್ತಾರೆ. ವಾದಪೂರ್ವ ಉಭಯ (ಪೂರ್ಣ)ಭಾರತಿಯು ಇಬ್ಬರ ಕೊರಳಿಗೂ ಒಂದೊಂದು ಹಾರ ಹಾಕಿ ಹೇಳುತ್ತಾಳೆ, "ಮೊದಲು ಯಾರ ಕೊರಳಲ್ಲಿನ ಹಾರ ಬಾಡುವುದೋ ಅವರು ಸೋತಂತೆ" ಎಂದು. ಅದಕ್ಕಿಬ್ಬರೂ ಒಪ್ಪಿ ವಾದಕ್ಕಿಳಿವರು. ಕ್ರಮೇಣ ಮಂಡನಮಿಶ್ರನ ಕೊರಳೊಳಗಿನ ಹಾರ ಬಾಡುತ್ತಾ ಬರುವುದು. ಹಾಗೂ ಸೋಲು ಹತ್ತಿರವಾದಂತೆಯೂ ಕಂಡುಬರುವುದು. ಆದರೆ ಉಭಯಭಾರತಿಗೆ ತನ್ನ ಪತಿ ಸೋಲೊಪ್ಪಿಕೊಳ್ಳಬಾರದೆಂಬ ಛಲ ಉಂಟಾಗುವುದು. ಆಗ "ಶಂಕರರೇ, ನಿಮ್ಮ ವಾದ ನಿರರ್ಥಕವಾದುದು. ಯಾಕೆಂದರೆ ಕೇವಲ ನಿಮ್ಮಲ್ಲಿ ಶಾಸ್ತ್ರಗಳ ಪರಿಚಯವಿದೆಯೇ ಹೊರತು

ಅನುಭವಗಳ ಕೊರತೆಯಂತೂ ಎದ್ದು ಕಾಣುತ್ತಿದೆ. ಪ್ರಪಂಚ ಕೆಟ್ಟ, ಸಂಸಾರ ದು:ಖ ಎಂದು ವಾದಿಸುವಿರಿ. ಈ ಬಗ್ಗೆ ನಿಮ್ಮ ಶರೀರಕ್ಕಾಗಿರುವ ಅನುಭವಗಳಾದರೂ ಏನು? ಸಂಸಾರಿಗಳಲ್ಲದ ನಿಮಗೆ ಇದರ ಅನುಭವವಾದರೂ ಆಗಿರುವುದು ಹೇಗೆ? ಆ ಅನುಭವಗಳು ನಿಮ್ಮ ಶರೀರಕ್ಕಾಗಿದ್ದರೆ ಒಂದೆರಡು ಉದಾಹರಣೆ ಕೊಡಿ. ಹಾಗೆ ಕಾಮಕೇಳಿಯ ಅನುಭವವನ್ನು ತಿಳಿಸಿರಿ. ಆಗ ಮಾತ್ರ ನಿಮ್ಮನ್ನು ಪರಿಪೂರ್ಣಜ್ಞಾನಿಗಳೆಂದು ಒಪ್ಪಿಕೊಳ್ಳುವೆ" ಎಂದಳು.

ಉಭಯಭಾರತಿಯ ಈ ಪ್ರಶ್ನೆಯಿಂದ ಶಂಕರಾಚಾರ್ಯರು ಸ್ವಲ್ಪ ಪೇಚಿಗೆ ಸಿಲುಕಿದರು. ಆದರೂ ಉಪಾಯವೊಂದು ಹೊಳೆಯಿತು. ಅಂದೇ ಆ ಊರಿನ ರಾಜ ಅಮರಕನೆಂಬುವನು ಸಾವನ್ನಪ್ಪಿದ್ದ. ರಾಜನೆಂದ ಮೇಲೆ ಬಹುಸ್ತ್ರೀಲೋಲಾಪ್ತನೇ ಆಗಿರುತ್ತಾನೆ. ಅವನಲ್ಲಿ ಕಾಮಕೇಳಿಯ ಅನುಭವ ವಿಶೇಷವಾಗಿರುತ್ತದೆ. ಆದ್ದರಿಂದ ಆತನ ಶರೀರದಲ್ಲಿ ತಮ್ಮ ಜೀವಾತ್ಮನನ್ನು ಪ್ರವೇಶ ಮಾಡಿ ಅಂದರೆ ಪರಕಾಯ ಪ್ರವೇಶ ಹೊಂದಿ, ಆ ಶರೀರಕ್ಕಾಗಿರುವ ಕಾಮಕೇಳಿಯ ಅನುಭವಗಳನ್ನು ಪರಿಚಯಿಸಿಕೊಂಡು ಪುನ: ತಮ್ಮ ಶರೀರ ಪ್ರವೇಶಿಸಿ ಅವುಗಳ ಅನುಭವನ್ನು ಹೇಳಬೇಕೆಂದುಕೊಂಡರು. ಹಾಗೆಯೇ ಮಾಡಿದರೂ ಸಹ. ನಂತರ ಮಂಡನಮಿಶ್ರ ಉಭಯಭಾರತಿಯರೀರ್ವರೂ ಸೋಲನ್ನೊಪ್ಪಿಕೊಂಡರು.

ಈ ಪರಕಾಯ ಪ್ರವೇಶವು ಮುಂದೆ ಅವರ ಪೀಠಾರೋಹಣಕ್ಕೆ ಅಡ್ಡಿಯಾಯಿತು. ಸಾಕ್ಷಾತ್ ಶಾರದಾದೇವಿಯೇ ಆ ಅದ್ವೈತ ಪೀಠದ ಮೇಲೆ ಕುಳಿತುಕೊಂಡು ಶಂಕರರನ್ನು ಪೀಠಾರೋಹಣ ಮಾಡದಂತೆ ತಡೆಹಿಡಿದಳು. "ಕಾಮಕೇಳಿಯ ಅನುಭವವಿರುವ ನಿನಗ ಈ ಪೀಠ ಏರುವ ಅರ್ಹತೆಯಿಲ್ಲ" ಎಂದು ಅಡ್ಡಿಪಡಿಸಿದಳು.

ಶಂಕರರು ಅದಕ್ಕೆ "ಹೇ ತಾಯಿ, ಜಗನ್ಮಾತೆ! ಜೀವಾತ್ಮ ಹಣ್ಣು ತಿನ್ನುವ ಹಕ್ಕಿ, ಪರಮಾತ್ಮ (ಆತ್ಮ) ನೋಡುವ ಹಕ್ಕಿ. ಆದ್ದರಿಂದ ಈ ಆತ್ಮ ಒಂದು ಶರೀರವನ್ನಷ್ಟೇ ಅಲ್ಲ, ಈ ಹಿಂದ ಅದೆಷ್ಟೋ ಶರೀರಗಳನ್ನಾಧರಿಸಿ ಬಂದೆದ್ದಾಗಿದೆ. ಆದರೆ ಈ ಜನ್ಮದಲ್ಲಿ ಧರಿಸಿದಂತಹ ಶರೀರವು ಮಾತ್ರ ಹಿಂದಿನ ಜನ್ಮಗಳಂತೆ ಸಂಸಾರದ ಗೊಂದಲಕ್ಕೆ ಸಿಕ್ಕಿಕೊಳ್ಳದೆ ಪವಿತ್ರತೆಯನ್ನು ಕಾಪಾಡಿಕೊಂಡಿರುವುದು. ಇಷ್ಟಂತೂ ಸತ್ಯ, ಮುಂದಿನ ತೀರ್ಮಾನ ನಿನ್ನದು ತಾಯೆ ಎಂದು ಹೇಳಿ ಮೌನವಿಸಿದರು. ಶಂಕರಾಚಾರ್ಯರ ದಿಟ್ಟ ಉತ್ತರಕ್ಕೆ ಶಾರದಾದೇವಿಯು ಸಂತೃಪ್ತಳಾಗಿ ಅವರು ಪೀಠಾರೋಹಣ ಮಾಡಲು ಅನುವು ಮಾಡಿಕೊಟ್ಟಳು. ಭರ್ತೃಹರಿ ಹೇಳಿರುವಂತ ಶಾಸ್ತ್ರಜ್ಞರು ಸಹ ವಾದವಿವಾದಗಳ ಗೊಂದಲದಲ್ಲಿ ನೋವನ್ನನುಭವಿಸಿರುವರು.

'ಗುಣೇ ಖಲ ಭಯಂ' ಗುಣವಂತರಿಗೆ ನೀಚರ ಪರಪೀಡಕರ ಭಯವು. ಮಹಾರಾಷ್ಟ್ರದ ಅಲಂದಿ ಗ್ರಾಮ. ಜ್ಞಾನದೇವ ಸೋಪಾನದೇವ ಮತ್ತು ಮುಕ್ತಾಬಾಯಿ ಎಂಬ ಮೂವರು ಓರ್ವ ದಂಪತಿಯ ಮಕ್ಕಳು. ಮೂವರೂ ಗುಣವಂತರೆ. ತಂದೆತಾಯಿಗಳಿರದ ಇವರನ್ನು ಪಕ್ಕದ ಮನೆಯ ಕೆಟ್ಟ ಬ್ರಾಹ್ಮಣನೊಬ್ಬ ಪ್ರತಿನಿತ್ಯವೂ ಪೀಡಿಸುತ್ತಿದ್ದ. ಅವನ ಹೆಸರು ವಿನೋಬಾಚಾರಿ.

ಒಂದು ದಿನ ಮುಕ್ತಾಬಾಯಿಗೆ ಪರೋಟ ತಿನ್ನಬೇಕೆಂಬ ಆಸೆಯಾಯಿತು. ಇದನ್ನು ಅಣ್ಣ ಜ್ಞಾನದೇವನಿಗೆ ಹೇಳಿದಳು. ಜ್ಞಾನದೇವ "ತಂಗಿ ಇದಕ್ಕೆ ಮಣ್ಣಿನ ಹಂಚು ಬೇಕು.

ಕುಂಬಾರರ ಮನೆಗೆ ಹೋಗಿ ತಂದು ನಂತರ ಮಾಡಿಕೊಡುತ್ತೇನೆ" ಎಂದು ಹೇಳಿದ. ಈ ಸಂಭಾಷಣೆ ಪಕ್ಕದ ಮನೆಯ ಪರಪೀಡಕ ವಿನೋಬಾಚಾರಿಗೆ ಕೇಳಿಸಿತು. ಕೂಡಲೆ ಕುಂಬಾರರೆಲ್ಲರ ಮನೆಗಳಿಗೆ ಹೋಗಿ ಅವರಿಗೆ ಹಣದಾಸೆ ತೋರಿಸಿ, ಜ್ಞಾನದೇವ ಬಂದು ಕೇಳಿದರೆ ಹಂಚು ಕೊಡಬೇಡಿ ಎಂದು ಹೇಳಿ ಅವರಿಗೆ ಹಣ ಕೊಟ್ಟು ಕಾಲ್ಕಿತ್ತಿದ. ಆನಂತರ ಜ್ಞಾನದೇವ ಕುಂಬಾರರಲ್ಲಿಗೆ ಬಂದು ಹಂಚು ಕೇಳಿದ. ಕುಂಬಾರರೆಲ್ಲರಲ್ಲೂ 'ಹಂಚಿಲ್ಲ, ಹಂಚಿಲ್ಲ' ಎಂಬ ಉತ್ತರ ಬಂದಿತ್ತು. ಬರಿಗೈಲೆ ಮನೆಗೆ ಬಂದ.

ಹಂಚು ತರದೆ ಬರಿಗೈಯಲ್ಲಿ ಬಂದ ಅಣ್ಣನನ್ನು ನೋಡಿದ ತಂಗಿ, "ಅಣ್ಣಾ ಹಂಚು ತರಲಿಲ್ಲವೇ?" ಎಂದು ಕೇಳಿದಳು. "ಹಂಚು ಸಿಗಲಿಲ್ಲವಮ್ಮಾ ಖಾಲಿಯಾಗಿವೆಯಂತೆ. ಸಿಗದಿದ್ದರೇನಂತೆ, ನಿನಗೆ ಪರೋಟ ಬೇಕು ತಾನೆ?" ಎಂದು ಹೇಳಿ ಪರೋಟಗಳನ್ನು ತಯಾರು ಮಾಡಲು ಜ್ಞಾನದೇವನು ಉರಿಯುವ ಒಲೆಯ ಮೇಲೆ ಬಾಗಿ ನಿಂತು! "ತಂಗೀ ಆ ಹಸಿ ಪರೋಟಗಳನ್ನು ನನ್ನ ಬೆನ್ನ ಮೇಲೆ ಹಾಕಿ ಬೇಯಿಸು, ಈ ಶರೀರವೂ ಸಹ ಮಣ್ಣಿನದೆ" ಎಂದು ಹೇಳಿದ. ಮುಕ್ತಾಬಾಯಿ ಅಣ್ಣ ಹೇಳಿದಂತೆ ಆತನ ಬೆನ್ನ ಮೇಲೆ ಪರೋಟಗಳನ್ನು ಬೇಯಿಸಿದಳು. ವಿನೋಬಾಚಾರಿ ಮರೆಯಲ್ಲಿ ನಿಂತು ಇದನ್ನೆಲ್ಲ ನೋಡುತ್ತಿದ್ದ. ತಾನಲ್ಲಿಯವರೆಗೂ ಮಾಡುತ್ತಿದ್ದ ತಪ್ಪುಗಳ ಅರಿವು ಅವನಿಗಾಯಿತು. ಕೂಡಲೇ ಪಶ್ಚಾತ್ತಾಪಪಟ್ಟು ಓಡೋಡಿ ಬಂದು ಜ್ಞಾನದೇವನ ಕಾಲು ಹಿಡಿದು ಕ್ಷಮೆ ಕೇಳಿದ. ಹೀಗೆ! "ಜ್ಞಾನದೇವಾ ನೀನು ನಿನ್ನ ಬೆನ್ನ ಮೇಲೆ ಸುಟ್ಟಿದ್ದು ಪರೋಟಗಳನ್ನಲ್ಲ, ನನ್ನ ಅಜ್ಞಾನವನ್ನು. ನನ್ನನ್ನು ನೀನು ಕ್ಷಮಿಸಿರುವೆ ಎನ್ನುವವರೆಗೂ ನಾ ನಿನ್ನ ಕಾಲು ಬಿಡುವುದಿಲ್ಲ" ಎಂದು ಪಾದ ಹಿಡಿದಿದ್ದ. ಇದನ್ನೆಲ್ಲ ಗಮನಿಸಿದ ಮುಕ್ತಾಬಾಯಿ 'ಅರೇ ಖಚ್ಚರ್' ಎಂದು ಬೈದಳು. ಮರಾಠಿಯಲ್ಲಿ 'ಖಚ್ಚರ್' ಎಂದರೆ ಕತ್ತೆ ಎಂದರ್ಥ. ಅಂದಿನಿಂದ ವಿನೋಬಾಚಾರಿಗೆ 'ವಿನೋಬಾಖಚ್ಚರ್' ಎಂಬ ಹೆಸರು ಶಾಶ್ವತವಾಗಿ ಉಳಿದುಬಿಟ್ಟಿತು.

ವಿನೋಬಾಚಾರಿಯನ್ನು ತಂಗಿ ಮುಕ್ತಾಬಾಯಿ ಬೈದುದಕ್ಕೆ ಜ್ಞಾನದೇವನು, "ತಂಗಿ ನಾವು ಯಾರನ್ನೂ ನಿಂದಿಸಬಾರದು. ಯಾಕೆಂದರೆ! ಅದು ಆತ ಬೇಕಂತಲೇ ಮಾಡಿದ ತಪ್ಪಲ್ಲ. ಭಗವಂತ ನಮಗೆ ಶಾಂತಿ ಸಹನೆ ಕಲ್ಪಿಸುವುದಕ್ಕಾಗಿ ಆತನಿಂದ ಹೀಗೆ ಮಾಡಿಸಿರುವುದು. ಅದನ್ನು ನೀ ತಪ್ಪಾಗಿ ಗ್ರಹಿಸಬೇಡ" ಹೀಗೆ ತಂಗಿಗೂ ಸಮಾಧಾನ ಹೇಳಿ, ವಿನೋಬಾಚಾರಿಗೂ ಸಾಂತ್ವಾನವನ್ನುಪದೇಶಿಸಿ ಜ್ಞಾನದೇವ ಮೌನವಹಿಸಿದ.

ಕೊನೆಯದಾಗಿ ಭರ್ತೃಹರಿಯು 'ಕಾಯೇ ಕೃತಾಂತ್ಭಯಂ' ಬೇರೊಂದು ವಸ್ತು ವ್ಯಕ್ತಿಗಳಿಂದಷ್ಟೆಯಲ್ಲ ಭಯವಿರುವುದು. ಈ ನಮ್ಮ ಶರೀರಕ್ಕೆ ಸದಾ ಸಾವಿನ ಭಯವೂ ಇದ್ದೇ ಇರುವುದು. ಆದರೆ ಸಂತಶರಣರಿಗೆ ಮಾತ್ರ ಆ ಭಯ ಇರುವುದಿಲ್ಲ. ಅದರ ಬಗ್ಗೆ ಮಹಾತ್ಮರು ಹೀಗೆ ಹೇಳಿದ್ದಾರೆ. 'ಶರಣರ ಮರಣ ಮಹಾನವಮಿ, ಲೌಕಿಕರ ಮರಣ ಹೋಳಿಹುಣ್ಣಿಮಿ' ಎಂತೆಂದು.

ಒಂದು ಝೆನ್ ಕಥೆ ಹೀಗಿದೆ. ಒಬ್ಬ ಯೋಧ ದೇಶ ರಕ್ಷಣೆಗಾಗಿ ಹೆಂಡತಿಯನ್ನು

ಬಿಟ್ಟು ಯುದ್ಧಕ್ಕೆ ಹೋಗಿದ್ದ. ಐದಾರು ವರ್ಷವೇ ಕಳೆದು ಹೋದವು. ಪ್ರಾಯದ ಹೆಂ
ವಿರಹವೇದನೆ ತಾಳಲಾರದೆ ಮನೆಗೆಲಸದವನೊಂದಿಗೆ ದೈಹಿಕ ಸಂಬಂಧ ಇಟ್ಟುಕೊಂಡಿದ್ದ
ಇಬ್ಬರೂ ಏಕಾಂತದಲ್ಲಿದ್ದಾಗ ಯೋಧಪತಿ ಮನೆಗೆ ಹಿಂತಿರುಗಿ ಬಂದಿದ್ದ. ಆಗವನ ಕ
ಕಂಡದ್ದು ಅವರಿಬ್ಬರ ರತಿಕ್ರೀಡೆ. ಕೂಡಲೇ ಆ ಯೋಧನಿಗೆ ಎಲ್ಲಿಲ್ಲದ ಸಿಟ್ಟು ಬಂತು. ಆದ
ನಿಯಂತ್ರಿಸಿಕೊಂಡು ಆ ಮನೆಗೆಲಸದವನಿಗೆ ಹೇಳಿದ. "ಈಗಿಂದೀಗಲೇ ನಿಮ್ಮಿಬ್ಬರನ್ನು
ಕತ್ತಿಯಿಂದ ಕತ್ತರಿಸಿ ತುಂಡುತುಂಡು ಮಾಡಬಹುದಿತ್ತು. ಆದರೆ ಶೂರ ಸೈನಿಕನಾದ ನಾ
ನಿಶಸ್ತ್ರದಾರ ನಿನ್ನನ್ನು ಕೊಲ್ಲುವುದು ಧರ್ಮಬಾಹಿರ. ಹೀಗೆ ನಮ್ಮ ಗುರು ಹೇಳಿರುವುದರಿ
ನಿನ್ನನ್ನು ಕೊಲ್ಲುತ್ತಿಲ್ಲ. ಬದಲಾಗಿ ನೀನು ನನ್ನೊಂದಿಗೆ ಕೈಯಲ್ಲಿ ಕತ್ತಿ ಹಿಡಿದು ಯುದ್ಧ ಮಾ
ಅದರಲ್ಲಿ ನಾ ಸೋತರೆ ನನ್ನ ಹೆಂಡತಿಯನ್ನು ನೀನು ಅನುಭವಿಸು" ಎಂದವನಿಗೊಂದು ಕ
ಕೊಟ್ಟ. ಸೇವಕ ಸೈನಿಕನು ಹಾಕಿದ ಷರತ್ತನ್ನು ಒಪ್ಪಿಕೊಂಡು ಹೀಗೆ ಹೇಳಿದ, "ನನಗ ಕ
ಹೇಗೆ ಹಿಡಿಯಬೇಕೆಂಬುದೇ ಗೊತ್ತಿಲ್ಲ, ನೀನು ಗುರುವಿನಿಂದ ಕಲಿತಿರುವೆ. ಆದರೂ ನಾನ
ಗುರುವಿನಿಂದ ವಿದ್ಯೆ ಕಲಿತು ಬರುತ್ತೇನೆಂದು ಹೇಳುವುದಿಲ್ಲ. ಗುರುವೊಬ್ಬನ ಆಶೀರ್ವಾ
ಪಡೆದು ಬಂದು ನಿನ್ನೊಂದಿಗೆ ಯುದ್ಧ ಮಾಡುತ್ತೇನೆ" ಎಂದು ಹೇಳಿ ಅವನಿಂದ ಅನುಮ
ಪಡೆದು ಗುರು ಒಬ್ಬನ ಬಳಿಗೆ ಹೊರಟ. ಆ ಗುರು ಬೇರಾರೂ ಆಗಿರಲಿಲ್ಲ, ಆ ಯೋಧ
ಕತ್ತಿವರಸೆ ಹೇಳಿಕೊಟ್ಟಂತಹ ಗುರುವೇ ಅವನಾಗಿದ್ದ. ಬಂದವರ ಪಾದಕ್ಕೆರಗಿ ನಡೆದುದ್ದನ್ನ
ಸವಿಸ್ತಾರವಾಗಿ ಹೇಳಿಕೊಂಡನಲ್ಲದೆ "ತನಗೆ ಜಯ ಸಿಗುವಂತಹ ಗುಟ್ಟಿನ ಪಟ್ಟೊಂದ
ಹೇಳಿಕೊಟ್ಟು ಆಶೀರ್ವದಿಸಿ ಕಳಿಸಿರಿ' ಎಂದು ಕೇಳಿಕೊಂಡ.

ಗುರುಗಳು "ನೀನು ಯುದ್ಧ ಮಾಡುತ್ತಿರುವುದು ಬೇರಾರೊಂದಿಗೂ ಅಲ್ಲ, ಅವ
ನನ್ನ ಪರಮಶಿಷ್ಯ. ಅವನನ್ನು ಗೆಲ್ಲುವುದಾಗಲಿ, ಕೊಲ್ಲುವುದಾಗಲಿ ನನ್ನನ್ನು ಹೊರತುಪಡಿ
ಬೇರಾರಿಂದಲೂ ಸಾಧ್ಯವಿಲ್ಲ. ಆದರೆ ನೀನೀಗ ನನ್ನನ್ನು ಗುರುವೆಂದು ಭಾವಿಸಿ ಬಂದಿರು
ಪ್ರಸ್ತುತ ಸಂದರ್ಭಕ್ಕೆಷ್ಟು ಬೇಕೋ ಅಷ್ಟು ಹೇಳಿ ಕಳಿಸುತ್ತೇನೆ. ಈ ಸಂದರ್ಭದಲ್ಲಿ ನಿನಗೆ ಬೇಕಿರುವು
ವಿದ್ಯೆಯಲ್ಲ, ಆತ್ಮಸ್ಥೈರ್ಯ. ಅದಕ್ಕಾಗಿ ಮೊದಲು ನೀನು ಕಾದಾಡುವಾಗ ಮರಣದ ಭ
ಬಿಟ್ಟು ಹೋರಾಡು. ಯಾಕೆಂದರೆ ಸಾವೆಂಬುದು ನಮ್ಮ ಹುಟ್ಟಿನ ಜೊತೆಯಲ್ಲಿಯ
ಬಂದಿರುವಂಥದ್ದು. ಆದ್ದರಿಂದ ನೀನು ಮೊದಲು ಸಾವಿಗೆ ಹೆದರುವುದನ್ನು ಬಿಟ್ಟುಬಿಡು. ಈ
ನೀನು ಕಳೆದುಕೊಳ್ಳುವಂತಹದ್ದು ಏನೂ ಇಲ್ಲ. ಕಳೆದುಕೊಂಡಿರುವುದು ಆ ಯೋಧ. ಮು
ಕಳೆದುಕೊಳ್ಳುವವನೂ ಸಹ ಅವನೇ. ಈಗಾಗಲೇ ಅವನು ತನ್ನ ಹೆಂಡತಿ ಮತ್ತು
ಪ್ರತಿಷ್ಠೆಗಳೆರಡನ್ನೂ ಕಳೆದುಕೊಂಡಿದ್ದಾನೆ. ಜೊತೆಗೆ ಅವನ ಮಾನಸಿಕ ಸುಸ್ಥಿತಿಯ
ಕಳೆದುಹೋಗಿದೆ. ಇಷ್ಟೆಲ್ಲಾ ಕಳೆದುಕೊಂಡಿರುವ ಅವನಲ್ಲಿ ನಾ ಕಲಿಸಿದಂತಹ ವಿದ್ಯೆಯ ಶಕ್ತಿಯ
ಸಹ ಕಳೆಗುಂದುವುದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದ ನೀನು ನಾನೇನನ್ನೂ ಕಳೆದುಕೊಂಡಿ
ಹೊಸದನ್ನು ಪಡೆದುಕೊಂಡಿರುವೆ ಹಾಗೂ ಅದನ್ನು ಮತ್ತೆ ನನ್ನದಾಗಿಸಿಕೊಳ್ಳುವೆನೆಂ
ಆತ್ಮಸ್ಥೈರ್ಯದಿಂದ ನಿನ್ನ ಮನಬಂದಂತೆ ಕತ್ತಿಯನ್ನು ತಿರುಗಿಸು. ಹೀಗೆ ಮಾಡಿದಲ್ಲಿ ನಿನ
ಜಯ ಕಟ್ಟಿಟ್ಟ ಬುತ್ತಿ" ಎಂದು ಹೇಳಿ ಆಶೀರ್ವದಿಸಿ ಕಳಿಸಿದರು.

ಗುರುಗಳ ಆಶೀರ್ವಾದ ಪಡೆದುಕೊಂಡು ಘರ್ಜಿಸುತ್ತಾ ಯೋಧನಲ್ಲಿಗೆ ಬಂದು ಕತ್ತಿವರಸೆಯ ಯುದ್ಧಕ್ಕೆ ಯೋಧನನ್ನು ಕರೆದ. ಇಬ್ಬರೂ ಕತ್ತಿವರಸೆ ಪ್ರಾರಂಭಿಸಿದರು. ಯೋಧ ಪಟ್ಟುಗಳನ್ನನುಸರಿಸುತ್ತಿದ್ದ. ಸೇವಕ ಯದ್ವಾತದ್ವಾ ಕತ್ತಿ ಬೀಸುತ್ತಿದ್ದ. ಯೋಧ ಹೆದರಿ ಹಿಂದೆ ಹಿಂದೆ ಸರಿಯುತ್ತಿದ್ದ. ಅವನು ಹಿಂದೆ ಸರಿದಂತೆಲ್ಲ ಇವನಲ್ಲಿ ಧೈರ್ಯ-ಶಕ್ತಿ ಹೆಚ್ಚಾಗುತ್ತಿತ್ತು. ಇನ್ನೂ ಬಿರುಸಿನಿಂದ ಏರೇರಿ ಮೇಲೆ ಹೋದ. ಯೋಧ ಹಿಂದಿದ್ದ ಒಂದು ಗೋಡೆಯ ಮೇಲೆ ಬಿದ್ದಬಿಟ್ಟ. ಕತ್ತಿಯೂ ಕೈಜಾರಿತು. ಕೂಡಲೇ ಸೇವಕ ಅವನ ಪ್ರಾಣಹರಣ ಮಾಡಲು ಕತ್ತಿ ಮೇಲೆತ್ತಿದ. ಯೋಧನಾಗ! "ಅಯ್ಯಾ ನನ್ನನ್ನು ಕಾಪಾಡು, ನನಗೆ ಪ್ರಾಣಭಿಕ್ಷೆ ನೀಡು. ನಾನು ಸೋತಿರುವೆ, ಅವಳಿನ್ನು ನನ್ನವಳಲ್ಲ, ಅವಳು ನಿನ್ನವಳು" ಎಂದು ಕಿರುಚಾಡಿದ. ಭಯದಿಂದ ಬೇಡಿಕೊಂಡ.

ಭರ್ತೃಹರಿ 'ಕಾಂಯೇಕೃತಾಂತಾದ್ಭಯಂ' ಎಂದಿರುವುದು. ಇದಕ್ಕಲ್ಲವೇ? ಮತ್ತೆ ಆ ಶ್ಲೋಕದ ಕೊನೆಗೆ ಹೇಳಿದ್ದಾನೆ. 'ಸರ್ವವಸ್ತು ಭಯಾನ್ವಿತಂ ಭುವಿನ್ನಣಾಂ ವೈರಾಗ್ಯಮೇವಾಽಭಯಂ' ಎಂದು. ಅಂದರೆ ಜಗತ್ತಿನಲ್ಲಿರುವ ಪ್ರತಿಯೊಂದೂ ಭಯ ಹಾಗೂ ದುಃಖಗಳಿಂದ ಕೂಡಿರುವಂಥವುಗಳು. ಆದರೆ ವೈರಾಗ್ಯ ಮಾತ್ರ ಭಯ ಹಾಗೂ ದುಃಖಗಳಿಲ್ಲದ್ದು.

ವೈರಾಗ್ಯವೆಂದರೆ ಭಗವಂತನ ಮೇಲಿನ ಪ್ರೇಮವೊಂದನ್ನು ಬಿಟ್ಟು ಉಳಿದೆಲ್ಲವನ್ನೂ ತ್ಯಾಗ ಮಾಡುವುದು. ರಾಗವನ್ನುಳಿದುದೇ ವೈರಾಗ್ಯ. ರಾಗ ದೂರವಾದರೆ ದ್ವೇಷ ತಾನಾಗಿಯೇ ದೂರವಾಗುವುದು. ಆಸೆಯನ್ನುಳಿದ ವೈರಾಗ್ಯನಿಧಿ ಅಕ್ಕಮ್ಮ ತನ್ನ ವಚನಗಳಲ್ಲಿ ಹೀಗೆ ಹೇಳುತ್ತಾಳೆ.

ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದರೆ ಕೆರೆಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗೀತಕ್ಕೆ ನೀನೆನಗುಂಟು ॥

ನಾಳಿನ ಚಿಂತೆಯಿಲ್ಲ, ಗಳಿಕೆಯ ಚಿಂತೆಯಿಲ್ಲ, ಉಳಿಸುವ ಚಿಂತೆಯಿಲ್ಲ, ವೈಭೋಗ ಜೀವನದ ಆಸೆಯಿಲ್ಲ. ಭಗವಂತನನ್ನು ಕಾಣುವ ಹಂಬಲ ಮಾತ್ರ.

ಶಿವಾಜಿಯ ಗುರುಗಳು ರಾಮದಾಸರು. ಅವರೊಮ್ಮೆ ತಮ್ಮ ಹತ್ತು ಜನ ಶಿಷ್ಯರೊಂದಿಗೆ ಶಿವಾಜಿಯನ್ನು ನೋಡಲು ಹೊರಟರು. ದಾರಿಯಲ್ಲಿ ಒಂದು ಕಬ್ಬಿನ ತೋಟವಿತ್ತು. ಶಿಷ್ಯರಿಗೆ ಬಹಳ ಹಸಿವು ಬಾಯಾರಿಕೆಯಾಗಿತ್ತು. ತೋಟದ ಮಾಲಿಕ ಅಲ್ಲೆಲ್ಲೂ ಕಾಣಲಿಲ್ಲ. ಆಗ ಶಿಷ್ಯರು "ನಾವು ಸಾಧುಸಂತರಿದ್ದೇವೆ. ತೋಟದೊಡೆಯ ಕಾಣುತ್ತಿಲ್ಲವಾದ್ದರಿಂದ ನಾವು ಕಿತ್ತು ತಿಂದರೆ ದೋಷವೇನೂ ಬರಲಾರದು". ಹಾಗೆ ಆಲೋಚಿಸಿದ ಕೊನೆಗೆ ಗುರುಗಳಾದಂತಹ ರಾಮದಾಸರ ಅಪ್ಪಣೆ ಪಡೆದುಕೊಂಡು ಕಬ್ಬು ಕಿತ್ತಿ ತಂದು ಹಸಿವು .ತೃಷೆಗಳನ್ನು ನೀಗಿಸಿಕೊಂಡರು. ಕ್ಷಣ ಹೊತ್ತಿನಲ್ಲಿ ತೋಟದ ಯಜಮಾನ ಅಲ್ಲಿಗೆ ಬಂದು ನೋಡಿ ಸಿಟ್ಟಿನಿಂದ ರಾಮದಾಸರ ಬೆನ್ನಿನ ಮೇಲೆ ಬಾಸುಂಡೆ ಬರುವಂತೆ ಹಸಿ ಕಬ್ಬಿನಿಂದ ಸರಿಯಾಗಿ ಬಾರಿಸಿದ. ಯಾರೊಬ್ಬರೂ ಏನನ್ನೂ ಮಾತಾಡದೆ ಶಿವಾಜಿಯ ಅರಮನೆಯ ಕಡೆಗೆ ನಡೆದರು.

ಗುರುಗಳಿಗೆ ಅರಮನೆಯಲ್ಲಿ ಭವ್ಯ ಸ್ವಾಗತ ದೊರೆಯಿತು. ವೇದಘೋಷಗಳಿಂ ಪಾದಪೂಜೆಯೂ ನಡೆಯಿತು. ತನ್ನ ಗುರುಗಳಿಗೆ ನಮಸ್ಕರಿಸಿ, ನಂತರ ತಾಮ್ರಶಾಸನವೊಂದನ್ನು ಶಿವಾಜಿಯು ಅವರ ಜೋಳಿಗೆಗೆ ಹಾಕಿದನು. ರಾಮದಾಸರು ಆ ಶಾಸನವನ್ನು ತೆಗೆದು ಓದುತ್ತಾ ಅದರಲ್ಲಿ ಹೀಗೆ ಬರೆದಿರುತ್ತದೆ. "ಗುರುವರ್ಯರೇ ನಾನು, ನನ್ನ ಕುಟುಂಬ, ನನ್ನ ರಾಜ್ಯ ಸಮಸ್ತವೂ ನಿಮ್ಮ ಚರಣಾರವಿಂದಗಳಿಗೆ ಸಮರ್ಪಿಸಿರುತ್ತೇನೆ. ಇನ್ನು ಮುಂದೆ ಇವೆಲ್ಲವೂ ನಿಮ್ಮ ಅಧೀನ. ಇನ್ನುಳಿದಿರುವುದು ನನಗೆ ನಿಮ್ಮ ಸೇವೆ ಮಾತ್ರ". ಕೊನೆಯಲ್ಲಿ ಶಿವಾಜಿಯ ಸಹಿ ಇತ್ತು. ರಾಮದಾಸರದಕ್ಕೆ "ಶಿವು ಏನಪ್ಪಾ ಇದು" ಎಂದು ಕೇಳಿದರು. "ಗುರುವೇ ಇದೂ ಸಹ ನಿಮ್ಮ ಪ್ರೇರಣೆಯೇ" ಎಂದ. ಗುರುಗಳು ಮತ್ತೆ "ಆಯಿತು, ನಿನ್ನಿಚ್ಛೆಯಂತೆ ನಾವು ಸ್ವೀಕಾರ ಮಾಡಿದ್ದೇವೆ. ಇನ್ನು ಮುಂದೆ ಇದೆಲ್ಲವೂ ನನ್ನದೆ. ಆದರೆ ಈ ರಾಜ್ಯದ ಪರಿಪಾಲನೆ ಮಾತ್ರ ನೀನು ಮಾಡತಕ್ಕದ್ದು. ಇದು ಗುರುವಿನಾಜ್ಞೆ. ಇದಾವುದೂ ನನ್ನದಲ್ಲ. ಸಮಸ್ತವೂ ಗುರುವಿನದು ಎಂತೆಂಬ ನಿರ್ಲಿಪ್ತ ಭಾವದಿಂದ ರಾಜ್ಯವನ್ನಾಳು" ಎಂದು ಆಜ್ಞಾಪಿಸಿದರು.

ಶಿವಾಜಿ ಗುರುವಿನ ಆಜ್ಞೆಗೆ ತಲೆಬಾಗಿದ. ಅಷ್ಟೆ ಅಲ್ಲ. ಅಂದಿನಿಂದ ತನ್ನ ಮರಾಠಾ ಸಾಮ್ರಾಜ್ಯಕ್ಕೆ ಗುರುಗಳ ಕಾವಿ ಬಟ್ಟೆಯ ತುಂಡನ್ನೇ ಭಗವಾನ್ ಝುಂಡಾವನ್ನಾಗಿಸಿಕೊಂಡು ಮುಂದವರ ಹೆಸರಿನಿಂದಲೇ ನಿರ್ಲಿಪ್ತಭಾವನೆಯಿಂದ ರಾಜ್ಯವಾಳಿದ.

ಗುರುಗಳು ಸ್ನಾನ ಮಾಡಲೆಂದು ಬಟ್ಟೆಬರೆಗಳನ್ನು ಬಿಚ್ಚಿದ್ದರು. ಆಗ ಅವರ ಬೆನ್ನಿನ ಮೇಲೆ ಬಾಸುಂಡೆಗಳು ಕಂಡುಬಂದವು. ಅದು ಹೇಗಾಯಿತು ಎಂದು ಕೇಳಿದ್ದಕ್ಕೆ ರಾಮದಾಸರು ಏನನ್ನೂ ಹೇಳಲಿಲ್ಲ. ಆದರೆ ಶಿಷ್ಯರು ಮಾತ್ರ ಸುಮ್ಮನಿರದೆ ನಡೆದುದ್ದನ್ನೆಲ್ಲ ಹೇಳಿಬಿಟ್ಟರು. ಶಿವಾಜಿ ಕೂಡಲೆ ಆ ರೈತನನ್ನು ರಾಜ್ಯಸಭೆಗೆ ಕರೆಯಿಸಿದ. ಗುರುಗಳನ್ನೇ ಸಿಂಹಾಸನದ ಮೇಲೆ ಕೂಡಿಸಿ ಆ ರೈತನಿಗೆ ಯಾವ ಶಿಕ್ಷೆ ಕೊಡಬೇಕೆಂದು ಕೇಳಿಕೊಂಡ. ಗುರುಗಳು ಆ ರೈತನನ್ನು "ಅಪ್ಪಾ ನೀನು ಆ ಜಮೀನಿಗೆ ಎಷ್ಟು ಕಂದಾಯ ಕಟ್ಟುತ್ತಿರುವೆ" ಎಂದು ಕೇಳಿದರು. ಅವನು 'ಎಂಬತ್ತು ರೂಪಾಯಿಗಳು' ಎಂದು ಹೇಳಿದ. ಅದಕ್ಕೆ ಗುರುಗಳು "ಇನ್ನು ಮುಂದೆ ನೀನಷ್ಟೆಯಲ್ಲ ನಿಮ್ಮ ವಂಶದವರಾರೂ ಆ ಭೂಮಿಗೆ ಕಂದಾಯ ಕಟ್ಟಬೇಕಾಗಿಲ್ಲ. ನಿನಗೆ ಹೇಳದೆ ಕೇಳದೆ ನಮ್ಮ ಶಿಷ್ಯರು ನಿನ್ನ ಹೊಲದ ಕಬ್ಬು ತಿಂದಿರುವುದರಿಂದ ನೀನು ಮತ್ತು ನಿನ್ನ ವಂಶದವರು ಕಟ್ಟುವಂತಹ ಮುಂದಿನ ಕಂದಾಯವೆಲ್ಲ ನಮಗೆ ಪಾವತಿಯಾಗಿದೆ. ಇದೇ ನಾನು ಕೊಡುತ್ತಿರುವ ತೀರ್ಪು ಮತ್ತು ಶಿಕ್ಷೆ" ಎಂದು ಹೇಳಿ ಮೌನವಿಸಿದರು. ಇದು ವೈರಾಗ್ಯದ ಜೀವನ. ಇಲ್ಲಿ ಆಸೆಯಿಲ್ಲ, ರಾಗವಿಲ್ಲ, ದ್ವೇಷವಿಲ್ಲ. ಇಂಥವರೇ ಜೀವನ್ಮುಕ್ತರು, ಪರಮಾನಂದರು.

ವೈರಾಗ್ಯವೆಂದರೆ ಏನನ್ನೋ ಕಟ್ಟುವುದಲ್ಲ, ಬೆಳೆಸುವುದಲ್ಲ, ನಮ್ಮ ಮೈಮನ ಬುದ್ಧಿ ಭಾವಗಳ ಸುತ್ತ ಮೆತ್ತಿಕೊಂಡು, ಚುಚ್ಚಿ ಬಾಧಿಸುತ್ತಿರುವ ವಿಷದ ಮುಳ್ಳಿನ ಕಂತೆಗಳನ್ನು ಕಿತ್ತು ಸುಟ್ಟುಹಾಕುವುದು. ದು:ಖದ ಹೊದಿಕೆಯನ್ನು ಕಿತ್ತೊಗೆದು ಆಕಾಶದಂತೆ ಸಂಪೂರ್ಣ ಬೆತ್ತಲಾಗುವುದು. ಇಂತಹ ಮಾರ್ಗದತ್ತ ಚಲಿಸಲು ಕಾರ್ಯೋನ್ಮುಖರಾದವರಿಗೆಲ್ಲ ನಿತ್ಯಾನಂದ ದೊರಕುವುದರಲ್ಲಿ ಸಂದೇಹವೇ ಇಲ್ಲ.

# ಧನ್ಯೋಗೃಹಸ್ಥಾಶ್ರಮ

ಆಶ್ರಮಗಳು ನಾಲ್ಕು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಎಂತೆನ್ನುವವು. ಸಾಂಸಾರಿಕ ಜೀವನವೇ ಗೃಹಸ್ಥಾಶ್ರಮವು. ಈ ಆಶ್ರಮಕ್ಕೆ ಧನ್ಯ ಎಂದು ಹೇಳಿವೆ ಶಾಸ್ತ್ರಗಳು. 'ಧನ್ಯ' ಎಂದರೆ ಸಂಪದ, ಭಾಗ್ಯ ಅಥವಾ ಪುಣ್ಯ ಎಂದರ್ಥ. ನಿಜಗುಣ ಶಿವಯೋಗಿಗಳೂ ಸಹ. "ಲೌಕಿಕ-ಅಲೌಕಿಕಗಳೆರಡನು ಸಮನಾಗಿ ನಡೆಸಿಕೊಂಡು ಹೋಗುವವನೆ ಜಾಣ" ಎಂದು ಹೇಳಿರುವರು.

ವಿಚಿತ್ರವಿದು! ಹಿಂದಿನ ಅಂಕಣದಲ್ಲಿ ವೈರಾಗ್ಯದ ಬಗ್ಗೆ ಪ್ರತಿಪಾದನೆ. ಈ ಅಂಕಣದಲ್ಲಿ ಗೃಹಸ್ಥಾಶ್ರಮದ ವರ್ಣನೆ. ಇದು ದ್ವಂದ್ವವೆನಿಸುವುದಿಲ್ಲವೆ? ನೋಡಿದರೆ, ಕೇಳಿದರೆ ದ್ವಂದ್ವವೇ! ಆದರೆ ಇಲ್ಲಿಯೇ ಸತ್ಯ ಅಡಗಿರುವುದು. ಯಾಕೆಂದರೆ ಸತ್ಯದ ಶಿಖರಕ್ಕೆ ಒಮ್ಮೊಂದೊಮ್ಮೆಯೇ ಹಾರಿಬಿಡಲಾಗುವುದಿಲ್ಲ. ಒಂದೊಂದೆ ಮೆಟ್ಟಿಲು ಹತ್ತಿ ಮುಟ್ಟಬೇಕು. ಹಾಗೆ ಗುರಿ ತಲುಪಲು ಈ ಗೃಹಸ್ಥಾಶ್ರಮವೆಂಬ ಮೆಟ್ಟಿಲು ನಮಗೆ ಅನಿವಾರ್ಯವೇ ಆಗಿದೆ.

ಈ ಪ್ರಪಂಚದಲ್ಲಿ ವಿರಹವೇದನೆಗೆ ಸರಿಸಮಾನವಾದ ದು:ಖ ಮತ್ತೊಂದಿಲ್ಲ. ಯಾಕೆಂದರೆ ಅರಿಷಡ್ವರ್ಗಗಳಲ್ಲಿ ಕಾಮವೇ ಪ್ರಧಾನವಾದದ್ದು. ಅದನ್ನು ಗೆಲ್ಲುವುದು ಕಷ್ಟಸಾಧ್ಯ. ಗೆದ್ದವರಿದ್ದರೆ ಅವರು ವಿರಳರು. ವ್ಯಾಸಮಹರ್ಷಿಗಳು ಆಶ್ರಮದಲ್ಲೊಮ್ಮೆ ತಮ್ಮ ಶಿಷ್ಯರಿಗೆ ಇಂದ್ರಿಯಗಳ ದೌರ್ಬಲ್ಯದ ಬಗ್ಗೆ ಬೋಧನೆ ಮಾಡುತ್ತಿದ್ದರು. ಆಗ "ಬಲವಾನಿಂದ್ರಿಯ ಗ್ರಾಮೋ ವಿದ್ವಾಂಸಮಪಿಕರ್ಷತಿ" ಎಂದು ಬೋಧಿಸಿದರು. ಅಂದರೆ ಇಂದ್ರಿಯಗಳ ಸಂಘಾತವು ಅತ್ಯಂತ ಪ್ರಬಲವಾದದ್ದು. ಒಮ್ಮೊಮ್ಮೆ ಆ ಇಂದ್ರಿಯಗಳು ವಿವೇಕಿಗಳನ್ನೂ ಸಹ ದಾರಿ ತಪ್ಪಿಸುವುದುಂಟು ಎಂತೆಂದು. ಇದನ್ನು ಕೇಳಿದ ಎಲ್ಲಾ ಶಿಷ್ಯರು ಸುಮ್ಮನಿದ್ದರು. ಆದರೆ ಜ್ಞಾನಿಯಾದ ಜೈಮಿನಿ ಮಾತ್ರ ಗುರುಗಳೇ "ವಿದ್ವಾಂಸಮಪಿಕರ್ಷತಿ" ಎನ್ನುವುದರ ಬದಲಾಗಿ ವಿದ್ವಾಸಂ ನಾಪಕರ್ಷತಿ ಎಂದು ಹೇಳುವುದು ಹೆಚ್ಚು ಸೂಕ್ತವೆಂತೆಂದ. ಅಂದರೆ ಇಂದ್ರಿಯಗಳು ಅವಿವೇಕಿಗಳನ್ನು ದಾರಿ ತಪ್ಪಿಸಬಹುದೇ ವಿನ: ವಿವೇಕಿಗಳನ್ನೆಂದಿಗೂ ದಾರಿ ತಪ್ಪಿಸಲು ಸಾಧ್ಯವಿಲ್ಲ ಎಂದು ವಾದಿಸಿದ್ದ. ಅಂದು ಗುರುಗಳು ಆ ಬಗ್ಗೆ ಅದೆಷ್ಟೇ ವಿವರಿಸಿದರೂ ಜೈಮಿನಿ ಒಪ್ಪಿಕೊಳ್ಳಲಿಲ್ಲ. ಆದರೆ ವಿಷಯ ವಿವಾದದಲ್ಲಿಯೇ ಉಳಿದುಕೊಂಡಿತು.

ದಿನಗಳೆದವು. ವ್ಯಾಸರು ತಮ್ಮ ಬೋಧನೆಯ ಅನುಭವ ಜೈಮಿನಿಗೆ ಮಾಡಿ ತೋರಿಸಬೇಕೆಂದು ಮನಸ್ಸು ಮಾಡಿದರು. ಜೈಮಿನಿ ಪ್ರತಿದಿನ ನಸುಕಿನಲ್ಲಿ ನದಿಸ್ನಾನಕ್ಕೆ ಹೋಗುತ್ತಿದ್ದ. ಹೀಗೊಂದು ದಿನ ನಸುಕಿನಲ್ಲಿ ನದಿಸ್ನಾನಕ್ಕೆ ಹೋಗಿದ್ದಾಗ ಒಂದು ವಿಚಿತ್ರ ದರ್ಶನವಾಯಿತು. ನದಿ ದಂಡೆಯ ಮೇಲೆ ಯೌವನಭರಿತಳೂ, ತ್ರಿಲೋಕ ಸುಂದರಿಯೂ ಆದಂತಹ ಓರ್ವ ಕನ್ಯೆ ಕುಳಿತಿದ್ದಳು. ಜೈಮಿನಿಯ ಚಿತ್ತ ಅವಳತ್ತ ಹರಿಯಿತು. ಅವಳ ಆಕರ್ಷಕ ರೂಪಲಾವಣ್ಯ ಚಿತ್ತದ ಪರದೆಯ ಮೇಲೆ ನಾಟ್ಯವಾಡಿತು. ಸ್ನಾನಮಾಡುತ್ತಾ ಅವಳ ಬಗ್ಗೆಯೇ ಚಿಂತಿಸತೊಡಗಿದ. ಆಗ ಅವಳೂ ಸಹ ಸ್ನಾನಕ್ಕೆಂದು ನದಿಯೊಳಗಿಳಿದಳು. ಅವಳು ಉಟ್ಟಂತಹ ತೆಳುವಾದ

ಬಟ್ಟೆಗಳು ಒದ್ದೆಯಾದ್ದರಿಂದಲೂ ಬೆಳದಿಂಗಳ ಬೆಳಕು ಅವಳ ಮೇಲೆ ಚೆಲ್ಲಿದ್ದರಿಂದಲೂ ಅವಳ ಮೈ ಮತ್ತು ರೂಪ ಮತ್ತಷ್ಟು ಆಕರ್ಷಿಸಿತು. ತನಗರಿವಿಲ್ಲದೆಯೇ ಕಾಮದೇವ ಅವನೊಳಗೆ ಪ್ರವೇಶಿಸಿಬಿಟ್ಟ. ಅವನ ಮನವನ್ನು ಮಥನಗೊಳಿಸಿದ ಮನ್ಮಥ. ಅವಳಲ್ಲಿ ಮೋಹಿತನಾದ ಜೈಮಿನಿ ಆಶ್ರಮವನ್ನೇ ಮರೆತುಬಿಟ್ಟ. "ಕಾಮಾತುರಾಣಾಂ ನ ಭಯಂ ನ ಲಜ್ಜಂ" ಎಂಬಂತೆ ಕಾಮಾಂಧನಾಗಿ ನಾಚಿಕೆ ಭಯಗಳೆರಡನ್ನೂ ಬಿಟ್ಟು, ಅವಳ ಹತ್ತಿರ ಹೋಗಿ "ನೀನಾರು? ನೀನೊಬ್ಬಳೇ ಈ ಹೊತ್ತಿನಲ್ಲಿ ಇಲ್ಲಿರುವುದಕ್ಕೆ ಕಾರಣವೇನು?" ಹೀಗೆ ಹತ್ತು ಹಲವು ಪ್ರಶ್ನೆ ಮಾಡಿದ.

"ನಾನು ಅನಾಥ ಕನ್ನೆ. ನನಗೆ ನನ್ನವರೆನ್ನುವವರು ಯಾರೂ ಇಲ್ಲ. ಅದಕ್ಕೆ ನಾನೊಬ್ಬಳೆ ಹೀಗೆ ಅಲೆದಾಡುತ್ತಿರುವೆ. ನನಗೊಬ್ಬ ಉತ್ತಮ ಪುರುಷನು ಸಿಕ್ಕರೆ ಅವನನ್ನು ವರಿಸಿ ಸುಖಜೀವನ ನಡೆಸಬೇಕೆಂದಿರುವೆ"

"ನಿನಗೆ ಅಭ್ಯಂತರವಿಲ್ಲದಿದ್ದರೆ ನಾ ನಿನ್ನನ್ನು ಮದುವೆಯಾಗುವೆ"

ನೀವು ಋಷಿಗಳಂತೆ ಕಾಣುತ್ತಿರುವಿರಿ. ಮೋಹವರ್ಜಿತರಾದ ನೀವು ನನ್ನನ್ನು ಪ್ರೀತಿಸುತ್ತಿರುವಿರಿ ಎನ್ನುವುದಕ್ಕೊಂದು ಸಾಕ್ಷಿ ಬೇಕು. ಅದಕ್ಕಾಗಿ ನೀವು ನನ್ನನ್ನು ಹೊತ್ತುಕೊಂಡು ನೂರು ಹೆಜ್ಜೆಗಳನ್ನು ನಡೆದು ತೋರಿಸಿ. ಆಗ ನಿಮ್ಮನ್ನು ಒಪ್ಪಿಕೊಳ್ಳುವೆ.

ಜೈಮಿನಿ ಕಾಮಾಂಧನಾಗಿ ವಿವೇಕ ಕಳೆದುಕೊಂಡ. ಅವಳು ಹೇಳಿದಂತೆ ಅವಳನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡ. ಅವಳ ಸ್ಪರ್ಶದಿಂದ ಮತ್ತಷ್ಟು ಪುಳಕಿತನಾದ. ಮುಂದಕ್ಕೆ ಹೆಜ್ಜೆ ಇಟ್ಟ. ಸುಮಾರು ನಲವತ್ತು ಐವತ್ತು ಹೆಜ್ಜೆ ನಡೆದಿರಬಹುದು. ಹೆಗಲ ಮೇಲೆ ಕುಳಿತಂತಹ ಹೆಣ್ಣಿನ ಭಾರ ವಿಪರೀತವಾಯಿತು. ಕೋಮಲವಾದ ತೊಡೆ ಪಾದಗಳಲ್ಲಿ ಬದಲಾವಣೆ ಕಂಡು ಬಂತು. ಸ್ತ್ರೀ ಶರೀರದಂತಿರಲಿಲ್ಲ. ವೃದ್ಧ ಪುರುಷರ ಶರೀರವೆಂಬಂತೆ ಭಾಸವಾಯಿತು. ಜೈಮಿನಿ ಗಾಬರಿಯಾದ. "ಇದೇನು ಹೆಣ್ಣೋ? ಭೂತಪ್ರೇತವ್ರೋ" ಎಂದುಕೊಳ್ಳುತ್ತ ಕೆಳಗಿಳಿಸಿ ನೋಡಿದ. ತಾಹೊತ್ತು ತಂದದ್ದು ಸುಂದರ ಕನ್ಯೆಯನ್ನಲ್ಲ, ವ್ಯಾಸಮಹರ್ಷಿಗಳನ್ನು. ಜೈಮಿನಿಗೆ ನಾಚಿಕೆಯಾಯಿತು. ನೆಲಕ್ಕೆ ಮುಖ ಮಾಡಿ ನಿಂತ. ಆಗ ವ್ಯಾಸರು 'ವಿದ್ವಾಂಸಮಪಿ ಕರ್ಷತಿ' ಸರಿಯೋ ಅಥವಾ 'ವಿದ್ವಾಂಸಂ ನಾಪಕರ್ಷತಿ' ಸರಿಯೋ? ಎಂದು ಕೇಳಿದರು. ಜೈಮಿನಿಯು 'ನನ್ನದು ತಪ್ಪು, ನಿಮ್ಮದೇ ಸರಿಯಾದದ್ದು. ನನ್ನನ್ನು ಕ್ಷಮಿಸಿರಿ' ಎಂದವರ ಪಾದಕ್ಕೆರಗಿದನು.

ಸಂಸಾರಿಗಳಾದರೂ ಸುಸಂಸ್ಕೃತರಾಗಿ ಉಳಿದುಕೊಂಡಿಲ್ಲ. ಕಾಮ ಅವರನ್ನು ವಿಕೃತಗೊಳಿಸಿರುವುದುಂಟು. ಇಂಥವರ ಬಗ್ಗೆ ಸರ್ವಜ್ಞ ಹೀಗೆ ಹೇಳಿದ್ದಾನೆ.

ಎಂಟೆರಡು ತಲೆಯುಳ್ಳ ಬಂಟ ರಾವಣನು ಕೆಟ್ಟ
ತುಂಟ ಕೀಚಕ ಕೆಯ್ದೆಗೆದು ಪರಸತಿಯ
ನಂಟು ಬೇಡೆಂದ ಸರ್ವಜ್ಞ

ರಾವಣ ಕೀಚಕ ಇತ್ಯಾದಿ ಕಾಮುಕರು ಕೆಟ್ಟಿದ್ದು ಪರಸ್ತ್ರೀಯರ ವ್ಯಾಮೋಹದಿಂದ.

ಶತಾನಂದರು ಜನಕ ಮಹಾರಾಜನಿಗೆ ಒಂದು ಕಥೆ ಹೇಳಿದ್ದರಂತೆ! ಓರ್ವ ಸಂಪ್ರದಾಯಸ್ಥ ಮನೆತನದ ಬ್ರಾಹ್ಮಣ. ಆತನ ಹೆಸರು ಮಾಧವ. ಅದೊಂದು ಮಧ್ಯಾಹ್ನ ಹೆಂಡತಿಯನ್ನು ಸರಸಕ್ಕೆ ಕರೆಯುತ್ತಾನೆ. ಅತ್ತೆ ಮಾವಂದಿರು ಮನೆಯಲ್ಲಿರುವ ಕಾರಣದಿಂದ ಹಾಗೂ ಬೇರಿನ್ನೇನೋ ಕಾರಣದಿಂದ ಅದಕ್ಕಾಸ್ಪದ ಕೊಡುವುದಿಲ್ಲಾಕೆ. ವಿರಹ ನೋವಿನಿಂದ ಹೊರನಡೆಯುತ್ತಾನೆ. ಆಗವನ ಕಣ್ಣಿಗೆ ಕುಂತ್ರಳೆ ಎಂಬ ವೇಶ್ಯೆ ಕಾಣಿಸಿಕೊಳ್ಳುವಳು. ಕೂಡಲೆ ಅವಳಲ್ಲಿಗೆ ಹೋಗಿ ತನ್ನ ಕಾಮತೃಷೆಯನ್ನು ತೀರಿಸಿಕೊಳ್ಳಲು ಪ್ರೇಮಭಿಕ್ಷೆ ಬೇಡುವನು. ಅವಳು "ಬೇಡ ನೀವು ಸಂಪ್ರದಾಯಸ್ಥ ಬ್ರಾಹ್ಮಣರು, ಇಲ್ಲಿಯವರೆಗೂ ನಿಮ್ಮ ಕುಲಸಂಪ್ರದಾಯದಂತೆ ನಡೆದುಕೊಂಡು ಬಂದಿರುವಿರಿ. ಅಲ್ಲದೆ ನಿಮಗೆ ಹೆಂಡತಿಯೂ ಸಹ ಇರುವಳು. ನೀವು ಅವಳಲ್ಲಿಯೇ ಈ ಸುಖ ಪಡೆಯಬಹುದು. ಅದು ಸದಾಚಾರ. ಇದು ವ್ಯಭಿಚಾರ. ಇದರಿಂದ ನೀವು ಅಧಃಪತನ ಹೊಂದುವಿರಿ" ಎಂದು ಹೇಳಿದಳು. ಆಕೆ ಎಷ್ಟು ಹೇಳಿದರೂ ಮಾಧವನ ಮನಸ್ಸು ಪರಿವರ್ತನೆಯಾಗಲಿಲ್ಲ. ಹಠಕ್ಕೆ ಬಿದ್ದ. ಆಗ ಕುಂತ್ರಳೆ ಹೇಗಾದರೂ ಅವನ ಮನಸ್ಸು ಪರಿವರ್ತನೆಯಾಗಬಹುದೆಂದು ಭಾವಿಸಿ "ನಿಮಗೆ ನನ್ನನ್ನು ಸೇರಲೇಬೇಕೆಂಬ ಹಠವಿದ್ದರೆ ಮೊದಲು ನಿಮ್ಮ ಕೊರಳಲ್ಲಿರುವ ಜನಿವಾರವನ್ನು ಕಿತ್ತುಹಾಕಿರಿ" ಎಂದು ಹೇಳಿದಳು. ತಟ್ಟನೆ ಕಿತ್ತೆಸೆದ ಜನಿವಾರ. ಮತ್ತೆ ಅವಳು "ನಿಮ್ಮ ಜುಟ್ಟನ್ನು ಕತ್ತರಿಸಿ ಹಾಕಿ" ಎಂದಳು. ಕೂಡಲೇ ಅದನ್ನೂ ಕತ್ತರಿಸಿ ಹಾಕಿದ. ಆಕೆಗೆ ಮತ್ತೇನೂ ತೋಚಲಿಲ್ಲ. ಆದರೂ ಯೋಚನೆ ಮಾಡಿ ಹೇಳಿದಳು. "ನೀವು ನನ್ನ ಮಂಚಕ್ಕೆ ಬರುವ ಪೂರ್ವ ಮದ್ಯಪಾನ ಮಾಡಬೇಕು. ಮಾಂಸ ತಿನ್ನಬೇಕು" ಎಂದಳು. ಅವೆರಡನ್ನು ತರಿಸಿ ಅವಳೆದುರಿಗೆ ಕುಡಿದು ತಿಂದುಬಿಟ್ಟ. ವಿಧಿಯಿಲ್ಲದೆ ಕುಂತ್ರಳೆ ಮಾಧವನಿಗೆ ತನ್ನ ಮೈಯನ್ನು ಅರ್ಪಿಸಿದಳು. ಆದರೆ ಮಾಧವನಿಗೆ ಅಂದಿನಿಂದ ಮಾಂಸ, ಮದ್ಯ ಹಾಗೂ ವೇಶ್ಯೆಯನ್ನು ಬಿಟ್ಟು ಹೊರಬರಲಾಗಲಿಲ್ಲ.

ಕಾಮ ಪ್ರಾಕೃತಿಕವಾದರೂ ಅದು ಅಷ್ಟೇ ವಿಕೃತವಾದದ್ದು. ಅದಕ್ಕೆ ಹೇಳಿರುವುದು ಈ ಪ್ರಪಂಚದಲ್ಲಿ ವಿರಹ ವೇದನೆಗೆ ಸರಿಸಮಾನವಾದ ದುಃಖ ಮತ್ತೊಂದಿಲ್ಲವೆಂತೆಂದು. ಕೆಲವರು ಹೊರಗೆ ಸನ್ಯಾಸಿಗಳಂತೆ ಕಂಡುಬರುತ್ತಾರೆ. ಆದರೆ ಅವರ ಮನಸ್ಸಿನ ಒಳಗೆ ವಿರಹದ ವೇದನೆ ಸಾಕಷ್ಟು ಕಾಡುತ್ತಿರುತ್ತದೆ.

ಶಿವ ಪಾರ್ವತಿ ಕೈಲಾಸದಲ್ಲಿ ಶಿವಗಣಗಳೊಂದಿಗೆ ಕುಳಿತಿದ್ದಾರೆ. ಪಾರ್ವತಿ ನಡಬಾಗಿರುವ ಭೃಂಗಿಯನ್ನು ನೋಡಿ, "ಪರಮಾತ್ಮ ಭೃಂಗಿ ಸಂಸಾರಿಯಲ್ಲ, ಸನ್ಯಾಸಿ. ಆದರೂ ಈತ ಸಂಸಾರಿಗಳಷ್ಟು ಗಟ್ಟಿ ಮುಟ್ಟಾಗಿಲ್ಲ. ಪೂರ್ಣ ನಡ ನೆಲಕ್ಕೆ ಬಾಗಿದೆ. ಅದಕ್ಕಾಗಿ ನೀನು ಎದೆಯ ಮೇಲೆ ಮೂರನೆಯ ಕಾಲೊಂದನ್ನು ಕೊಟ್ಟಿರುವೆ. ಇದಕ್ಕೆ ಕಾರಣವೇನು? ಎಂದು ಶಿವನನ್ನು ಕೇಳಿದಳು.

"ಅವನು ಇತ್ತ ಸಂಸಾರಿಯೂ ಆಗಿಲ್ಲ, ಅತ್ತ ಸನ್ಯಾಸಿಯೂ ಆಗಿಲ್ಲ. ಎರಡಕ್ಕೂ ತಪ್ಪಿದ ತ್ರಿಶಂಕು ಸ್ಥಿತಿ ಆತನದು. ಯಾಕೆಂದರೆ ಅವನು ಸಂಸಾರಿಗಳನ್ನು ನೋಡಿ ನೋಡಿ ನಾನೇಕೆ ಸಂಸಾರಿಯಾಗಲಿಲ್ಲ ಎಂಬ ಮಾನಸಿಕ ವೇದನೆ ಅವನನ್ನೂ ಕಾಡುತ್ತಿದೆ. ಆದ್ದರಿಂದ ಅವನು ಏಳಿಗೆಯಾಗುತ್ತಿಲ್ಲ. ಬಹಿರಂಗದಲ್ಲಿ ಮಾತ್ರ ಅವನು ಸನ್ಯಾಸಿ. ಆದರೆ ಸನ್ಯಾಸದ

ಸಾಧನೆ ಮನಸಾ ಸಿದ್ಧಿಯಾಗಿಲ್ಲ. ಆದ್ದರಿಂದ ಆತ ಎರಡಕ್ಕೂ ತಪ್ಪಿ ನೋವನುಭವಿಸುತ್ತಿದ್ದಾನೆ" ಎಂದು ಶಿವ ಶಕ್ತಿಗೆ ಹೇಳಿದ.

ನಮ್ಮ ದಾರ್ಶನಿಕರು ಪರಮಾತ್ಮನನ್ನು ಮೂರು ವಿಧವಾಗಿ ಹೇಳಿದ್ದಾರೆ. 'ಅನ್ನಬ್ರಹ್ಮ', 'ಜೀವಬ್ರಹ್ಮ' ಹಾಗೂ 'ಆನಂದ ಬ್ರಹ್ಮ' ಎಂತೆಂದು. ಮೊದಲನೆಯದಾಗಿ ಸ್ಥೂಲವಿಚಾರದಲ್ಲಿ ಅನ್ನವೇ ಬ್ರಹ್ಮವಾಗಿದೆ. ಜಗತ್ತಿನ ಸಮಸ್ತ ಜೀವರಾಶಿಗಳು ನಿಂತಿರುವುದು ಅನ್ನದಿಂದಲೆ. ಆದ್ದರಿಂದ ನಮ್ಮ ಹಿರಿಯರು ಈ ಹಿಂದೆ ನಾವು ಮಾಡುವ ಆಹಾರದ ತಟ್ಟೆಯ ಕೆಳಗೆ ಅಡ್ಡಣಿಕೆ(ಗೆ)ಯನ್ನು ಇಟ್ಟುಕೊಳ್ಳುತ್ತಿದ್ದರು. ಆ ಅಡ್ಡಣಿಕೆಗೆ ಮೂರು ಕಾಲು ಇರುತ್ತಿದ್ದವು. ಅಂದರೆ ಅದು ಶಿವಗಣನಾದ ಭೃಂಗಿಯ ಸ್ವರೂಪ. ಇಂದು ಅಸಂಪ್ರದಾಯ ನಾಶವಾಗುತ್ತಿದೆ. ಐಷರಾಮಿ ಬದುಕು. ಕುರ್ಚಿ ಮೇಜುಗಳ ಮೇಲಿನ ಊಟ. ಇಲ್ಲವಾದರೆ ಓಡಾಡಿಕೊಂಡು ಪಶುಗಳು ತಿಂದಂತೆ ತಿನ್ನುವ ಪಾಶ್ಚಿಮಾತ್ಯ ಪದ್ಧತಿಯು ಈಗಲೇ ನಾವು ಅಡ್ಡಣಿಕೆಗಳಿದ್ದವು ಎಂದು ಹೇಳಿಕೊಳ್ಳುವ ಕಾಲ ಬಂದಿದೆ. ಮುಂದೇನಾದೀತು ಗೊತ್ತಿಲ್ಲ. ಆದರೆ ವಿನಾಶದ ಅಂಚಿಗೆ ಹೋಗುತ್ತಿದ್ದೇವೆ. ಇದೇ ನಮ್ಮ ಸಾಧನೆ. ಇಷ್ಟು ಮಾತ್ರ ಸತ್ಯ

ಪ್ರಕೃತಿ ಜೀವಾತ್ಮರನ್ನು ಮೇಲೆರಲು ಬಿಡುವಂಥದಲ್ಲ. ಅಧೋಮುಖಕ್ಕೆ ತಳ್ಳುವುದು ಅದರ ಧರ್ಮ. ಆದ್ದರಿಂದ ಶರಣರು ಸಂತರು, ಮಹಾಂತರು ಪ್ರಕೃತಿಧರ್ಮವನ್ನು ವಿರೋಧಿಸದೆ ಅದರ ಧರ್ಮವನ್ನು ಪರಿಪಾಲಿಸುತ್ತ ಪ್ರಕೃತಿಯನ್ನು ಗೆದ್ದು ಪರಮಾತ್ಮನನ್ನು ಕಂಡರು. ಆದ್ದರಿಂದ ಅವರು ಸಂಸಾರಿಗಳಾಗಿಯೇ ಮುಕ್ತಿ, ಜೀವನ್ಮುಕ್ತಿಗಳ ಫಲ ಪಡೆದರು.

ಬಹುಶಃ ದಾಸೀಮಯ್ಯನವರಿಗೆ ಸಂಸಾರಿಗಳಾಗಬೇಕೆಂಬ ಆಸೆಯಿರಲಿಲ್ಲ. ಆದರೆ ಅದಕ್ಕೆ ಅವರ ತಂದೆತಾಯಿಗಳ ವಿರೋಧವಿತ್ತು. "ಗೃಹಂತು ಗೃಹಿಣೀಹೀನಂ ಕಾಂತಾರಾದತಿರಿಚ್ಯತೇ" ಅಂದರೆ! ಕಾಂತೆಯಿಲ್ಲದ ಮನೆ ಕಾಂತಾರ(ಅರಣ್ಯ)ಕ್ಕಿಂತಲೂ ಕೊನೆ. ಇನ್ನು ಸರಳವಾಗಿ ಹೇಳಬೇಕೆಂದರೆ ಹೆಂಗಸರಿಲ್ಲದ ಮನೆ ಘೋರ ಅರಣ್ಯಕ್ಕಿಂತಲೂ ಕೊನೆ ಎಂತೆಂಬುದು. ನಾಲ್ಕು ಗೋಡೆಗಳಿಂದ ಕೂಡಿದ್ದು ಗೃಹವಲ್ಲ. ಗೃಹಿಣಿ ಇರುವುದೇ ನಿಜವಾದ ಗೃಹ. ಮನೆಗೆ ಮನೆಯ ಸ್ವರೂಪ ಕೊಡುವವಳೇ ನಿಜವಾದ ಹೆಣ್ಣು. ಬೇಂದ್ರೆಯವರು ಮನೆಯೊಡತಿಯ ಬಗ್ಗೆ ಹೀಗೆ ವರ್ಣಿಸಿದ್ದಾರೆ.

ಮನೆಯ ಹೊಸ್ತಿಲಕೆ ಶುಭವ ಬರೆಯುವಾಕೆ
ಮಂಗಳ ಬಾರೆಂದು ಕರೆಯುವಾಕೆ
ಬಾಳ ಸುಳಿಯಲಿ ಬೆಳಕು ತೋರುವಾಕೆ
ದಿನದಿನವೂ ನವಜಯವ ಕೋರುವಾಕೆ

ಮನೆ ಉಳಿಯಲು, ಬೆಳೆಯಲು, ಬೆಳಗಲು ಹೆಣ್ಣೇ ಕಾರಣ ಎಂಬುದು ಅವರ ಅಭಿಪ್ರಾಯ.

ಈ ಕಾರಣ ದಾಸೀಮಯ್ಯನವರ ಮನೆಯಲ್ಲಿ ಹಿರಿಯರು ಮದುವೆಯಾಗಲು ಒತ್ತಾಯಿಸಿದರು. ಆದರೂ ಮನೆ ಹಿರಿಯರ ಒತ್ತಾಯಕ್ಕೆ ಒಪ್ಪಿಗೆ ಕೊಟ್ಟು ಕನ್ಯೆ ನೋಡಲು

ಹೊರಟರು. ಆದರೆ ಮೊದಲು ಅವರೊಂದು ಷರತ್ತು ಹಾಕಿದ್ದರು. ಅದು ಹೀಗಿತ್ತು! ಅವರು ಹೆಣ್ಣು ನೋಡಲು ಹೊರಟಾಗ ಅರ್ಧ ಪಾವು ಅಕ್ಕಿಗೆ ಒಂದು ಸೇರು ಮಣ್ಣು ಬೆರೆಸಿದರು. ಗಂಟು ಕಟ್ಟಿಕೊಂಡು ಆ ಗಂಟನ್ನು ಎರಡು ಕಬ್ಬಿಗೆ ಕಟ್ಟಿ ಹೆಗಲ ಮೇಲಿಟ್ಟುಕೊಂಡು ಹೆಣ್ಣು ತಾವು ನೋಡಲು ಹೊರಟರು. ಯಾವ ಹೆಣ್ಣು ತಾನು ಕೊಂಡೊಯ್ದ ಅಕ್ಕಿಯನ್ನು ಹಸನ ಮಾಡಿ ಆ ಅಕ್ಕಿಯನ್ನು ಕಟ್ಟಿಗೆ ಇಡದೆ ನೀರೂ ಹಾಕದೆ ಅನ್ನ ಮಾಡಿ ಕೊಡುವಳೋ ಅವಳನ್ನು ಮದುವೆಯಾಗುವುದಾಗಿ ತಿಳಿಸಿದ್ದ. ಬಹಳಷ್ಟು ಹೆಣ್ಣುಗಳನ್ನು ನೋಡಿದ. ಯಾರೊಬ್ಬರೂ ಆತನ ಷರತ್ತನ್ನು ಒಪ್ಪಿಕೊಳ್ಳಲಿಲ್ಲ. ಮೇಲಾಗಿ ಆತನೊಬ್ಬ ಹುಚ್ಚ ಎಂದು ಮಾತಾಡಿಕೊಂಡರು.

ಮುಂದೆ ಗಬ್ಬೂರು ಎಂಬಲ್ಲಿಗೆ ಬಂದರು. ಅಲ್ಲಿ ಹೆಣ್ಣನ್ನು ನೋಡಿದ್ದಾಯಿತು. ಹಿಂದೆ ಹೋದವ ದಾಸೀಮಯ್ಯನ ಷರತ್ತನ್ನು ಹುಡುಗಿಯ ತಂದೆಗೆ ತಿಳಿಸಿದ. ಕನ್ಯೆಯ ತಂದೆ ಹೇಳಿದ, "ಅದು ಆಗದ ಮಾತು. ಇವ ಮದುವೆಯಾಗುವವನಲ್ಲ" ಎಂದಾಗ! ತಂದೆಯನ್ನು ಹುಡುಗಿ ಒಳಗೆ ಕರೆದು, "ಅಪ್ಪಾ ನೀವು ಚಿಂತಿಸಬೇಡಿ. ನಾನು ಅವರು ತಂದಿರುವ ಅಕ್ಕಿಯನ್ನು ಕಟ್ಟಿಗೆ ಇಡದೆ ನೀರನ್ನೂ ಹಾಕದೆ ಅಡುಗೆ ಮಾಡಿ ಕೊಡುತ್ತೇನೆ. ನೀವು ಹೋಗಿ ಒಬ್ಬ ಜಂಗಮರನ್ನು ಕರೆತಂದು ಪಾದೋದಕ ಮಾಡಿಕೊಳ್ಳಿ. ಹಾಗೆ ಆ ಕಬ್ಬನ್ನು ಗಾಣದಲ್ಲಿ ತಿರುವಿ ಸಿಪ್ಪೆ ತೆಗೆದು ಕೊಡಿರಿ" ಎಂದು ಹೇಳಿದಳು. ತಂದೆ, ಮಗಳು ಸುಗ್ಗಾದೇವಿ ಹೇಳಿದಂತೆಯೇ ಮಾಡಿದ. ದಾಸೀಮಯ್ಯನಿಗೆ ಗೊತ್ತಾಗಿಹೋಯಿತು. "ಇವಳು ಸಾಮಾನ್ಯಳಲ್ಲ. ನಾ ಬಿಟ್ಟೆನೆಂದರೆ ಇವಳು ಬಿಡುವವಳಲ್ಲ" ಎಂದುಕೊಂಡ ಮನಸ್ಸಿನಲ್ಲಿ.

ನೀರು ಹಾಕದೆ ಕಟ್ಟಿಗೆ ಇಡದೆ ಎಂದಿದ್ದ ದಾಸೀಮಯ್ಯ. ಸುಗ್ಗಾದೇವಿಯು ಅಕ್ಕಿಗೆ ನೀರು ಹಾಕಲಿಲ್ಲ. ಬದಲಾಗಿ ಜಂಗಮರ ಪಾದೋದಕ ಹಾಕಿದಳು. ಒಲೆಯಲ್ಲಿ ಕಟ್ಟಿಗೆ ಇಟ್ಟು ಬೆಂಕಿ ಹಚ್ಚಿರಲಿಲ್ಲ. ಬದಲಾಗಿ ಧಾಸೀಮಯ್ಯ ತಂದಂತಹ ಕಬ್ಬಿನ ಸಿಪ್ಪೆಗೆ ಬೆಂಕಿ ಹಚ್ಚಿ ಅಡುಗೆ ಮಾಡಿ ನೀಡಿದ್ದಳು.

ಬೆಚ್ಚನೆಯ ಮನೆಯಾಗಿ, ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನರಿವ ಸತಿಯಾಗಿ ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ ॥

ಸರ್ವಜ್ಞನು ಹೇಳಿರುವಂತೆ ಸತಿಪತಿಗಳಿಬ್ಬರೂ ಹೊಂದಾಣಿಕೆಯ ಜೀವನ ನಡೆಸಿರಬೇಕು. ಅದು ಸತ್ಯವೂ ಸಹ. ಯಾಕೆಂದರೆ ಇದಕ್ಕೆ ಸಾಕ್ಷಿಯೆಂಬಂತೆ ದಾಸೀಮಯ್ಯನವರೇ ತಮ್ಮೊಂದು ವಚನದಲ್ಲಿ ಹೀಗೆ ಹೇಳಿಕೊಂಡಿರುವರು. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವರ ಭಕ್ತಿ ಅಮೃತದೊಳು ವಿಷಕಾಣಾ ರಾಮನಾಥ" ಎಂತೆಂದು.

ವಿವಾಹದ ಸಂದರ್ಭದಲ್ಲಿ ಕನ್ಯೆಯನ್ನು ಧಾರೆಯೆರೆದು ಕೊಟ್ಟ ಕನ್ಯೆಯ ತಂದೆ, ವರನಿಗೆ ಹೀಗೆ ಹೇಳುತ್ತಾನೆ! "ಧರ್ಮೇಚ, ಅರ್ಥೇಚ, ಕಾಮೇಚ, ನಾತಿ ಚರಿತವ್ಯಾತ್ವಯೇಯಂ" ಎಂತೆಂದು. ಅಂದರೆ ನಾನು ನಿನಗೆ ನನ್ನ ಮಗಳನ್ನು ಧಾರೆಯರೆದು ಕೊಡುತ್ತಿದ್ದೇನೆ. ಮುಂದೆ ಧರ್ಮದ ಯಾವೊಂದು ವಿಷಯಗಳಲ್ಲೂ, ಹಣ ಮತ್ತು ಆಸ್ತಿಗಳ ಯಾವೊಂದು ವಿಷಯಗಳಲ್ಲೂ,

ಅಲ್ಲದೆ ಕಾಮದ ವಿಷಯದಲ್ಲೂ ನೀನವಳಿಗೆ ಮೋಸ ಮಾಡಿ ನಡೆದುಕೊಳ್ಳಬೇಡ. ಹೀಗೆಂದು ಗುರುಹಿರಿಯರ ಹಾಗೂ ದೈವದ ಸಮ್ಮುಖದಲ್ಲಿ ಪ್ರತಿಜ್ಞೆ ಮಾಡು ಎಂದು ಕನ್ಯೆಯ ತಂದೆ ವರನನ್ನು ಕೇಳುತ್ತಾನೆ. ಅದಕ್ಕುತ್ತರವಾಗಿ ವರನು "ನಾತಿ ಚರಾಮಿ" ಎಂದು ಪ್ರತಿಜ್ಞೆ ಮಾಡುವನು. ನ+ಅತಿ+ಚರಾಮಿ= ನಾತಿಚರಾಮಿ. ಅಂದರೆ ನೀನು ಹೇಳಿರುವ ಯಾವೊಂದು ವಿಷಯಗಳಲ್ಲಿಯೂ ಅತಿಕ್ರಮಿಸಿ ನಡೆಯುವುದಿಲ್ಲ ಎಂದು. ಹೀಗೆ ದಂಪತಿಗಳು ನಡೆದುಕೊಂಡರೆ ಮೋಕ್ಷ ದೊರಕುವುದರಲ್ಲಿ ಸಂದೇಹವಿಲ್ಲ. ಯಕ್ಷ ಧರ್ಮರಾಜನನ್ನೊಮ್ಮೆ ಹೀಗೆ ಕೇಳುತ್ತಾನೆ.

**ಧರ್ಮಾಶ್ಚ ಅರ್ಥಶ್ಚ ಕಾಮಶ್ಚ ಪರಸ್ಪರ ವಿರೋಧನ: ।**
**ಏಷಾಂ ನಿತ್ಯ ವಿರುದ್ಧಾನಾಂ ಕಥಮೇಕತ್ರ ಸಂಗಮ: ॥**

ಧರ್ಮ, ಅರ್ಥ, ಕಾಮ ಇವು ಪರಸ್ಪರ ವಿರೋಧವಾಗಿರುವವು. ಹೀಗಿದ್ದೂ ಇವುಗಳನ್ನು ಒಂದು ಕಡೆ ಸೇರಿಸುವ ಬಗೆ ಹೇಗೆ? ಎಂಬ ಪ್ರಶ್ನೆಗೆ ಧರ್ಮರಾಜ ಉತ್ತರಿಸುತ್ತಾನೆ.

**ಯಥಾ ಧರ್ಮಾಶ್ಚ ಭಾರ್ಯಾಚ ಪರಸ್ಪರ ವಶಾನುಗೌ: ।**
**ತಥಾ ಧರ್ಮಾರ್ಥ ಕಾಮಾನಾಂ ತ್ರಯಣಾಮ್ ಅಪಿಸಂಗಮ: ॥**

ಯಾವ ಧರ್ಮವನ್ನು ಗಂಡನೊಂದಿಗೆ ಹೆಂಡತಿಯೂ ಸಹ ಪರಿಪಾಲಿಸುತ್ತಿರಬೇಕು. ಹೀಗೆ ಧರ್ಮವನ್ನು ಇಬ್ಬರೂ ಪರಿಪಾಲಿಸುತ್ತಿದ್ದರೆ ಮಾತ್ರ ಧರ್ಮಾರ್ಥಕಾಮಗಳು ಒಂದಾಗಿ ತ್ರಿವೇಣಿ ಸಂಗಮದಂತೆ ಹರಿಯುವವು.

ದಾಸಿಮಯ್ಯನೂ ಸಹ ಇದನ್ನೇ ಹೇಳಿರುವುದು. "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂದು.

ದಾಸಿಮಯ್ಯ ಸಂಸಾರದಿಂದ ಸದ್ಗತಿ ಹೊಂದಿದ. ಅದಕ್ಕೆ ಸಾಕ್ಷಿ ಎಂಬಂತೆ ಆತನ ಜೀವನದಲ್ಲಿ ನಡೆದ ಘಟನೆಯೊಂದು ಹೀಗಿದೆ. ಒಂದು ಬೇಸಿಗೆಯ ಮಟಮಟ ಮಧ್ಯಾಹ್ನ. ಬಹಳಷ್ಟು ಸೆಕೆಯಿತ್ತು. ಆದ್ದರಿಂದ ದಾಸಿಮಯ್ಯ ಅಂಗಿ ತೊಡದೆ ಬರಿಯ ಮೈಯ ಮೇಲೆ ಒಂದು ಟವಲ್ ಹಾಕಿಕೊಂಡು ಮಗ್ಗ ನೇಯುತ್ತಿದ್ದ. ಆಗ ಸಂಸಾರದಲ್ಲಿ ಬೇಸತ್ತಿದ್ದ ಇಬ್ಬರು ದಾಸಿಮಯ್ಯನವರಲ್ಲಿಗೆ ಬಂದು "ಶರಣರೇ ಸಂಸಾರ ಸುಖವಾದದ್ದೋ? ಸನ್ಯಾಸ ಸುಖವಾದದ್ದೋ? ಎಂಬ ಪ್ರಶ್ನೆ ಮಾಡಿದರು. ಅವರ ಮಾತು ಕೇಳಿಸಿಕೊಂಡ ಶರಣರು ಅವರಿಗೆ ಏನನ್ನೂ ಉತ್ತರಿಸದೆ, ತಮ್ಮ ಹೆಂಡತಿಗೆ ಕೂಗಿ "ಬಹಳ ಸೆಕೆಯಾಗುತ್ತದೆ ಮೈ ಒರೆಸಿಕೊಳ್ಳಲು ಒಂದು ವಸ್ತ್ರ ತೆಗೆದುಕೊಂಡು ಬಾ' ಎಂದರು. ಸುಗ್ಗಾದೇವಿ ತಂದುಕೊಟ್ಟು ಒಳ ಹೋದಳು. ಮತ್ತೆ ಕೂಗಿ ಹೇಳಿದರು, "ದಾರ ಪೋಣಿಸಲು ಬೆಳಕಿಲ್ಲ ದೀಪ ಹಚ್ಚಿಕೊಂಡು ಬಾ" ಎಂದರು. ಹಚ್ಚಿದ ದೀಪ ದಾಸಿಮಯ್ಯನ ಬಳಿ ತಂದು ಇಟ್ಟು ಒಳಹೋದಳು. ದಾಸಿಮಯ್ಯ ದೀಪವನ್ನೂ ಬಳಸಲಿಲ್ಲ, ಮೊದಲು ತಂದಿಟ್ಟಿದ್ದ ವಸ್ತ್ರವನ್ನೂ ಬಳಸಲಿಲ್ಲ. ಎರಡೂ ಇಟ್ಟಲ್ಲೇ ಇದ್ದವು. ದಾಸಿಮಯ್ಯ ಹೆಂಡತಿಗೆ ಕೂಗಿ, "ಮೂವರಿದ್ದೇವೆ, ಮೂರು ಬಟ್ಟಲು ಗಂಜಿ ತೆಗೆದುಕೊಂಡು ಬಾ" ಎಂದು ಹೇಳಿದರು. ಮೂರು ಬಟ್ಟಲು ಗಂಜಿಯನ್ನು ತಂದುಕೊಟ್ಟು ಒಳನಡೆದಳು. ಅವರಿಬ್ಬರಿಗೆ ದಾಸಿಮಯ್ಯ ಕುಡಿಯಲು ಹೇಳಿದರು. ಅವರಿಬ್ಬರು ಗಂಜಿ ಕುಡಿದು ಬಟ್ಟಲು

ಕೆಳಗಿಟ್ಟರು. ಕೂಡಲೆ ಹೆಂಡತಿಯನ್ನು ಕೂಗಿ ದಾಸಮಯ್ಯನವರು, "ಗಂಜಿ ಬಹಳ ಬಿಸಿಯಿದೆ, ಆರಿಸಿಕೊಳ್ಳಲು ಬೀಸಣಿಕೆ ತೆಗೆದುಕೊಂಡು ಬಾ" ಎಂದು ಹೇಳಿದರು. ಬೀಸಣಿಕೆಯನ್ನೂ ತಂದುಕೊಟ್ಟಳು. ನಂತರ ಬೀಸಣಿಕೆಯಿಂದ ಬೀಸಿಕೊಳ್ಳದೆ ತಣ್ಣಗಿದ್ದ ಗಂಜಿಯನ್ನು ಕುಡಿದು ಬಟ್ಟಲು ಕೆಳಗಿಟ್ಟರು.

ಶರಣರ ಈ ವಿಚಿತ್ರ ವರ್ತನೆಯನ್ನು ಇವರಿಬ್ಬರೂ ಗಮನಿಸಿ, "ಶರಣರೇ ಮೈಮೇಲೆ ವಸ್ತ್ರವಿದ್ದೂ, ವಸ್ತ್ರ ತರಿಸಿಕೊಂಡಿರಿ. ಮಧ್ಯಾಹ್ನದ ಬೆಳಕಿದ್ದೂ ದೀಪ ತರಿಸಿಕೊಂಡಿರಿ. ಗಂಜಿ ತಣ್ಣಗಿದ್ದರೂ ಆರಿಸಲೆಂದು ಬೀಸಣಿಕೆ ತರಿಸಿಕೊಂಡಿರಿ. ಇದರ ಅರ್ಥವೇನು?" ಎಂದು ಪ್ರಶ್ನಿಸಿದರು.

"ಇದಕ್ಕೆ ಅರ್ಥ ಕಲ್ಪಿಸಬೇಕಾಗಿಲ್ಲ. ಇದೇ ನೀವು ಬಂದು ಕೇಳಿದ ಪ್ರಶ್ನೆಗೆ ನಾ ಕೊಟ್ಟಿರುವ ಉತ್ತರ. ಅರ್ಥ ಇಷ್ಟೇ. ನಮ್ಮಿಬ್ಬರಂತೆ ಸತಿಪತಿಗಳಲ್ಲಿ ಹೊಂದಾಣಿಕೆ ಇದ್ದರೆ ಸಂಸಾರದಿಂದಲೇ ಸುಖ ಮತ್ತು ಸದ್ಗತಿವುಂಟು. ಅದಿಲ್ಲವೆಂದರೆ ಸನ್ಯಾಸವೇ ಶ್ರೇಷ್ಟ ಮಾರ್ಗ" ಎಂದು ಹೇಳಿ ಮೌನವಿಸಿದರು.

**ಸಂತುಷ್ಟೋ ಭಾರ್ಯಾಯ ಭರ್ತಾ ಭರ್ತಾ ಭಾರ್ಯಾ ತಥೈವ ಚ ।**
**ಯಸ್ಮಿನ್ನೇವ ಕುಲೇನಿತ್ಯಂ ಕಲ್ಯಾಣಂ ತತ್ರ ವೈಭವಂ ॥ (ಮನುಸ್ಮೃತಿ)**

ಯಾವ ಮನೆಯಲ್ಲಿ ಗಂಡನಿಂದ ಹೆಂಡತಿಯೂ, ಹೆಂಡತಿಯಿಂದ ಗಂಡನೂ ಪರಸ್ಪರ ತೃಪ್ತರಾಗಿ ಸಂತೋಷದಿಂದ ಇರುತ್ತಾರೋ, ಆ ಮನೆಯಲ್ಲಿ ನಿತ್ಯ ಮಂಗಳ ಪರಂಪರೆ ಉಂಟಾಗುತ್ತದೆ ಎಂಬ ಅರ್ಥವಿದೆ. ಮತ್ತೆ ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ. "ಧರ್ಮ ಅವಿರುದ್ಧ: ಕಾಮೋಸ್ಮಿ ಭೂತೇಷು ಭರತ ವರ್ಷಭ" ಎಂತೆಂದು. ಅಂದರೆ ಕಾಮಸುಖವನ್ನು ಅನುಭವಿಸಿರಿ. ಆದರೆ ಧರ್ಮ ಮತ್ತು ನೀತಿಗೆ ವಿರುದ್ಧವಾಗಿ ಅನುಭವಿಸಬೇಡಿರಿ. ಹಾಗೇನಾದರೂ ವಿರುದ್ಧವಾಗಿ ನಡೆದುಕೊಂಡರೆ ನರಕ ಶತಸಿದ್ಧ ಎಂದು ಎಚ್ಚರಿಸಿದ್ದಾನೆ. ಸ್ಮತಿಯೊಂದರಲ್ಲಿ ಹೀಗಿದೆ,

**ಧರ್ಮಂ ಪೂರ್ವೇ ಧನಂ ಮಧ್ಯೆ ಜಘನ್ನೇ ಕಾಮಮಾಚರೇತ್ ।**
**ಅಹನ್ಯನುಚರೇದೇವಂ ಏಷ ಶಾಸ್ತ್ರ ಕೃತೋ ವಿಧಿ: ॥**

ಪ್ರತಿನಿತ್ಯ ಮೊದಲನೆಯದಾಗಿ ಧರ್ಮವನ್ನು ಪರಿಪಾಲಿಸು. ಎರಡನೆಯದಾಗಿ ಧಾರ್ಮಿಕನಾಗಿ (ಅರ್ಥ) ಸಂಪಾದನೆ ಮಾಡು. ಮೂರನೆಯದಾಗಿ ಕಾಮವನ್ನು (ಆಸೆ) ಸಾಧಿಸು. ಇದು ಶಾಸ್ತ್ರ ವಿಧಿ.

**ಧರ್ಮಾರ್ಥ ಕಾಮಾ: ಸಮಮೇವ ಸೇವ್ಯಾ: ಯೋಹ್ಯೇಕ ಭಕ್ತ: ಸ ನರೋ ಜಘನ್ಯಾ॥**

ಧರ್ಮ, ಅರ್ಥ, ಕಾಮ ಇವುಗಳನ್ನು ತಕ್ಕಡಿಯಲ್ಲಿ ಇಟ್ಟು ತೂಗಿ ಸಮಸಮವಾಗಿ ಹಿತಮಿತವಾಗಿ ಸೇವಿಸಬೇಕು. ಅಂದರೆ ಯಾವೊಂದಕ್ಕೂ ಜೋತು ಬೀಳಬಾರದು. ಹಾಗಿದ್ದರೆ ಮಾತ್ರ ಮೋಕ್ಷ ತಾನಾಗಿಯೇ ಲಭಿಸುವುದು. ಅಂದರೆ ಗೃಹಸ್ಥಾಶ್ರಮ ಮೋಕ್ಷಕ್ಕೆ ಮೊದಲಿನ ಮೆಟ್ಟಿಲು. ನಾವು ಅಲ್ಲಿಯೇ ನಿಲ್ಲಬಾರದು. ಅಲ್ಲಿಂದ ಮುಂದೆ ನಡೆಯಬೇಕು. ಆಗ "ಧನ್ಯೋ ಗೃಹಸ್ಥಾಶ್ರಮ" ಎಂದಿರುವುದಕ್ಕೂ ಸಾರ್ಥಕತೆ ಬರುವುದು.

# ಉಂಡೂ ಉಪವಾಸಿ

"ಓ ನನ್ನ ಚೇತನ! ಆಗು ನೀ ಅನಿಕೇತನ" ಎಂದಿರುವರು ಕುವೆಂಪು. ಹೌದು, ನಿಜವಾದ ಆತ್ಮಜ್ಞಾನನಿಗೆ ಶರೀರ, ಮನೆ, ಕುಟುಂಬ ಇವ್ಯಾವೂ ಆತನ ಬುದ್ಧಿ ಭಾವಗಳಿಗೆ ಅಂಟಿಕೊಂಡಿರುವುದಿಲ್ಲ. ಆತ ಭಗವಂತನನ್ನೇ ತನ್ನವನನ್ನಾಗಿ ಮಾಡಿಕೊಂಡಿರುತ್ತಾನೆ. ಆದ್ದರಿಂದ ಆತ ವಿಶ್ವಕುಟುಂಬಿ. ಇದನ್ನೇ "ಉದಾರಚರಿತಾನಾಂ ತು ವಸುದೈವ ಕುಟುಂಬಕಂ" ಎಂದು ಹೇಳಿರುವುದು.

ಸಂಸಾರ ಪ್ರಕೃತಿಯ ಸಹಜ ಧರ್ಮ. ಆದ್ದರಿಂದ ನಾವು ಸಂಸಾರದಲ್ಲಿರುವುದು ತಪ್ಪಲ್ಲ. ಸಂಸಾರ ನಮ್ಮೊಳಗೆ ಬರುವುದು ದೊಡ್ಡತಪ್ಪು. ಅಂದರೆ ದೋಣಿ ಸಮುದ್ರದಲ್ಲಿ ಚಲಿಸುವುದು ತಪ್ಪಲ್ಲ. ಆದರೆ ಸಮುದ್ರದ ನೀರು ದೋಣಿಯೊಳಗೆ ಚಲಿಸುವುದು ದೊಡ್ಡ ತಪ್ಪು. ಆಗ ಸಾವು ನೋವು ದುಃಖಗಳು ಸಂಭವಿಸುವವು.

ನಿಜಗುಣ ಶಿವಯೋಗಿಗಳು ಮೊದಲು, ಮೈಸೂರು ಜಿಲ್ಲೆಯ, ಕೊಳ್ಳೆಗಾಲ ತಾಲೂಕಿನ, ಚಿಲಕನವಾಡಿಯ ಸುತ್ತಲಿನ ಪ್ರದೇಶಕ್ಕೆ ರಾಜರಾಗಿದ್ದರು. ಆಗವರ ಪ್ರಜಾಪ್ರಿಯರಷ್ಟೆ ಅಲ್ಲ, ಶಿವಭಕ್ತರು, ಗುರು ಲಿಂಗ ಜಂಗಮ ಪ್ರೇಮಿಗಳು ಹಾಗೂ ವೇದಾಗಮಶಾಸ್ತ್ರ ಪುರಾಣಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವರಾಗಿದ್ದರು. ಪ್ರತಿದಿನ ಬೆಳಿಗ್ಗೆ ಅವರದೊಂದು ಪದ್ಧತಿಯಿತ್ತು. ಗುರು ಪಾದಪೂಜೆ ಮಾಡಿ, ಪಾದೋದಕ ತೆಗೆದುಕೊಂಡು, ನಂತರ ಉಪಹಾರ ಸ್ವೀಕಾರ ಮಾಡುವುದು. ನಿಜಗುಣರು ಗುರುಗಳಿಗೆ ಆಗಾಗ ಹೇಳಿಕೊಳ್ಳುತ್ತಿದ್ದರು. "ಗುರುವರ್ಯಾ ಪುಣ್ಯಕ್ಷೇತ್ರಗಳಿಗೆ ಹೋಗಬೇಕೆಂಬ ಆಸೆಯಿದೆ. ಯಾವಾಗ ಹೋಗೋಣ?" ಎಂತೆಂದು. ಅದಕ್ಕೆ ಗುರುಗಳು "ಇಂದೇ ಹೋಗೋಣ ನಡಿಯಪ್ಪಾ" ಎಂದು ಹೇಳುತ್ತಿದ್ದರು. ಅದಕ್ಕೆ ನಿಜಗುಣರು ಪ್ರತಿದಿನವೂ "ಏನು ಮಾಡಲಿ ಗುರುಗಳೇ, ಮನಸ್ಸೇನೋ ಇದೆ, ಆದರೆ ಮಾರ್ಗವಿಲ್ಲ" ಎಂದು ಹೇಳುತ್ತಿದ್ದರು. ಇದು ಹೀಗೆ ನಡೆದಿತ್ತು. ಗುರುಗಳಿಗೆ ನಿಜಗುಣರ ಮಾತಿನ ಮರ್ಮವೂ ಅರ್ಥವಾಗಿತ್ತು.

ಒಂದು ದಿನ ಗುರುಗಳು ಅರಮನೆಗೆ ಸರಿಯಾದ ಸಮಯಕ್ಕೆ ಬರಲಿಲ್ಲ. ಪಾದಪೂಜೆಗೆ ವಿಳಂಬವಾದ ಕಾರಣ ಗುರುಗಳನ್ನು ಕರೆತರಲು ನಿಜಗುಣರು ಸೇವಕರನ್ನು ಕಳಿಸಿದರು. ಸೇವಕ ಬಂದು ಕರೆದಾಗ ಗುರುಗಳು, "ರಾಜನನ್ನೇ ಇಲ್ಲಿಗೆ ಕಳಿಸು" ಎಂದು ಹೇಳಿಕಳಿಸಿದರು. ಸೇವಕ ನಿಜಗುಣರಲ್ಲಿಗೆ ಬಂದು, "ಪ್ರಭು ತಾವೇ ಅಲ್ಲಿಗೆ ಹೋಗಬೇಕಂತೆ" ಎಂದು ಹೇಳಿ ಹಿಂದೆಸರಿದ. ಆಗ ನಿಜಗುಣರೇ ಗುರುಗಳಲ್ಲಿಗೆ ಬಂದು "ಗುರುವೇ ಪಾದಪೂಜೆಗೆ ಸಮಯವಾಗಿದೆ. ಅರಮನೆಗೆ ಬನ್ನಿ" ಎಂದು ಭಿನ್ನಹಗೈದರು.

ಆ ಸಂದರ್ಭದಲ್ಲಿ ಗುರುಗಳು ಮರವೊಂದನ್ನು ಬಿಗಿಯಾಗಿ ಅಪ್ಪಿಕೊಂಡಿದ್ದರು. ಆಗ ಮತ್ತಷ್ಟೂ ಬಿಗಿ ಹಿಡಿದುಕೊಂಡು "ಏನು ಮಾಡಲಪ್ಪಾ, ಬರಬೇಕೆಂದರೆ ಈ ಮರ ನನ್ನನ್ನು ಬಿಡುತ್ತಿಲ್ಲ" ಎಂದರು.

"ಬುದ್ಧಿ, ಮರ ನಿಮ್ಮನ್ನು ಹಿಡಿದುಕೊಂಡಿಲ್ಲ, ನೀವು ಮರವನ್ನು ಹಿಡಿದುಕೊಂಡಿರುವಿರಿ.

ಕೈ ಬಿಡುವುದಷ್ಟೇ ನಿಮ್ಮ ಕೆಲಸ" ಎಂದರು.

"ಹೇಗೆ ಬಿಡಲಪ್ಪ, ಬಿಡುವ ಮನಸ್ಸಿದೆ. ಆದರೆ ಮಾರ್ಗವಿಲ್ಲ. ಏಕೆಂದರೆ ನಿನ್ನನ್ನು ಸಂಸಾರ ಮತ್ತು ರಾಜ್ಯ ಹಿಡಿದುಕೊಂಡಿಲ್ಲ. ಆದರೂ ಅವು ನಿನ್ನನ್ನು ಹಿಡಿದುಕೊಂಡಿವೆ ಎಂಬಂತೆ ಹೇಗೆ ಭ್ರಮಿಸಿರುವೆಯೋ ಹಾಗೆ ಈ ಮರವೂ ಸಹ ನನ್ನನ್ನು ಹಿಡಿದುಕೊಂಡಿದೆ ಎನ್ನುವುದರಲ್ಲಿ ತಪ್ಪೇನಿಲ್ಲ" ಎಂದರು.

ಗುರುಗಳ ಆ ವರ್ತನೆಯಿಂದ ನಿಜಗುಣರಲ್ಲಿದ್ದ ಅಜ್ಞಾನ ನಾಶವಾಯಿತು. ಜ್ಞಾನ ಭಾಸ್ಕರ ಉದಯಿಸಿದ. ಕೂಡಲೆ ಅವರ ಪಾದಕ್ಕೆ ಬಿದ್ದು, ರಾಜ್ಯ ದೇಶ ಕೋಶಗಳೆಲ್ಲವನ್ನೂ ತೊರೆದು ಗುರುಗಳ ಜೊತೆಗೆ ತೀರ್ಥಯಾತ್ರೆಗೆ ನಡೆದರು.

ಜೀವಾತ್ಮರನ್ನು ಸಂಸಾರವೆಂಬ ಈ ನಂಟು ಬಿಡಿಸಿಕೊಳ್ಳಲಾರದಷ್ಟು ಗಂಟು ಹಾಕಿಕೊಂಡಿದೆ. ಬಹುಶಃ ಈ ಕಾರಣಕ್ಕಾಗಿಯೇ ಶರಣರು ಹೀಗೆ ಹೇಳಿರುವುದು.

**ಕಾಲಿಗೆ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು,**
**ತೇಲಲಲಿಯದು ಗುಂಡು, ಮುಳಗಲಿಯದು ಬೆಂಡು**
**ಇಂತಪ್ಪ ಸಂಸಾರ ಶರಧಿಯ ದಾಂಟಿಸಿ**
**ಕಾಲಾಂತಕನೆ ಕಾಯೋ ಕೂಡಲಸಂಗಮದೇವಾ ॥**

ಸಂಸಾರವೆಂಬ ಬಂಧನ ಗುಂಡು. ಗುರುದೀಕ್ಷೆಯೆಂಬುದು ಕೊರಳಲ್ಲಿ ಕಟ್ಟಿದ ಬೆಂಡು. ಇದು ಮುಳುಗಿಸದು. ಅದು ತೇಲಿಸದು. ಇಂತಹ ಈ ದುಃಖದ ಸಾಗರವನ್ನು ದಾಟಿಸುವ ಕೃಪೆ ತೋರು.

ಓರ್ವ ಮುದುಕಿ ಇದ್ದಳು. ಮಕ್ಕಳು ಮೊಮ್ಮಕ್ಕಳನ್ನೆಲ್ಲ ಕಂಡಿದ್ದಾಗಿದೆ. ಪತಿ ಇಹಲೋಕ ಸೇರಿ ಬಹಳ ದಿನಗಳಾಗಿವೆ. ಮುದುಕಿಯ ವೈರಾಗ್ಯದ ನಟನೆಗೇನೂ ಕೊರತೆಯಿರಲಿಲ್ಲ. ಸೊಸೆ, ಮಗ, ಮೊಮ್ಮಕ್ಕಳಿಗೆಲ್ಲ ಕಾಶಿಯಾತ್ರೆಗೆ ಹೋಗುವುದಾಗಿ ತಿಳಿಸಿದ್ದಾಳೆ. ಯಾತ್ರೆಗೆ ಹೋಗುವ ದಿನ ಬಂದೇಬಿಟ್ಟಿತು. ಸಕಲ ಸಿದ್ಧತೆ ಮಾಡಿಕೊಂಡಳು. ಸೊಸೆ ಅತ್ತೆಯನ್ನು ಕಳುಹಿಸಲು ಕಾಯುತ್ತಿದ್ದಳು. ಇನ್ನೇನು ಎಲ್ಲರಿಗೆ ಹೇಳಬೇಕಾದುದ್ದನ್ನೆಲ್ಲ ಕೈಯಲ್ಲಿ ಚೀಲ ಹಿಡಿದುಕೊಂಡು ಹೊರನಡೆದಳು. ಹೊಸಲಿನ ಹೊರಗೊಂದು ಕಾಲಿದೆ, ಒಳಗೊಂದು ಕಾಲಿದೆ! ಸೊಸೆಗೆ ಕೂಗಿ ಹೇಳಿದಳು, "ಹೇ ರುಕ್ಕವ್ವ, ಆ ಹಿಂದಿನ ಗೋಡೆಯ ಬಳಿ ಇರುವ ಕಟ್ಟಿಗೆ ನಮ್ಮವು, ಇನ್ನೂ ಹಸಿ ಇವೆ. ಒಣಗಿದ ನಂತರ ಒಳಗೆ ತಂದಿಟ್ಟುಕೋ. ಹಾಗೇ ಯಾರಾದರೂ ಕೈಹಾಕ್ಯಾರು ನೋಡ್ತಾ ಇರು. ನಾ ಬರ್‍ಲಾ" ಎಂದೆನ್ನುತ್ತಾ, ಹೊಸಲಿನ ಒಳಗಿನ ಕಾಲು ಸ್ವಲ್ಪ ಕದಲಿಸಿ, ಮತ್ತೆ ಭದ್ರವಾಗಿ ಅಲ್ಲೇ ಇಟ್ಟು, "ಹೊರಗೆ ಇರುವ ಬಾವಿಗೆ ಹಾಕಿರುವ ಹಗ್ಗ ನಮ್ಮದೇ ಆಮೇಲೆ ಒಳಗಿಟ್ಟುಕೋ" ಎಂದು ಹೊಸಲು ದಾಟಿ ಒಂದೆರಡು ಹೆಜ್ಜೆ ಮುಂದೆ ಹೋಗಿ ಮತ್ತೆ ತಿರುಗಿ ಒಳಗೆ ಬಂದು "ಮೊನ್ನೆ ಪಕ್ಕದ ಮನೆ ಸರಸವ್ವ ಪುಟ್ಟಿ ಮರ ಕಸಬರಿಗೆ ಇಸ್ಕೊಂಡಾಳ ನೋಡು, ಮರಿದಂಗ ಇಸ್ಕೋ. ಇನ್ನು ನಾನ್ ಬರ್‍ತೀನಿ" ಅಂದಳು. ಅದಕ್ಕುತ್ತರವಾಗಿ ಸೊಸೆ,

"ಅತ್ತೆಯವರೇ ನೀವು ಕಾಶಿಗೂ ಹೋಗ್ಬ್ಯಾಡ್ರಿ–ಗೀಶಿಗೂ ಹೋಗ್ಬ್ಯಾಡ್ರಿ. ಯಾಕೆಂದರೆ ನೀವು ಹಗುರವಾಗಿ ಹೋಗ್ತಿಲ್ಲ. ಕಟ್ಟಿಗೆ, ಬಕೀಟು, ಕಸಬರಿಗೆ, ಮರ, ಮಟ್ಟಿ ಇತ್ಯಾದಿ ಸಂಸಾರನೇ ನಿಮ್ಮ ಮನಸ್ಸಿನ ತುಂಬ ಹೊತ್ಕೊಂಡು ಹೋಗ್ತಿದ್ದೀರಿ. ಅದ್ರಿಂದ ಪುಣ್ಯ ಬರಲ್ಲ. ಮತ್ತಷ್ಟು ಪಾಪ ಬರ್ತೈತಿ. ಸಾಕು ಸಾಕು ಕಾಶಿಗೆ ಹೋಗೋ ಸಂಕಲ್ಪ ಮಾಡಿದ್ರಲ್ಲಾ ಅಷ್ಟೇ ಸಾಕು. ಅದರ ಫಲಕ್ಕೆ ಸಿಗುತ್ತೇ" ಅಂತ ಅತ್ತೆಗೆ ಬುದ್ಧಿ ಹೇಳಿದ್ಲು. ಇಂಥವರನ್ನು ಕಂಡೇ ಪ್ರಭು ದೇವರು ಹೀಗೆ ಹೇಳಿರುವುದು.

**ಊರ ಮಧ್ಯದ ಕಣ್ಣ ಕಾಡಿನೊಳಗೆ ಬಿದ್ದಾವೆ ಐದು ಹೆಣನು**
**ಬಂದು ಬಂದು ಅಳುವವರ ಬಳಗ ಘನವಾದ ಕಾರಣ**
**ಹೆಣನೂ ಬೇಯದು ಕಾಡೂ ನಂದದು... ಮಾಡ ಉರಿಯಿತ್ತು**
**ಗೋಹೇಶ್ವರಾ ॥**

ನಮ್ಮೆಲ್ಲ ಕಣ್ಣಿಗೆ ಕಾಣುವಂತಹ ಅಖಂಡ ವಿಶ್ವವೇ ಕಾಡು. ಈ ಕಾಡಿನೊಳಗೆ ಸಂಸಾರವೆಂಬ ಭ್ರಮೆಯಲ್ಲಿ ತಳ್ಳಲ್ಪಡುವ ಐದು ಹೆಣಗಳಿವೆ. ಅವೇ ಶಬ್ಧ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚ ವಿಷಯಗಳು. ಇವುಗಳಿಂದ ಸಿಗಬಹುದಾದಂತಹ ಕ್ಷಣಿಕ ಸುಖಗಳಿಗೆ ಜೀವಾತ್ಮರು ಬಡಿದಾಡಿ ಗೋಳಾಡುತ್ತಿದ್ದಾರೆ. ಪ್ರಪಂಚದ ತುಂಬ ಇಂಥವರ ಬಳಗವೇ ದೊಡ್ಡದಿದೆ. (ಅಂದರೆ ಶರಣರು ಸಂತರು ವಿರಳರು) ಅವುಗಳಿಗಾಗಿ ಈ ಪ್ರಪಂಚದಲ್ಲಿ ಅಳುವವರ ಸಂಖ್ಯೆ ಬಹಳವಿದ್ದರೂ, ಆ ವಿಷಯಾದಿಗಳಿಗೆ ಕನಿಕರವಾದರೂ ಹುಟ್ಟಿ, ಸಂಪೂರ್ಣ ತೃಪ್ತಿಯನ್ನಾದರೂ ಕೊಟ್ಟಿವೆಯೇ? ಇಲ್ಲ, ಹೋಗಲಿ ಅಂತಹ ಸಂತೃಪ್ತಿ ಅವುಗಳಿಂದ ಸಿಗುತ್ತಿಲ್ಲವೆಂಬ ಅರಿವಾದರೂ ಜೀವಾತ್ಮರಿಗೆ ಬಂದು, ಅವರಾದರೂ ಆಸೆಯಿಂದ ವಿಮುಕ್ತರಾಗಿದ್ದಾರೆಯೇ? ಅದೂ ಇಲ್ಲ. ಆದ್ದರಿಂದ ಇಂತಹ ಅಜ್ಞಾನವನ್ನು ಜ್ಞಾನಾಗ್ನಿಯಿಂದ ಸುಟ್ಟು ಹಾಕು ಎಂಬುದಾಗಿ ಹೇಳಿರುವರು.

ದಾಸವರೇಣ್ಯರು ಜಗತ್ತಿನ ಜನರಲ್ಲಿನ ಅಜ್ಞಾನವನ್ನು ಹೀಗೆ ಪ್ರಶ್ನಿಸಿ ತಿಳಿಹೇಳಿದ್ದಾರೆ. **"ಯಾರು ಹಿತವರು ನಿನಗೆ, ಈ ಮೂವರೊಳಗೆ ನಾರಿಯೇ? ಧಾರಿಣಿಯೇ? ಘನ ಮದದ ಸಿರಿಯೇ? ಮುನ್ನ ಶತಕೋಟಿ ರಾಜರಾಳಿದ ನೆಲವ ತನ್ನದೆಂದೆನುತ ಶಾಸನವ ಬರೆಸಿ ಬಿನ್ನಣದ ಮನೆಕಟ್ಟಿ ಕೋಟೆಕೊತ್ತಳವಿಕ್ಕಿ ಚೆನ್ನಿಗನು ಅಸುವಳಿಯೆ ಹೊರಗೆ ಹಾಕುವರು!"** ಇಷ್ಟೇ ಜೀವನ.

ಇವಾವ್ರೂ ಬೇಡವೆಂದಲ್ಲ! ಇದ್ದೂ ಇಲ್ಲದಂತಿರಬೇಕು. ಇದ್ದುದೆಲ್ಲವನ್ನೂ ಭಗವಂತನಿಗೆ ಸಮರ್ಪಣೆಗೈದಿರಬೇಕು. ಅಂಥವರು ಸಂಸಾರಿಗಳಂತೆ ಕಂಡುಬಂದರೂ ಸಹ ಅವರು ಸನ್ಯಾಸಿಗಳೇ. ಅವರಿಗೆ ಯಾವ ದು:ಖಗಳೂ ಬಾಧಿಸುವುದಿಲ್ಲ. ಅಂಥವರು ಪರಮಾನಂದರು.

ಮಹಾಭಾರತದ ಯುದ್ಧದ ಸಂದರ್ಭವದು. ಭೀಷ್ಮರು ಕೌರವರ ಸೇನಾಧಿಪತಿಗಳಾಗಿ ಎಂಟು ದಿನಗಳ ಪರ್ಯಂತರ ಭಯಂಕರ ಯುದ್ಧ ಮಾಡಿದ್ದರು. ಪಾಂಡವರು ಅವರನ್ನು ಎದುರಿಸಲಾರದೆ ಚಿಂತಾಕ್ರಾಂತರಾದರು. ಆದರೆ ದುರ್ಯೋಧನನ ಮನಸ್ಸಿನಲ್ಲಿ ಬೇಸರ ಹಾಗೂ ನೋವು ಕಾಡುತ್ತಿತ್ತು. ಯಾಕೆಂದರೆ? "ಭೀಷ್ಮ ಪಿತಾಮಹರು ಎಷ್ಟೇ ಭೀಕರ ಯುದ್ಧ ಮಾಡಿದ್ದರೂ ಪಾಂಡವರಲ್ಲಿ ಯಾರೊಬ್ಬರನ್ನೂ ಕೊಂದಿಲ್ಲವಲ್ಲಾ" ಎಂಬುದು. ಈ ನೋವಿನಿಂದ ಅಂದು

ರಾತ್ರಿ ಅವರಲ್ಲಿಗೆ ಹೋಗಿ, ಕೌರವನು! "ಅಜ್ಜಾ ನಿಮ್ಮ ಯುದ್ಧವೇನೋ ಭಯಂಕರವಾಗಿ ಕಾಣುತ್ತಿರುವುದು. ಆದರೆ ನನಗ್ಯಾಕೋ ನಿಮ್ಮ ಮೇಲೆ ಸಂಶಯ. ಯಾಕೆಂದರೆ ನಿಮಗೆ, ನನಗಿಂತಲೂ ಹೆಚ್ಚು ಪ್ರೀತಿ ಪಾಂಡವರ ಮೇಲಿರಬೇಕು. ನಾನು ನೋಡುತ್ತಲೇ ಇದ್ದೇನೆ. ಈ ಎಂಟು ದಿನಗಳಲ್ಲಿ ನೀವು ಪಾಂಡವರಲ್ಲಿ ಯಾರೊಬ್ಬರನ್ನೂ ಕೊಂದಿಲ್ಲ' ಎಂತೆಂದು.

ದುರ್ಯೋಧನನ ಈ ಅವಹೇಳನಕಾರಿ ಮಾತು ಕೇಳಿ ಭೀಷ್ಮರಿಗೆ ಬಹಳ ನೋವಾಯಿತು. ಮನೋವೇದನೆಯಿಂದ ಆ ಕೂಡಲೇ ಅವರು, "ದುರ್ಯೋಧನ ನಾಳಿನ ಯುದ್ಧದಲ್ಲಿ ಅರ್ಜುನನ್ನು ಕೊಲ್ಲುತ್ತೇನೆ. ಕೊಲ್ಲದಿದ್ದರೆ ನಾನೇ ಸೋತು ಹೋಗುತ್ತೇನೆ" ಎಂದು ಹೇಳಿ ಕಳಿಸಿದರು.

ಭೀಷ್ಮರು ದುರ್ಯೋಧನನಿಗೆ ಕೊಟ್ಟ ಭಾಷೆ ಗೌಪ್ಯವಾಗಿ ಉಳಿಯಲಿಲ್ಲ. ಕೌರವರಿಗಷ್ಟೇ ಅಲ್ಲ, ಪಾಂಡವರೆಲ್ಲರಿಗೂ ಗೊತ್ತಾಯಿತು. ವೀರಾಧಿವೀರರಿಗೆಲ್ಲ ಭಯ ನಡುಕ ಹುಟ್ಟಿಕೊಂಡವು. ಭೀಷ್ಮರು ಈ ಪ್ರತಿಜ್ಞೆಯಿಂದ ಭಗವಾನ್ ಶ್ರೀ ಕೃಷ್ಣನಿಗೆ ರಾತ್ರಿಯೆಲ್ಲ ನಿದ್ದೆಯೇ ಬರಲಿಲ್ಲ. ಹಾಗೆಯೇ ತನ್ನ ಶಿಷ್ಯ ಅರ್ಜುನನೂ ಸಹ ಚಿಂತೆಗೀಡಾಗಿರಬೇಕೆಂದು ಭಾವಿಸಿ ಸಮಾಧಾನ ಹೇಳಲೆಂದು ಅರ್ಜುನನ ಶಯನ ಗೃಹಕ್ಕೆ ಶ್ರೀಕೃಷ್ಣ ಹೊರಟ. ಬಂದು ನೋಡುತ್ತಾನೆ, ಅರ್ಜುನನಿಗೆ ಗಾಢ ನಿದ್ರೆ ಆವರಿಸಿತ್ತು. ಅದನ್ನು ಕಂಡ ಶ್ರೀಕೃಷ್ಣಪರಮಾತ್ಮ ಆಶ್ಚರ್ಯಚಕಿತನಾದ. ಅರ್ಜುನನ್ನು ಎಬ್ಬಿಸಿ, "ಅರ್ಜುನಾ, ನಿನಗೆ ಭೀಷ್ಮರ ಪ್ರತಿಜ್ಞೆ ಗೊತ್ತಿಲ್ಲವೆ?" ಎಂದು ಕೇಳಿದನು. ಅರ್ಜುನನದಕ್ಕೆ 'ಗೊತ್ತಿದೆ' ಎಂದ. "ಹಾಗಾದರೆ ನಿನಗೆ ಅದರ ಬಗ್ಗೆ ಸ್ವಲ್ಪವೂ ಚಿಂತೆಯಿಲ್ಲವೆ? ಮರಣಭಯ ನಿನ್ನನ್ನು ಕಾಡುತ್ತಿಲ್ಲವೇ?" ಎಂದು ಶ್ರೀಕೃಷ್ಣ ಕೇಳಿದ.

"ಭಗವಂತ! ದೀನರಕ್ಷಕ, ನಾನು ಎಚ್ಚರವಿದ್ದು ಏನು ಮಾಡಲಿ? ಸಂಪೂರ್ಣವಾಗಿ ನನ್ನನ್ನು ನಿನಗರ್ಪಿಸಿಕೊಂಡಿದ್ದೇನೆ. ನನ್ನ ಯೋಗಕ್ಷೇಮ ನೋಡಿಕೊಳ್ಳುವ ಭಗವಂತನಾದ ನೀನು ಎಚ್ಚರವಿರುವಾಗ ನಾನೇಕೆ ಚಿಂತೆ ಮಾಡಲಿ, ದು:ಖಿಸಲಿ. ನೀನೇ ಹೇಳಿರುವಂತೆ ನಾನು ಕೆಲಸ ಕರ್ಮಗಳನ್ನಷ್ಟೇ ಮಾಡುವೆನು. ಫಲಾಫಲಗಳ ಅಪೇಕ್ಷೆ ನನ್ನಲ್ಲಿಲ್ಲ. ನಿನ್ನ ಭಕ್ತನಾದ ನನ್ನನ್ನು ರಕ್ಷಣೆ ಮಾಡುವುದಾಗಲಿ, ಭೀಷ್ಮರ ಪ್ರತಿಜ್ಞೆಯನ್ನು ನೇರವೇರಿಸುವುದಾಗಲಿ ಎರಡೂ ನಿನಗೆ ಸೇರಿದ್ದು. ಅದರ ಚಿಂತೆ ನಾನೇಕೆ ಮಾಡಲಿ. ಆದ್ದರಿಂದ ಎಲ್ಲವನ್ನೂ ನಿನಗರ್ಪಿಸಿ ನಿಶ್ಚಿಂತೆಯಿಂದ ನಿದ್ರೆ ಮಾಡುತ್ತಿರುವೆನು" ಎಂದು ಅರ್ಜುನನು ಹೇಳಿ ಪುನ: ಮಲಗಿದನು.

ಅರ್ಜುನನ ಅರ್ಪಣಾ ಮನೋಭಾವ ಸನ್ಯಾಸಕ್ಕೆ ಸರಿಸಮವಾದದ್ದು. ಕಿಂಚಿತ್ತೂ ಆಸೆ ಉಳಿದಿದ್ದರೆ ಅದು ಸಾಂಸಾರಿಕ ದು:ಖಕ್ಕೆ ಸಮವಾಗುತ್ತಿತ್ತು. ಇಂಥವರೇ ಉಂಡೂ ಉಪವಾಸಿಗಳು. ಬಳಸೀ ಬ್ರಹ್ಮಚಾರಿಗಳು. ಇವರು ಕಷ್ಟಕ್ಕೆ ಕುಗ್ಗುವುದಿಲ್ಲ, ಸುಖಕ್ಕೆ ಹಿಗ್ಗುವುದಿಲ್ಲ. ಸಹಜತೆಯಷ್ಟೆ ಇವರ ಸ್ವಭಾವ.

ಒಬ್ಬ ರಾಜ! ಸನ್ಯಾಸಿ ದೀಕ್ಷೆ ತೆಗೆದುಕೊಂಡು ಬುದ್ಧನ ಶಿಷ್ಯನಾದ. ಬುದ್ಧನ ವಿಹಾರದಲ್ಲಿಯೇ ವಾಸಿಸಲಾರಂಭಿಸಿದ. ರಾತ್ರಿಯಾಯಿತು. ಹುಲ್ಲು ಅಥವಾ ಕಲ್ಲುಗಳ ಮೇಲೆ ಮಲಗಿಕೊಳ್ಳಬೇಕಾಯಿತು. ಅದೆಷ್ಟು ಪ್ರಯತ್ನಿಸಿದರೂ ರಾಜನಿಗೆ ಅವುಗಳ ಮೇಲೆ ನಿದ್ರೆ ಹತ್ತಲಿಲ್ಲ.

ಸೊಳ್ಳೆ ಕಡಿತ ಬೇರೆ. ಚಿಂತಿಸುತ್ತಾ ಕುಳಿತಿದ್ದ. ಮಧ್ಯರಾತ್ರಿಯಾಗಿತ್ತು. ಭಿಕ್ಷುಗಳೆಲ್ಲರೂ ಮಲಗಿ ಹಾಯಾಗಿ ನಿದ್ರಿಸುತ್ತಿದ್ದರು. ರಾಜ ತನ್ನ ಮನಸ್ಸಿನಲ್ಲಿ "ಅಯ್ಯೋ ನಾನೆಂಥ ಕೆಲಸ ಮಾಡಿದೆ. ಸನ್ಯಾಸಿ ದೀಕ್ಷೆ ತೆಗೆದುಕೊಂಡು ಮೂರ್ಖನಾದೆ. ಅರಮನೆ ಸುಪ್ಪತ್ತಿಗೆಯ ಮೇಲೆ ಮಲಗಿ ಆನಂದಿಸುವುದನ್ನು ಬಿಟ್ಟು ಈ ದು:ಖವನ್ನೇಕೆ ತಂದುಕೊಂಡೆ. ಬೇಡ ಬೇಡ ನಾಳೆ ಬೆಳಿಗ್ಗೆ ಬುದ್ಧನಿಂದ ಅನುಮತಿ ಪಡೆದು ಅರಮನೆಗೆ ಹಿಂತಿರುಗಿಬಿಡಬೇಕು" ಹೀಗೆ ಯೋಚಿಸಿಕೊಂಡ.

ಆ ಹೊತ್ತಿಗೆ ಬುದ್ಧನೇ ರಾಜನಲ್ಲಿಗೆ ಬಂದು, "ರಾಜ ಬೆಳಗಾಗುವವರೆಗೂ ಏಕೆ ಕಾಯುವೆ? ಸನ್ಯಾಸ ಬಿಡುವುದಾದರೆ ಈಗಲೇ ಬಿಟ್ಟು ಹೋಗು. ಅದಕ್ಕೆ ನನ್ನದೇನೂ ಅಡೆತಡೆಯಿಲ್ಲ. ಇದಕ್ಕಾಗಿ ರಾತ್ರಿಯೆಲ್ಲ ಚಿಂತಿಸಬೇಡ" ಎಂದು ಹೇಳಿದ.

ರಾಜನಿಗೆ ಆಶ್ಚರ್ಯವಾಯಿತು. ಕೂಡಲೇ "ಪ್ರಭು ನನ್ನ ಮನಸ್ಸಿನಲ್ಲಿ ಹಾಗೆ ಯೋಚನೆಯೊಂದು ಬಂದು ಸುಳಿದು ಹೋಯಿತು. ಆದರೆ ಅದು ನಿಮಗೆ ಹೇಗೆ ತಿಳಿಯಿತು?

"ಯಾರೊಬ್ಬರೂ ಮನಸ್ಸು ಯೋಚನೆಗಳಿಂದ ಮುಕ್ತವಾಗಿ ಪರಿಶುದ್ಧವಾಗಿದ್ದರೆ ಅವರು ಮತ್ತೊಬ್ಬರ ಯೋಚನೆಗಳನ್ನು ತಿಳಿಯುವಂತಹ ಶಕ್ತಿ ಹೊಂದಿರುತ್ತಾರೆ. ಆ ಯೋಚನೆಗಳೆನ್ನುವವೂ ಸಹ ಜಡವಸ್ತುಗಳಿದ್ದಂತೆ. ಆದರೆ ಅವು ಸೂಕ್ಷ್ಮ ವಸ್ತುಗಳಾಗಿವೆ. ಇದು ಎಲ್ಲರಿಗೂ ಸಾಧ್ಯ. ನೀನಿನ್ನು ಅರಮನೆಗೆ ಹೋಗಬಹುದು" ಎಂದು ಹೇಳಿದ ಬುದ್ಧ.

ರಾಜನದಕ್ಕೆ, "ಇಲ್ಲ ನಾನು ಹೋಗುವುದಿಲ್ಲ. ನಿಮ್ಮಂತಹ ಗುರುಗಳನ್ನು ಬಿಟ್ಟು ನಾ ಹೋಗುವುದಿಲ್ಲ. ನನ್ನ ಅಪರಾಧ ಕ್ಷಮಿಸಿಬಿಡಿ" ಎಂದು ಕೇಳಿಕೊಂಡ.

"ಬೇಡ, ಮತ್ತೆ ನೀನು ಹಿಂತಿರುಗಿ ಹೋಗುವ ಯೋಚನೆ ಮಾಡೇ ಮಾಡುವಿ. ಆಗ ಹೋಗುವುದಕ್ಕಿಂತ ಈಗಲೇ ಹೋಗುವುದೊಳಿತು. ಒಂದು ವಿಷಯ ತಿಳಿದುಕೊ. ನೀನು ಹಿಂದಿನ ಜನ್ಮದಲ್ಲೂ ಸನ್ಯಾಸಿಯಾಗಿದ್ದುಕೊಂಡು ಸಂಕಟಪಟ್ಟು ಸನ್ಯಾಸವನ್ನು ಬಿಟ್ಟು ಸಂಸಾರಿಯಾದೆ. ಆ ಸ್ಥಿತಿ ಮತ್ತೆ ನಿನ್ನಲ್ಲಿ ಮರುಕಳಿಸಿದೆ. ಆದ್ದರಿಂದ ಮತ್ತೆ ಮತ್ತೆ ಹಾಗಾಗುವುದು ಬೇಡ. ಹೋಗಿಬಿಡು" ಎಂದು ಹೇಳಿದ್ದ ಬುದ್ಧ.

ಬುದ್ಧ ಹೀಗೆ ಹೇಳಿದ, ತಕ್ಷಣ ರಾಜ ಸನ್ಯಾಸಿಯ ಚಿತ್ತದ ಪರದೆಯ ಮೇಲೆ ಹಿಂದಿನ ಜನ್ಮದ ಚಿತ್ರಣಗಳು ಮೂಡಿಬಂದವು. ಅದರಲ್ಲಿ ಕಾಣಿಸಿದ ಮಠ, ಗುರು, ಸೊಳ್ಳೆಗಳು ಈ ಜನ್ಮದವುಗಳಾಗಿರದೆ, ಬೇರೆಯವೇ ಆಗಿದ್ದವು. ಕ್ಷಣಮಾತ್ರದಲ್ಲಿ ಮತ್ತೆ ಎಚ್ಚೆತ್ತ ರಾಜ, "ಬುದ್ಧಿ ನನ್ನನ್ನು ಕ್ಷಮಿಸಿ, ಮತ್ತೆ ಅದೇ ತಪ್ಪನ್ನು ಮಾಡಲಾರೆ. ಇನ್ನು ಮುಂದೆ ಅದೆಷ್ಟೇ ಕಷ್ಟಗಳು ಬಂದರೂ ದೃಢವಾಗಿ ನಿಲ್ಲುತ್ತೇನೆ. ಸಾಂಸಾರಿಕ ಭೋಗಸುಖಗಳನ್ನು ಮೆಲಕು ಹಾಕುವುದಿಲ್ಲ. ಮರೆಯುತ್ತೇನೆ. ಯೋಗ ಸಾಧನೆಯಲ್ಲಿ ಮುಳುಗುತ್ತೇನೆ" ಹೀಗೆ ಬುದ್ಧನಲ್ಲಿ ಪ್ರತಿಜ್ಞೆ ಮಾಡಿದ. ದೇಹಭಾವ ತೊರೆದ, ದೀರ್ಘಕಾಲದವರೆಗೂ ಧ್ಯಾನದಲ್ಲಿ ಮಗ್ನನಾದ.

'ತಪಸ್ಸು' ಎಂದರೆ! ಯಾವುದಾದರೂ ಒಂದು ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಅದರ ಫಲಿತಾಂಶ ಬರುವವರೆಗೂ ವಿಶ್ರಾಂತಿ ತೆಗೆದುಕೊಳ್ಳದೆ ಆ

ಕಾರ್ಯದಲ್ಲಿ ನಿರತರಾಗಿರುವುದು. ಅಂದರೆ ದೇಹ ಮತ್ತು ಮನಸ್ಸುಗಳೆರಡನ್ನೂ ದಂಡಿಸಿ ಕರ್ತವ್ಯದಲ್ಲಿ ನಿರತರಾಗುವುದು. ಇದನ್ನೇ ತಪಸ್ಸು ಎನ್ನುವುದು. ಈ ಬಗ್ಗೆ ಘನಶಾಮದಾಸ ಬಿರ್ಲಾರವರು ಹೀಗೆ ಹೇಳಿದ್ದಾರೆ.

ಪುಂಖಾನುಪುಂಕ ವಿಷಯಾನುಪಸೇವಮಾನ್
ಧೀರೋ ನ ಮುಂಚತಿ ಮುಕುಂದ ಪಾದಾರವಿಂದಮ್ ।
ಸಂಗೀತ ವಾದ್ಯಗತಿ ತಾನವಲಂ ಗತಾಪಿ
ಮೌಲಿಸ್ಥ ಕುಂಭ ಪರಿರಕ್ಷಣಧೀರ್ನಟೀವ ॥

ತಲೆಯ ಮೇಲೆ ಕುಂಭಹೊತ್ತ ಕುಶಲ ನಟಿಯು, ವಾದ್ಯಗತಿಯ ಸಂಗೀತದ ಲಯಕ್ಕನುಗುಣವಾಗಿ ಕುಣಿಯುತ್ತಾಳೆ, ನರ್ತಿಸುತ್ತಾಳೆ. ಆದರೂ ಅವರ ಗಮನವೆಲ್ಲಾ ತಲೆಯ ಮೇಲಿರುವ ಕುಂಭ(ಕೊಡ)ದ ಕಡೆಗೆ ಇರುತ್ತದೆ. ಹಾಗೆ ಈ ನಮ್ಮ ಶರೀರ ಅನೇಕ ವಸ್ತುವಿಷಯಾಗಿಗಳ ಮಧ್ಯೆ ಇದ್ದರೂ ಸಹ ಧೀರನಾದವನ ಮನಸ್ಸು ಭಗವಂತನ ಪಾದಾರವಿಂದಗಳಿಂದ ದೂರವಾಗಿರುವುದಿಲ್ಲ.

ಇದಕ್ಕೊಂದು ದೃಷ್ಟಾಂತ. ಜಾತ್ರೆಯಲ್ಲಿ ಜೋಗಮ್ಮ (ಜೋಗತಿ) ತನ್ನ ತಲೆಯ ಮೇಲೆ ಕೊಡ ಹೊತ್ತಿರುತ್ತಾಳೆ. ಕೊಡಕ್ಕೆ ಕೈ ಹಚ್ಚಿರುವುದಿಲ್ಲ. ಅವೇ ಕೈಗಳಿಂದ ಚೌಡಕಿ ಭಾರಿಸುತ್ತಿರುತ್ತಾಳೆ. ಹಾಡು ಹೇಳುತ್ತಾಳೆ. ತನ್ನ ಸುತ್ತಲೂ ಜನರನ್ನು ಸೇರಿಸಿಕೊಳ್ಳುತ್ತಾಳೆ. ಅವರೆಲ್ಲರ ಮಧ್ಯೆ ಹಾಡಿಗೆ ತಕ್ಕಂತೆ ಲಯಬದ್ಧವಾಗಿ ಕುಣಿಯುತ್ತಾಳೆ. ಜನರ ಹೆಗಲ ಮೇಲಿನ ವಸ್ತ್ರ (ಟವಲು)ಗಳನ್ನು ಕಸಿದುಕೊಳ್ಳುತ್ತಾಳೆ. ಅವರೆಲ್ಲರ ಹಣೆಗೆ ಭಂಡಾರ ಹಚ್ಚುತ್ತಾಳೆ. ಅವರಿಂದ ಹಣ ಪಡೆಯುತ್ತಾಳೆ. ಇಷ್ಟೆಲ್ಲಾ ಅವಳ ಅಂಗಾಂಗದಲ್ಲಿ ಚೇಷ್ಟೆಗಳು ಕಂಡುಬಂದರೂ ಅವಳ ಮನಸ್ಸು ಮಾತ್ರ ತಾನು ತಲೆಯ ಮೇಲೆ ಹೊತ್ತಿರುವ ಕೊಡವನ್ನು ಬೀಳದಂತೆ ನಿಯಂತ್ರಿಸುತ್ತಿರುತ್ತದೆ. ಹೀಗೆ ಶರೀರ ಲೌಕಿಕದ ವಿಷಯಾದಿಗಳ ಮಧ್ಯವಿದ್ದರೂ, ಮನಸ್ಸನ್ನು ಮಾತ್ರ ಭಗವಂತನಲ್ಲಿಟ್ಟಿರಬೇಕು.

ಶರೀರ ಎಲ್ಲಿದ್ದರೇನು? ಮನಸ್ಸನ್ನು ಭಗವಂತನಲ್ಲಿ ನೆಲೆಯೂರಿಸುವುದೇ ತಪಸ್ಸು. ಜನಕ ಮಹಾರಾಜ ತನ್ನ ಗುರುಗಳೊಂದಿಗೆ ಆಧ್ಯಾತ್ಮಚಿಂತನೆಯಲ್ಲಿ ತೊಡಗಿದ್ದ. ಆಗ ಜನಕ ಮಹಾರಾಜನ ಮನೋಸ್ಥೈರ್ಯ ಪರೀಕ್ಷಿಸುವುದರ ಸಲುವಾಗಿ ಯಾರೋ ಒಬ್ಬರಲ್ಲಿಗೆ ಬಂದು, "ಮಹಾರಾಜ, ನಿನ್ನ ಅರಮನೆಗೆ ಬೆಂಕಿ ಬಿದ್ದು ಭಸ್ಮವಾಗಿದೆ" ಎಂದರಂತೆ. ಆಗ ಅವರ ಕಡೆಗೆ ತಿರುಗಿದ ಜನಕ ಮಹಾರಾಜ ಶಾಂತಸ್ವಭಾವದಿಂದ "ಹೂಂ ಈ ನನ್ನ ದೇಹದೊಂದಿಗೇ ನಾನು ಸಂಬಂಧ ಇಟ್ಟುಕೊಂಡಿಲ್ಲ, ಅಂದಮೇಲೆ ಆ ಅರಮನೆಯೊಂದಿಗೆ ನನ್ನದೆಂತಹ ಸಂಬಂಧ" ಎಂದಿದ್ದರಂತೆ. ಅಲ್ಲದೆ ಮತ್ತೆ ಹೇಳಿದರಂತೆ, "ಆದರೆ ಕೇಳಿ, ಆ ಭೌತಿಕ ಸಂಪತ್ತು ಉರಿದು ಹೋಗಬಹುದು. ಆದರೆ ನನ್ನಲ್ಲಿರುವ ಸಂಪತ್ತು ಎಂದೂ ಭಸ್ಮವಾಗುವಂಥದ್ದಲ್ಲ, ಅದು ಅವಿನಾಶಿ" ಎಂದು ಹೇಳಿ ಕಳಿಸಿದ್ದರು.

ವಿಮಾನವೊಂದು ಭೂಮಿಯ ಆಕರ್ಷಣೆಯನ್ನು ಮೀರಿ ಮೇಲೆ ಹಾರಾಡಬೇಕೆಂದರೆ ಅಂತಹ ಶಕ್ತಿಯೊಂದನ್ನು ಅದು ಹೊಂದಿರಬೇಕು. ಹಾಗೇ ಜೀವಾತ್ಮ ಪ್ರಾಪಂಚಿಕ ವಿಷಯಗಳ

ಆಕರ್ಷಣಾ ಶಕ್ತಿಯನ್ನು ಮೀರಿ ವೈರಾಗ್ಯ ಸ್ಥಿತಿ ನಿಲ್ಲಬೇಕೆಂದರೆ ಅಪಾರ ಶಕ್ತಿಯೊಂದನ್ನು ಸಂಪಾದಿಸಿಕೊಳ್ಳಬೇಕು. ಆ ಶಕ್ತಿ ಯಾವೊಂದು ವಿದ್ಯೆಯಿಂದ ದೊರೆಯುವಂಥದ್ದಲ್ಲ. ಜ್ಞಾನದ ಮೂಲಕ ಸಿಗುವಂಥದ್ದು. ಅಂದರೆ ಜ್ಞಾನ ದೊರೆವುದು ವಿದ್ಯೆಯಿಂದಲ್ಲ, ಧ್ಯಾನದಿಂದ. ಮನುಸ್ಮೃತಿಯೊಂದು ಹೇಗೆ ಹೇಳುತ್ತಿದೆ.

ಅದ್ಭಿರ್ಗಾತ್ರಾಣಿ ಶುಧ್ಯಂತಿ, ಮನಸತ್ಯೇನ ಶುದ್ಯತಿ ।
ವಿದ್ಯಾ ತಪೋಭ್ಯಾಂ ಜೀವಾತ್ಮಾ; ಬುದ್ಧಿ: ಜ್ಞಾನೇನ ಶುದ್ಯತಿ ॥

ನೀರಿನಿಂದ ತನು ಶುದ್ಧಿ, ಸತ್ಯದಿಂದ ಮನ: ಶುದ್ಧಿ, ವಿದ್ಯೆ ಮತ್ತು ತಪಸ್ಸಿನಿಂದ ಜೀವಾತ್ಮ ಶುದ್ಧಿ. ಜ್ಞಾನದಿಂದ ಬುದ್ಧಿ ಶುದ್ಧಿಯಾಗುವುದು. ಅರ್ಥಾತ್ ವಿದ್ಯೆ ಜ್ಞಾನವಲ್ಲ. ಜ್ಞಾನ ಧ್ಯಾನದಿಂದ ಸಿಗುವಂಥದ್ದು. ಪ್ರಕೃತಿಯೊಂದಿಗೆ ಮಗ್ನತೆಗೊಂಡಾಗ ಸಿಗುವಂಥದ್ದು. ಶರಣರು ಜ್ಞಾನದ ಮಹಿಮೆಯನ್ನು ಹೇಳುತ್ತಾರೆ.

ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾ;
ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯಾ;
ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ;
ಪರುಷದ ಬಲದಿಂದ ಅವಲೋಹದ ಕೇಡ ನೋಡಯ್ಯಾ;
ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನಮನದ ಕೇಡ ನೋಡಯ್ಯ ॥

ವ್ಯಾಸ ಮಹರ್ಷಿಗಳ ಹೆಸರು ಕೇಳದವರಿರಲಿಕ್ಕಿಲ್ಲ. ಅವರು ಜಗತ್ತಿಗೆ ನೀಡಿರುವ ಕೊಡುಗೆ ಸಣ್ಣದಲ್ಲ. ಅವು ಸೂರ್ಯಚಂದ್ರರಿರುವವರೆಗೂ ಅಜರಾಮರ. ವ್ಯಾಸರು ರಚಿಸಿರುವ ಮಹಾಭಾರತವನ್ನು 'ಪಂಚಮವೇದ' ಎಂದು ಕರೆದಿದ್ದಾರೆ. ಮಹಾಭಾರತದಲ್ಲಿ ಏನಿದೆಯೋ ಅದು ಎಲ್ಲಾ ಕಡೆಯಲ್ಲೂ ಇದೆ. ಮಹಾಭಾರತದಲ್ಲಿ ಇಲ್ಲದಿದ್ದದ್ದು ಬೇರೆಲ್ಲಿಯೂ ಇಲ್ಲ. ಅದೊಂದು ದಿವ್ಯಕೋಶವೆಂಬ ಮಾತಿದೆ. ಆದರು ಅವರು ತಮ್ಮ ಮಗ ಶುಕಮುನಿಯನ್ನು ಜ್ಞಾನಾರ್ಜನೆಗೆಂದು ಜನಕ ಮಹಾರಾಜನ ಬಳಿಗೆ ಕಳಿಸಿಕೊಡುವರು.

ಶುಕಮುನಿ ಜನಕ ಮಹಾರಾಜನ ಆಸ್ಥಾನಕ್ಕೆ ಬಂದು ನೋಡಿದ. ಜನಕ ಮಹಾರಾಜ ನವರತ್ನಗಳಿಂದ ಕೂಡಿದ ಕಿರೀಟವನ್ನು ಧರಿಸಿಕೊಂಡು, ರತ್ನಖಚಿತವಾದ ಸಿಂಹಾಸನಾರೂಢನಾಗಿ ಕುಳಿತಿದ್ದ. ಹೀಗಿರುವಾಗ ಜನಕನನ್ನು ನೋಡಿದ ಶುಕಮುನಿಗೆ ಆಶ್ಚರ್ಯವಾಯಿತು. "ಇಷ್ಟೆಲ್ಲಾ ವೈಭೋಗದ ಮಧ್ಯೆ ಇರುವ ಈತ ಅದೆಂತಹ ವಿರಾಗಿ? ಇವನು ಬ್ರಹ್ಮಜ್ಞಾನಿಯೇ? ನಮ್ಮ ತಂದೆಗಿಂತಲೂ ಶ್ರೇಷ್ಠನೇ?" ಇತ್ಯಾದಿ ಪ್ರಶ್ನೆಗಳು ಶುಕಮುನಿಯ ಮನಸ್ಸಿನಲ್ಲಿ ಉದ್ಭವಿಸಿದವು. ಜನಕ ಮಹಾರಾಜನಿಗೆ ಆತನ ಮನಸ್ಸಿನಲ್ಲಿ ಹುಟ್ಟಿಬಂದ ಸಂದೇಹ ಅರ್ಥವಾಯಿತು. ಆದರೂ ಜನಕನು "ಮುನಿಪುತ್ರರೇ, ಮಾರ್ಗಾಯಾಸದಿಂದ ದಣಿದಿರುವಿರಿ. ಮೊದಲು ಸ್ನಾನ, ಸಂಧ್ಯಾವಂದನೆ, ಊಟೋಪಚಾರವೆಲ್ಲ ಮುಗಿಯಲಿ, ಆಮೇಲೆ ನಿಮ್ಮ ಮನಸ್ಸಿನಲ್ಲಿ ಬಂದಿರುವ ಸಂದೇಹಕ್ಕೆ ಉತ್ತರ ಕೊಡೋಣ" ಎಂದು ಹೇಳಿ ಶುಕಮುನಿಯನ್ನು ಸೇವಕರೊಡನೆ ಒಳಗೆ

ಕಳಿಸಿದರು. ನಂತರ ಬೇರೋರ್ವ ಸೇವಕನಿಗೆ ಪಿಸುಮಾತಿನಲ್ಲಿ ಏನೋ ಹೇಳಿ ಕಳುಹಿಸಿದರು. ಅವನು ಒಳನಡೆದ!

ಶುಕಮುನಿ ಸ್ನಾನ, ಸಂಧ್ಯಾವಂದನೆಗಳನ್ನು ಮುಗಿಸಿದ. ಊಟಕ್ಕೆಂದು ಭೋಜನಶಾಲೆಗೆ ಬಂದ. ಅಲ್ಲಿ ವರ್ಣಿಸಲಾಗದಷ್ಟು ಬಹುವಿಧವಾದ ಭಕ್ಷ್ಯಭೋಜನಗಳನ್ನಿಟ್ಟಿದ್ದರು. ಸೇವಕರು ಊಟಕ್ಕೊಂದು ಮಣೆ ಹಾಕಿ, ಶುಕಮುನಿಯನ್ನು ಅದರ ಮೇಲೆ ಕೂಡಲು ಹೇಳಿದರು. ಶುಕಮುನಿ ಗಾಬರಿಯಿಂದ "ನಾನಲ್ಲಿ ಕುಳಿತು ಊಟ ಮಾಡಬೇಕೇ? ಬೇರೆ ಕಡೆ ಹಾಕಿರಿ" ಎಂದ.

"ಇಲ್ಲ, ಅದು ರಾಜಾಜ್ಞೆ" ಎಂದರು ಸೇವಕರು. ಶುಕಮುನಿ ಅಲ್ಲಿ ಕುಳಿತು ಊಟ ಮಾಡಲಿಲ್ಲ. ಕೈಗೆ ಸಿಕ್ಕಿದ್ದೊಂದನ್ನು ತಾಟಿನಲ್ಲಿ ಹಾಕಿಕೊಂಡು ಬೇಗ ತಿಂದು ಉಣ್ಣುವ ಶಾಸ್ತ್ರ ಮಾಡಿ ಹೊರನಡೆದ. ಕೂಡಲೆ ಜನಕ ರಾಜನು ಅವರಿದ್ದಲ್ಲಿಗೆ ಬಂದು, 'ಊಟವಾಯಿತೇ?' ಎಂದು ಪ್ರಶ್ನಿಸಿದರು.

"ಹೂಂ ಆಯಿತು" ಎಂದು ಸಿಟ್ಟಿನಲ್ಲಿ ಹೇಳಿದರು.

"ಏನೂಟ ಮಾಡಿದಿರಿ?"

"ಏನೂಟ ಮಾಡಿದೆನೋ ಯಾರಿಗೆ ಗೊತ್ತು!"

ಮುಸುನಗುತ್ತ "ಯಾಕೆ? ಈಗತಾನೇ ಊಟ ಮಾಡಿ ಬಂದಿರುವಿರಿ. ಊಟ ಮಾಡಿದ್ದೇನು ಗೊತ್ತಿಲ್ಲವೆ? ಊಟ ರುಚಿಯಿರಲಿಲ್ಲವೇ?"

"ಅದನ್ನೆಲ್ಲ ಹೇಳಲು ಬರುವುದಿಲ್ಲ".

"ಯಾಕೆ?"

"ನಾನು ಊಟ ಮಾಡಲಿಲ್ಲ. ಊಟ ಮಾಡುವ ಶಾಸ್ತ್ರ ಮಾಡಿದೆನಷ್ಟೇ"

"ಅಂದರೆ!?"

"ಊಟಕ್ಕೆಂದು ಕುಳಿತುಕೊಳ್ಳುವ ಜಾಗದ ಮೇಲೆ ಹರಿತವಾದ ಖಡ್ಗವೊಂದನ್ನು ತೆಳುವಾದ ರೇಷ್ಮೆ ದಾರದಿಂದ ಕಟ್ಟಿ ಇಳಿ ಬಿಟ್ಟಿರುವಿರಿ. ಅಲ್ಲೇ ಕೂತು ಊಟ ಮಾಡಬೇಕೆಂದು ರಾಜಾಜ್ಞೆ ಬೇರೆ. ನೀವಲ್ಲಿ ನನ್ನನ್ನು ಊಟಕ್ಕಾಗಿ ಕುಳ್ಳಿರಿಸಿದ್ದಿರೋ? ಅಥವಾ ಪ್ರಾಣ ತೆಗೆಯಲು ಕುಳ್ಳಿರಿಸಿದ್ದಿರೋ? ಗೊತ್ತಿಲ್ಲ. ಆದರೆ ನಾವಲ್ಲಿ ರಾಜಾಜ್ಞೆಯನ್ನು ತಿರಸ್ಕರಿಸದೆ ಪ್ರಾಣಭಯದಿಂದ ಉಣ್ಣುವ ಶಾಸ್ತ್ರವನ್ನಷ್ಟೇ ಮಾಡಬೇಕಿತ್ತು, ಮಾಡಿದೆವು ಸಹ. ಒಟ್ಟಾರೆ ಆ ಕ್ಷಣದಲ್ಲಿ ನಾನು ತಟ್ಟೆಯಲ್ಲಿ ಏನನ್ನು ಹಾಕಿಕೊಂಡೆನೋ, ಏನನ್ನು ತಿಂದೆನೋ ಗೊತ್ತಿಲ್ಲ. ಯಾಕೆಂದರೆ ಆಗ ನನ್ನ ಮನಸ್ಸು ಊಟದ ಮೇಲಿರಲಿಲ್ಲ. ನನ್ನ ಪ್ರಾಣದ ಮೇಲಿತ್ತು" ಎಂದು ಹೇಳಿ ಶುಕಮುನಿ ಮೌನವಿಸಿದ.

ಆಗ ಜನಕ ಮಹಾರಾಜನು ಹೇಳಿದ. "ಇಷ್ಟೇ ಆಧ್ಯಾತ್ಮದ ತಿರುಳು.

ಆತ್ಮಜ್ಞಾನಿಯಾದವರು ರಾಜ್ಯ, ದೇಶ, ಕೋಶ, ಹೆಂಡತಿ, ಮಕ್ಕಳು ಇತ್ಯಾದಿ ಸಕಲ ಭೋಗೈಶ್ವರ್ಯಗಳ ಮಧ್ಯೆ ತಮ್ಮ ಶರೀರವನ್ನು ಹರಿಬಿಟ್ಟಿದ್ದರೂ ಸಹ ಅವರ ಮನಸ್ಸನ್ನು ಮಾತ್ರ ಸದಾ ಭಗವಂತನಲ್ಲಿ ನೆಲೆಯೂರಿಸಿರುತ್ತಾರೆ. ಈಗ ನೀವೇ ಹೇಳಲಿಲ್ಲವೇ? ನನ್ನ ಮನಸ್ಸು ಊಟದ ವಸ್ತುಗಳ ಮೇಲಿರಲಿಲ್ಲ, ಪ್ರಾಣದ ಮೇಲಿತ್ತೆಂದು. ಹಾಗೆ ಈ ಶರೀರ ಸಾಂಸಾರಿಕ ವಿಷಯಗಳ ಮಧ್ಯೆ ಇರುವುದು ತಪ್ಪಲ್ಲ! ಆ ವಿಷಯಗಳು ನಮ್ಮ ಮನಸ್ಸಿನೊಳಗೆ ಬರುವುದೇ ದೊಡ್ಡ ತಪ್ಪು, ಇದಕ್ಕಿಂತ ಸಾಧನೆ ಬೇರೊಂದಿಲ್ಲ" ಹೀಗೆ ವಿವರಣೆ ಕೊಟ್ಟರು.

ಸಂಸಾರದಲ್ಲಿದ್ದೂ ಇಲ್ಲದಂತಿರುವುದು ಹೇಗೆ? ಎಂಬುದನ್ನು ಅಕ್ಕಮ್ಮ ಹೀಗೆ ತಿಳಿಸಿದ್ದಾಳೆ.

**ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೇ**
**ಹಾವಿನ ಸಂಗವೇ ಲೇಸು ಕಂಡಯ್ಯಾ**
**ಕಾಯ ವಿಕಾರವ ಕಳೆದು ಕಾಯದಲಿರ್ದರೆ**
**ಕಾಯದ ಸಂಗವೇ ಲೇಸು ಕಂಡಯ್ಯಾ**
**ತಾಯಿ ರಕ್ಕಸಿಯಾದಂತೆ ಕಾಯವಿಕಾರವು**
**ಚನ್ನಮಲ್ಲಿಕಾರ್ಜುನಯ್ಯಾ ನೀನೊಲಿದರೆ**
**ಕಾಯಗೊಂಡಿದ್ದರೆನಬೇಡ ॥**

ಒಂದು ಕಥೆ ಗೋಪಾಲತಾಪಿನಿ ಉಪನಿಷತ್ತಿನಲ್ಲಿನದು. ಗೊಲ್ಲ ಕನ್ನಿಕೆಯರು ದಿನಾಲೂ ಮೊಸರು ಮಾರಲೆಂದು ಮಥುರಾ ನಗರಕ್ಕೆ ಹೋಗುತ್ತಿದ್ದರು. ಹಳ್ಳಿಯಿಂದ ಮಥುರಾ ನಗರಕ್ಕೆ ಹೋಗುವಾಗ ಯಮುನಾ ನದಿ ದಾಟಬೇಕಿತ್ತು. ಒಂದು ದಿನ ಹಾಲು ಮಾರಿ ಹಳ್ಳಿಗೆ ಹಿಂತಿರುಗುವಾಗ ಮಳೆ ಬಂದುದರಿಂದ ಯಮುನಾ ನದಿಯು ಪ್ರವಾಹದಿಂದ ತುಂಬಿ ಹರಿಯುತ್ತಿತ್ತು. ಅವರು ರಾತ್ರಿ ಕಂಗಾಲಾದರು. ಅವರೆಲ್ಲರೂ ಕೃಷ್ಣನ ಭಕ್ತೆಯರಾದ್ದರಿಂದ ಶ್ರೀಕೃಷ್ಣನನ್ನು ನೆನೆದರು. ಒಂದು ವಟುವಿನ ವೇಷದಲ್ಲಿ ಶ್ರೀಕೃಷ್ಣನಲ್ಲಿಗೆ ಬಂದ. ಅವರ ಚಿಂತನೆಯೇನೆಂದು ವಿಚಾರಿಸಿ. ಅವರು ತಮ್ಮ ಸಂಕಟವನ್ನು ಹೇಳಿಕೊಂಡರು. ಅದಕ್ಕೆ ಆ ವಟುವು, "ನಿಮಗೆ ನಾನೊಂದು ಮಂತ್ರ ಹೇಳಿಕೊಡುತ್ತೇನೆ. ಅದು ಮೂರು ಸಾರಿ ಹೇಳಿರಿ, ನಿಮಗೆ ನದಿ ದಾರಿ ಮಾಡಿಕೊಡುವುದು" ಎಂದು ಹೇಳಿದ. ಅವರೆಲ್ಲರೂ 'ಹ್ಞೂಂ' ಎಂದರು. ಆಗ ಹೇಳಿದ "ಶ್ರೀಕೃಷ್ಣ ಪರಮಾತ್ಮನಿಗೆ ಹದಿನಾರು (೧೬) ಸಾವಿರ ಜನ ಹೆಂಡಂದಿರಿದ್ದು, ತೊಂಬತ್ತು (೯೦) ಸಾವಿರ ಮಕ್ಕಳಿದ್ದರೂ ಸಹ, ಆತ ಸಂಸಾರಿಯಲ್ಲ! ಸನ್ಯಾಸಿ, ಸನ್ಯಾಸಿ, ಸನ್ಯಾಸಿ ಎಂದು ಹೇಳಿರಿ, ನದಿ ನಿಮಗೆ ದಾರಿ ಮಾಡಿಕೊಡುವುದು" ಎಂತೆಂದು. ಅದಕ್ಕೆ ಅವರೆಲ್ಲರೂ ಈ ಹುಸಿಯಾದ ಮಾತನ್ನು ಹೇಗೆ ಮಂತ್ರವೆಂದು ಭಾವಿಸಿ ಹೇಳಬೇಕೆಂಬ ಗೊಂದಲಕ್ಕೊಳಗಾದರು. ಅದನ್ನರಿತ ಶ್ರೀಕೃಷ್ಣ "ನೀವೇಕೆ ಅನುಮಾನಿಸುವಿರಿ, ಮೊದಲು ನಾ ಹೇಳಿದ್ದನ್ನು ಹೇಳಿ ನೋಡಿರಿ, ನದಿ ದಾರಿ ಮಾಡಿಕೊಡದಿದ್ದರೆ ಮತ್ತೊಂದು ಮಂತ್ರ ಹೇಳಿಕೊಡುವೆ" ಎಂದು ಹೇಳಿದ. ಅವರೆಲ್ಲರೂ ನದಿಯ ಬಳಿ ಕೈ ಮುಗಿದುಕೊಂಡು ನಿಂತು ಆ ವಟು ಹೇಳಿದ್ದನ್ನು ಮೂರು ಭಾರಿ ಹೇಳಿದರು. ನದಿ ದಾರಿ ಮಾಡಿಕೊಟ್ಟಿತು. ತಿರುಗಿ ನೋಡುವಷ್ಟರಲ್ಲಿ ವಟು ಅಲ್ಲಿ ಕಾಣಲಿಲ್ಲ. ಅಂದು ನದಿ ದಾಟಿ ಮನೆ ಸೇರಿದರು.

ಮರುದಿನ ಪ್ರವಾಹ ಹಾಗೇ ಇತ್ತು. ಅಂದು ಅವರು ಮಥುರಾ ಪಟ್ಟಣಕ್ಕೆ ಹೇಗೆ ಹೋಗಬೇಕೆಂದು ಚಿಂತಿಸಿದ್ದರು. ಅಲ್ಲಿಯೇ ಹತ್ತಿರದಲ್ಲಿ ದುರ್ವಾಸ ಮುನಿಗಳ ಆಶ್ರಮವಿತ್ತು. ಆ ಕನ್ಯೆಯರೆಲ್ಲಾ ದುರ್ವಾಸರ ಹತ್ತಿರ ಹೋಗಿ ಹಾಲು, ಮೊಸರು, ಬೆಣ್ಣೆ ಅವರ ಮುಂದೆ ಇಟ್ಟು, "ನಮಗೆ ನದಿ ದಾಟಲು ಏನಾದರೂ ಉಪಾಯವಿದ್ದರೆ ಹೇಳಿಕೊಡಿ" ಎಂದು ಕೇಳಿಕೊಂಡರು. ಆಗ ದುರ್ವಾಸರು ಅವರು ಕೊಟ್ಟ ಬೆಣ್ಣೆ, ಹಾಲು, ಮೊಸರು ಸೇವಿಸಿ, "ದುರ್ವಾಸ ಮುನಿಗಳು ನಾವು ತಂದ ಹಾಲು, ಬೆಣ್ಣೆ, ಮೊಸರು ತಿಂದದ್ದು ನಾವು ಕಣ್ಣಾರೆ ನೋಡಿದ್ದರೂ ಸಹ ಅವರು ತಿಂದಿಲ್ಲ, ನಿತ್ಯೋಪವಾಸಿ, ನಿತ್ಯೋಪವಾಸಿ, ನಿತ್ಯೋಪವಾಸಿ ಎಂದು ಹೇಳಿರಿ, ನಿಮಗೆ ನದಿ ದಾರಿ ಮಾಡಿಕೊಡುವುದು" ಎಂದು ಹೇಳಿದರು. ಹಾಗೆಯೇ ಆ ಕನ್ಯೆಯರು ಯಮುನಾ ನದಿಗೆ ಕೈಮುಗಿದು ದುರ್ವಾಸರು ಹೇಳಿದ್ದನ್ನು ಮೂರು ಸಾರಿ ಹೇಳಿದರು. ನದಿ ಪುನಃ ಅವರಿಗೆ ದಾರಿ ಮಾಡಿ ಕೊಟ್ಟಿತು. ಇದೇ ಉಂಡೂ ಉಪವಾಸಿ ಬಳಸಿ (ಭೋಗಿಸಿ)ಯೂ ಸನ್ಯಾಸಿ ಎಂಬುದಾಗಿದೆ.

ಪ್ರಕೃತಿ ಕರ್ಮಭೂಮಿ. ನಮಗೆ ಕರ್ಮಗಳನ್ನು ಮಾಡುವ ಅಧಿಕಾರವಿದೆ. ಆದರೆ ಅದರ ಫಲಾಪೇಕ್ಷೆ ಮಾಡಿದರೆ ಮಾತ್ರ ಅತಿಯಾದ ದುಃಖವಿದೆ. ಶರಣರು ಸಂತರು ಬಹುಮಂದಿ ಸಂಸಾರಿಗಳೇ ಆಗಿದ್ದರು. ಅವರೆಲ್ಲ ಕುಳಿತುಕೊಳ್ತಿರಲಿಲ್ಲ. ಅವರು ಕರ್ತವ್ಯದಲ್ಲಿ ಅತೃಪ್ತರಿದ್ದರು. ಜೀವನದಲ್ಲಿ ಸಂತೃಪ್ತರಿದ್ದರು. ಅಂದರೆ! ಆದಷ್ಟು ಒಳ್ಳೆಯ ಕರ್ಮಗಳನ್ನು ಮಾಡಬೇಕೆಂಬ ಛಲ ಅವರಲ್ಲಿತ್ತು. ಆದರೆ ಆ ಕರ್ಮದಿಂದ ಬರುವಂತಹ ಪ್ರತಿಫಲದ ಬಗ್ಗೆ ಅವರೆಂದೂ ಚಿಂತಿಸಲಿಲ್ಲ, ದುಃಖಿಸಲಿಲ್ಲ. ಹಾಗೆ ನಾವೂ ಸಹ ಮನೆ, ಖಜಾನೆ ಎಲ್ಲವನ್ನೂ ತುಂಬಿಸುವ ಪ್ರಯತ್ನ ಮಾಡೋಣ, ತುಂಬೋಣ. ಆದರೆ ಮನಸ್ಸನ್ನು ಮಾತ್ರ ಖಾಲಿ ಇಟ್ಟುಕೊಳ್ಳೋಣ. ಇದನ್ನೇ ಶರಣರು ಮಾಡಿದ್ದು. ಕೊನೆಯದಾಗಿ ಕವಿರತ್ನ ಕಾಳಿದಾಸನೂ ಸಹ ಒಂದು ಶ್ಲೋಕದಲ್ಲಿ ಹೀಗೆ ಹೇಳುತ್ತಾನೆ.

ವಾಗಾರ್ಥ ವಿವ ಸಂಪೃಕ್ತೌ, ವಾಗಾರ್ಥ ಪ್ರತಿಪತ್ತಯೇ ।
ಜಗತಃ ಪಿತಕಾವಂದೇ ಪಾರ್ವತಿ ಪರಮೇಶ್ವರೌ ॥ (ರಾಘವಾಂಕ ಕಾವ್ಯ)

ವಾಕ್ಯ ಅರ್ಥಗಳೆರಡರ ಸಂಬಂಧವಿದ್ದಂತೆ. ಶಿವಶಕ್ತಿಯರ ಈ ಅವಿನಾಭಾವ ಸಂಬಂಧವೇ ಜಗತ್ತು. "ನ ಶಿವೇನ ವಿನಃ ಶಕ್ತಿ; ನ ಶಕ್ತಿ ರಹಿತ ಶಿವಃ" ಇವರಿಬ್ಬರ ಸಂಬಂಧವೂ ಸಹ ಒಂದು ಸಂಸಾರವೇ ಆಗಿದೆ.

ಶಿವನ ಸತಿ ಪಾರ್ವತಿ. ಈಕೆ ಶಿವನ ಶರೀರದ ಅರ್ಧ ಭಾಗವನ್ನು ಆಕ್ರಮಿಸಿಕೊಂಡಿದ್ದಾಳೆ. ಆದ್ದರಿಂದ ಶಿವ ಅರ್ಧನಾರೀಶ್ವರ. ಶಿವನ ಇನ್ನೊಬ್ಬ ಹೆಂಡತಿ ಗಂಗೆ. ಆಕೆ ಶಿವನ ತಲೆಯ ಮೇಲೆ ಕುಳಿತಿದ್ದಾಳೆ. ಅವಳಾದರೂ ಅಲ್ಲೆ ಸುಮ್ಮನೆ ಕುಳಿತಿಲ್ಲ. ಆ ದೇವಜಲವನ್ನು ಬಾಯಿಯಿಂದ ತುಪತುಪನೆ ಉಗುಳುತ್ತಿದ್ದಾಳೆ. ಇದನ್ನು ಕಂಡ ಪಾರ್ವತಿದೇವಿಗೆ ಎಲ್ಲಿಲ್ಲದ ಕೋಪ. ಶಿವನ ವಾಹನ ವೃಷಭ. ಶಕ್ತಿಯ ವಾಹನ ಸಿಂಹ. ಪರಸ್ಪರ ವೈರಿಗಳು. ಮತ್ತೆ ಶಿವನ ಕಂಠಾಭರಣ ಸರ್ಪ. ಇವನ ಮಕ್ಕಳಿಬ್ಬರ ವಾಹನ ಒಂದು ಇಲಿ, ಮತ್ತೊಂದು ನವಿಲು. ಇಂತಹ ಅಲ್ಲೋಲ

ಕಲ್ಲೋಲಹವಾದ ಸಂಸಾರದ ಮಧ್ಯೆಯೂ ಶಿವನು ಮಾತ್ರ "ಶಾಂತಂ ಪದ್ಮಾಸನಸ್ಥಂ" ಎಂಬಂತೆ ಕೈಲಾಸದಲ್ಲಿ ಕಣ್ಣು ಮುಚ್ಚಿಕೊಂಡು ಸದಾ ಆನಂದ ಯೋಗದಲ್ಲಿ ಮಗ್ನನಾಗಿರುತ್ತಾನೆ. ಭಗವಂತನ ಈ ಯೋಗ ಮುದ್ರೆಯ ಲಕ್ಷಣ ಲೋಕಕ್ಕೆ ಪಾಠವಲ್ಲದೆ ಮತ್ತೇನೂ ಅಲ್ಲ. ಇದೇ ಸತ್-ಚಿತ್-ಆನಂದ ಸ್ವರೂಪವು.

ಮಾನವರ ಮರುಳು ಮಾಡಲು
ವೇಷ ಬೇಕು, ಭಾಷೆ ಬೇಕು
ಆದರೆ! ಮಹದೇವನೊಲಿಸಿಕೊಳ್ಳಲು
ಅವೆರಡಕ್ಕೆ ವಿದಾಯ ಹೇಳಿರಬೇಕು
ಮೌನ ಸಾಕು, ಪರಿಶುದ್ಧ ಭಾವ ಬೇಕು
ಜೊತೆಗೆ ಶ್ರೀ ಗುರು ಸಿದ್ಧಲಿಂಗನ
ಕೃಪಾಕಟಾಕ್ಷವಿರಬೇಕು.

# ಸನ್ಯಾಸಿಯ ಲಕ್ಷಣಗಳು

"ಸನ್ಯಾಸಿ" ಎಂದರೆ ಯಾರು? ಆತ ಮೊದಲು ಹೇಗಿದ್ದ? ಹೇಗೆ ಬಂದ? ಏಕೆ ಬಂದ? ಆತನ ನಡೆನುಡಿಗಳು ಹೇಗಿರಬೇಕು?

ಸನ್ಯಾಸ ನಾವು ಭಾವಿಸಿರುವಷ್ಟು ಸಣ್ಣದಲ್ಲ. ಯಾಕೆಂದರೆ ಅದರ ಬಗ್ಗೆ ನಾವು ತಿಳಿದಿರುವುದು ಇಷ್ಟೇ. ಹೆಂಡರು ಮಕ್ಕಳನ್ನು ಬಿಟ್ಟಿರಬೇಕು. ಕಾವಿ ಧರಿಸಿರಬೇಕು, ಭಿಕ್ಷಾವೃತ್ತಿಯಿಂದ ಜೀವನ ತಳ್ಳುತ್ತಿರಬೇಕು. ಸೆರೆ ಕುಡಿದೋ, ಭಂಗಿ ಸೇವಿಸಿಯೋ 'ಆನಂದ ಮಾಡುತ್ತೇನೆ' ಎಂದು ಹೇಳಿಕೊಳ್ಳುತ್ತಾ ತಿರುಗುತ್ತಿರಬೇಕು. ಬಹುಶ: ಇಂಥವರನ್ನು ಬಹಳಷ್ಟು ಜನ ಸನ್ಯಾಸಿಗಳೆಂದು ಭಾವಿಸಿದ್ದಾರೆ, ಅದು ತಪ್ಪು ಕಲ್ಪನೆ.

ಐದಾರು ಹೆಂಡಂದಿರನ್ನು ಮಾಡಿಕೊಂಡು, ಹತ್ತಿಪ್ಪತ್ತು ಮಕ್ಕಳನ್ನವರಿಗೆ ದಯಪಾಲಿಸಿ, ಹಿರಿಯರು ಗಳಿಸಿದ ಸಂಪಾದನೆ ಇರುವವರೆಗೂ ತಿಂದು ತೇಗಿ, ಅದೆಲ್ಲವನ್ನು ಕಳೆದಾದನಂತರ ಅವರನ್ನೆಲ್ಲಾ ಗೋಳಿಗಿಟ್ಟು, ಕಾವಿ ಧರಿಸಿ, ಗಡ್ಡಬಿಟ್ಟು! "ಜೈ ಭೊಂ ಭೊಂ ಭೊಂ" ಎಂದು ಭಂಗಿ ಎಳೆಯುತ್ತಾ! ನಿಶೆಯ ಮತ್ತಿನಲ್ಲಿ ಕಂಡಕಂಡವರನ್ನು ಅವ್ಯಾಚ ಶಬ್ದಗಳಿಂದ ನಿಂದಿಸುತ್ತಾ! ಊರೂರು ಅಲೆದು ಭಿಕ್ಷೆಯಿಂದ ಜೀವನ ಸಾಗಿಸುವವನು ನಿಜವಾದ ಸನ್ಯಾಸಿಯಲ್ಲ. ಸನ್ಯಾಸಾಶ್ರಮಕ್ಕೊಂದು ಪದ್ಧತಿಯಿದೆ. ಹಾಗೆ ಈ ಆಶ್ರಮಕ್ಕೆ ಕಾಲಿಡುವವರೂ ಸಹ ಕೆಲವೊಂದು ರೀತಿನೀತಿ ನಿಯಮಗಳನ್ನು ಪರಿಪಾಲಿಸುವ ಅನಿವಾರ್ಯತೆಯೂ ಇದೆ. ಅದು ಶಾಸ್ತ್ರ ಸಮ್ಮತ. ಅದನ್ನನುಸರಿಸಿದರೆ ಮಾತ್ರ ಅವನು ನಿಜ ಸನ್ಯಾಸಿಯು.

ಆಶ್ರಮಗಳು ನಾಲ್ಕು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಎನ್ನುವವು. ಆಯಾ ಕಾಲ (ವಯೋಮಾನ)ಕ್ಕೆ ತಕ್ಕಂತೆ ಆಯಾ ಆಶ್ರಮಗಳನ್ನು ಆಶ್ರಯಿಸಿ, ಅನುಭವಿಸಿ, ಮತ್ತವುಗಳನ್ನು ದಾಟುತ್ತ ಕೊನೆಯಲ್ಲಿ ಸನ್ಯಾಸಾಶ್ರಮಕ್ಕೆ ಬಂದು ನಿಲ್ಲುವುದೊಂದು ಪದ್ಧತಿ. ಇನ್ನೊಂದು, ಮೊದಲ ಮೂರು ಆಶ್ರಮಗಳ ಪದ್ಧತಿಗಳಲ್ಲಿ ಅರಿವಿಲ್ಲದೆ ಮನ ಬಂದಂತೆ ಅತಿಕ್ರಮಿಸಿ ನಡೆದು, ಕೊನೆಗೊಮ್ಮೆ ತನ್ನ ತಪ್ಪುಗಳ ಅರಿವಾಗಿ, ಪಶ್ಚಾತ್ತಾಪಪಟ್ಟು, "ಇನ್ನು ಮುಂದೆ ಅಂತಹ ಹೇಯ ಕೃತ್ಯಗಳನ್ನು ಮಾಡುವುದಿಲ್ಲ" ಎಂಬ ಸತ್‌ಸಂಕಲ್ಪದಿಂದ ನಿಜ ಸನ್ಯಾಸದಲ್ಲಿ ನೆಲೆ ನಿಲ್ಲುವುದು. ಹೀಗೊಂದು ಮಾರ್ಗ. ಕೊನೆಯದೊಂದು ಮಾರ್ಗ! ಮೊದಲನೆಯ ಬ್ರಹ್ಮಚರ್ಯಾಶ್ರಮದಿಂದ ನೇರ ನೇರ ಕೊನೆಯ ಸನ್ಯಾಸಾಶ್ರಮಕ್ಕೆ ಪಾದಾರ್ಪಣೆ ಮಾಡಿದಂತಹ ಮಹಾಮಹಿಮರಿವರು. ಅಂದರೆ ಗೃಹಸ್ಥ ಮತ್ತು ವಾನಪ್ರಸ್ಥಾಶ್ರಮಗಳಲ್ಲಿ ಹೆಜ್ಜೆಗಳನ್ನಿಡದಂತೆ ಬಂದವರು. ಇಂಥವರ ವಿರಳರು. ಮೊದಲೆರಡು ಮಾರ್ಗದವರು ಬಹಳರು. ಈ ಮಾರ್ಗಗಳ ಮೂಲಕ ಬರುವುದಾದರೂ ಹೇಗೆ? ಒಂದೊಂದಾಗಿ ತಿಳಿಯೋಣ.

ವಶಿಷ್ಟಾದಿ ಮಹಾಮುನಿವರ್ಯರು ಬಸವಾದಿ ಶಿವಶರಣರು ಹಾಗೂ ದಾಸವರೇಣ್ಯರು. ಇವರೆಲ್ಲ ನಾಲ್ಕು ಆಶ್ರಮಗಳ ಸದ್ಬಳಕೆಯಿಂದ, ಮುಕ್ತಿಪಥದತ್ತ ನಡೆದವರು. ಇದಕ್ಕೆಲ್ಲ ಒಂದು ಪದ್ಧತಿಯಿದೆ. ಸಂಸಾರಿಗಳು ಸನ್ಯಾಸಾಶ್ರಮಕ್ಕೆ ಹೆಜ್ಜೆ ಇಡಬೇಕೆಂದರೆ ಮೊದಲು

ಹೆಂಡತಿಯಿಂದ ಅಪ್ಪಣೆ ಪಡೆಯಬೇಕು. ಆಗ ಮಾತ್ರ ಏಕಾಂಗಿಯಾಗಿ ಜೀವನ ನಡೆಸಬಹುದು. ಅಂದರೆ ಸನ್ಯಾಸಾಶ್ರಮದಲ್ಲಿ ನಿರಾಳವಾಗಿರಬಹುದು. ಹೆಂಡತಿಯು ಅಪ್ಪಣೆ ಕೊಟ್ಟಿಲ್ಲವೆಂದರೆ, ಭೌತಿಕವಾಗಿ ದೂರ ಸರಿಯುವಂತಿಲ್ಲ. ಮಾನಸಿಕವಾಗಿ ದೂರವಿರಬಹುದು. ಹಿಂದಿನ ಅಂಕಣದಲ್ಲಿ ಹೇಳಿದೆಯಲ್ಲಾ. ಉಂಡೂ ಉಪವಾಸಿ, ಬಳಸಿಯೂ ಸನ್ಯಾಸಿ ಎಂಬಂತೆ ಇರಬೇಕು. ಹೀಗೂ ಸನ್ಯಾಸಿ ಮಾರ್ಗದಲ್ಲಿ ಜಯ ಸಾಧಿಸಿದವರಿದ್ದಾರೆ.

ಒಮ್ಮೆ ಯಾಜ್ಞವಲ್ಕ ಮಹರ್ಷಿಗಳು ವಿಧಿವತ್ ಸನ್ಯಾಸ ಸ್ವೀಕಾರ ಮಾಡಬೇಕೆಂದು ಯೋಚಿಸಿದರು. ಅವರಿಗೆ ಇಬ್ಬರು ಪತ್ನಿಯರು. ಒಬ್ಬಳು ಕಾತ್ಯಾಯಿನಿ, ಮತ್ತೊಬ್ಬಳು ಮೈತ್ರೇಯಿ. ಹೀಗೆ ಈ ಮೂವರು ಆಗಾಗಲೇ ವಾನಪ್ರಸ್ಥಾಶ್ರಮದಲ್ಲಿದ್ದರು. (ವಾನಪ್ರಸ್ಥಾಶ್ರಮ ಎಂದರೇನು? ಈ ಬಗ್ಗೆ ಈ ಅಂಕಣದ ಕೊನೆಯಲ್ಲಿ ವಿಶ್ಲೇಷಿಸಿರುತ್ತೇವೆ. ಹಾಗೆ ಇನ್ನುಳಿದ ಆಶ್ರಮಗಳ ಬಗ್ಗೆಯೂ ಸಂಕ್ಷಿಪ್ತ ವಿವರಣೆ ಕೊಟ್ಟಿರುತ್ತೇವೆ.) ಯಾಜ್ಞವಲ್ಕರು ಈ ಇಬ್ಬರು ಪತ್ನಿಯರಿಂದ ಸನ್ಯಾಸಾಶ್ರಮಕ್ಕೆ ಕಾಲಿಡಲು ಅನುಮತಿ ಪಡೆಯಬೇಕಿತ್ತು. ಆ ಕಾರಣ ಅವರಿಬ್ಬರನ್ನು ಕರೆದು, ತನ್ನ ಭೌತಿಕ ಸಂಪತ್ತನ್ನು ಅವರಿಬ್ಬರಿಗೆ ಸಮನಾಗಿ ಹಂಚಿ, "ನಾನು ಸನ್ಯಾಸಾಶ್ರಮಕ್ಕೆ ಕಾಲಿಡುತ್ತೇನೆ. ಆದ್ದರಿಂದ ನೀವು ನನಗೆ ಅನುಮತಿ ನೀಡಿರಿ" ಎಂದು ಕೇಳಿಕೊಂಡರು. ಅದಕ್ಕೆ ಕಾತ್ಯಾಯಿನಿ ಒಪ್ಪಿ ತನ್ನ ಭಾಗಕ್ಕೆ ಬಂದ ಸಂಪತ್ತನ್ನು ತೆಗೆದುಕೊಂಡಳು. ಆದರೆ ಮೈತ್ರೇಯಿ ಒಪ್ಪಲಿಲ್ಲ. ಹೀಗೆ ಹೇಳಿದಳು, "ನನಗೆ ಈ ಭೌತಿಕ ಸಂಪತ್ತಿನಲ್ಲಿನ ಪಾಲು ಬೇಕಾಗಿಲ್ಲ. ನೀವು ಮುಂದೆ ಯಾವ ಸಂಪತ್ತನ್ನು ಪ್ರಾಪ್ತಿ ಮಾಡಿಕೊಳ್ಳಬೇಕೆಂದು ಹೊರಟಿರುವಿರೋ, ಆ ಸಂಪತ್ತಿನಲ್ಲಿನ ಪಾಲು ನನಗೆ ಬೇಕಿದೆ. ನಾನಾದರೂ ಇನ್ನು ಮುಂದೆ ನಿಮ್ಮ ಜೊತೆಯಲ್ಲಿದ್ದರೂ ಸಹ ಹೆಂಡತಿಯಂತೆ ಅಧಿಕಾರ ಚಲಾಯಿಸುವುದಿಲ್ಲ. ಹಾಗೆಯೇ ಮನಸ್ಸಿನಲ್ಲಿಯೂ ಸಹ ಪತಿಯೆಂಬ ಭಾವನೆ ಹೊಂದಿರುವುದಿಲ್ಲ. ನಾನೊಬ್ಬ ಸಾಮಾನ್ಯ ಶಿಷ್ಯಳಂತೆ ನಿಮ್ಮೊಂದಿಗೆ ಇದ್ದು, ನಿಮ್ಮ ಜಪ, ತಪ, ಪೂಜೆ ಧ್ಯಾನಾದಿಗಳಿಗೆ ಸಹಾಯ ಮಾಡುತ್ತಾ, ಸೇವೆ ಸಲ್ಲಿಸುತ್ತಾ ಆ ಸೇವೆಯಿಂದ ನಿಮ್ಮಲ್ಲಿ ಆ ಭಗವಂತನನ್ನು ಕಾಣುವೆ. ಅದರಿಂದ ಆ ಪಾಲು ಸಿಗುವಂತೆ ನನಗೆ ಅನುಗ್ರಹಿಸಿ" ಎಂದು ಬೇಡಿಕೊಂಡಳು. ಈ ಮಾತುಗಳನ್ನು ಕೇಳಿದ ಯಾಜ್ಞವಲ್ಕರು ಅವಳಿಗೆ ಅದ್ವೈತ ಜ್ಞಾನವನ್ನು ಉಪದೇಶಿಸಿದರು ಎಂಬ ಕಥೆ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಪ್ರತಿಪಾದಿಸಲಾಗಿದೆ.

ಕೇಳಿರಯ್ಯ ಮಾನವರೆ
ಗಂಡ ಹೆಂಡಿರ ಮನಸ್ಸು ಒಂದಾಗಿದ್ದರೆ
ದೇವರ ಮುಂದೆ ನಂದಾದೀವಿಗೆ ಮುಡಿಸಿದ ಹಾಗೆ
ಗಂಡ ಹೆಂಡಿರ ಮನಸ್ಸು ಬೇರಾದರೆ
ಗಂಜಲದೊಳಗೆ ಹಂದಿ ಹೊರಳಾಡಿ
ಒಂದರ ಮೇಲೊಂದು ಬಂದು ಮೂಸಿದ ಹಾಗೆ
ಎಂದ ನಮ್ಮ ಅಂಬಿಗರ ಚೌಡಯ್ಯ

ಅನ್ಯೋನ್ಯ ದಾಂಪತ್ಯದ ಮಹತ್ವ ತಿಳಿಸಿದ್ದಾನೆ. ಹೀಗೆ ಯಾಜ್ಞವಲ್ಕ ಕಾತ್ಯಾಯಿನಿ

ಮತ್ತು ಮೈತ್ರೇಯಿಯರ ದಾಂಪತ್ಯದ ಹೊಂದಾಣಿಕೆಯ ಜೀವನದಿಂದಲೇ ಮೋಕ್ಷ ಪ್ರಾಪ್ತಿಯಾಗುವುದರಲ್ಲಿ ಸಂದೇಹವೇ ಇಲ್ಲ.

ಹಿಂದೆ ತಿಳಿಸಿರುವಂತೆ ಸನ್ಯಾಸಾಶ್ರಮದ ಎರಡನೆಯ ಮಾರ್ಗ. ಅಂದರೆ ಅಜ್ಞಾನದಿಂದ ಮೊದಲಿನಾಶ್ರಮಗಳಲ್ಲಿ ಮಾಡಬಾರದ ತಪ್ಪುಗಳನ್ನೆಲ್ಲಾ ಮಾಡಿ, ಮತ್ತೆ ಯಾವುದೋ ಕಾರಣದಿಂದ ತಾ ಮಾಡಿದ ತಪ್ಪುಗಳ ಅರಿವಾಗಿ, ಅದಕ್ಕೆ ಪಶ್ಚಾತ್ತಾಪಪಟ್ಟು "ಇನ್ನು ಮುಂದೆ ತಾನಂತಹ ಪಾಪಕರ್ಮಗಳನ್ನು ಮಾಡುವುದಿಲ್ಲ" ಎಂಬ ಸತ್‌ಸಂಕಲ್ಪದಿಂದ ಕಾಮಾದಿ ಅರಿಷಡ್ವರ್ಗಗಳನ್ನು ಗೆದ್ದು, ಮಹಾಜ್ಞಾನಿಯಾಗಿ ಸತ್ ಸನ್ಯಾಸಾ ಮಾರ್ಗದ ಮೂಲಕ ಜೀವನ್ಮುಕ್ತಿ ಪಡೆವುದು.

ಬುದ್ಧ ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ತನ್ನ ಶಿಷ್ಯರೊಂದಿಗೆ ಹೋಗುತ್ತಿದ್ದ. ಆಗೊಬ್ಬ ಬುದ್ಧನಿಗೆ ಹೀಗೆ ಹೇಳಿದ. "ಸ್ವಾಮಿ ಈ ಮಾರ್ಗದಲ್ಲಿ ಹೋಗಬೇಡಿರಿ. ಮುಂದೊಬ್ಬ ಕ್ರೂರಿಯಿದ್ದಾನೆ. ಅವನಿಗೆ ಕರುಣೆಯೆಂಬುದೇ ಇಲ್ಲ. ಹೋದವರನ್ನೆಲ್ಲಾ ಕೊಂದು ಅವರ ಬೆರಳುಗಳನ್ನು ಕತ್ತರಿಗೆ ತನ್ನ ಕೊರಳೊಳಗೆ ಹಾಕಿಕೊಳ್ಳುತ್ತಾನೆ. ಅವನ ಹೆಸರು ಅಂಗುಲಿಮಾಲ" ಎಂತೆಂದು.

"ನನಗೆ ನೀನು ಈ ವಿಷಯ ತಿಳಿಸದಿದ್ದರೆ ಬಹುಶ: ನಾನು ಬೇರೊಂದು ಹಾದಿ ಹಿಡಿಯುತ್ತಿದ್ದೆನೋ ಏನೋ? ಆದರೆ ಈ ವಿಷಯ ನನಗೀಗ ತಿಳಿದು ಹೋಗಿದೆ. ಆದ್ದರಿಂದ ಈಗ ನಾನು ಈ ಮಾರ್ಗ ಬಿಟ್ಟು ನಡೆಯಲಾರೆ. ಏಕೆಂದರೆ ಕತ್ತು ಕೊಯ್ಯುವೆನೆಂಬುವವನೊಬ್ಬನಿಗೆ ಕೊಯ್ಯಿಸಿಕೊಳ್ಳುವನೊಬ್ಬ ಬೇಕಲ್ಲವೇ? ಅಲ್ಲದೆ ಅವನಿಗೆ ನನ್ನ ಕುತ್ತಿಗೆ ಕೊಯ್ಯುವುದರಿಂದ ಸ್ವಲ್ಪ ಹೊತ್ತು ಶಾಂತಿ ಸಿಗುವುದೆಂದಾದರೆ ಅದಕ್ಕಿಂತ ಸಾರ್ಥಕತೆ ಮತ್ತೊಂದೇನಿದೆ?" ಎಂದು ಹೇಳುತ್ತಾ ಬುದ್ಧ ಹೆಜ್ಜೆ ಹಾಕಿದ. ಆದರೆ ಬುದ್ಧನ ಹಿಂದಿದ್ದ ಕೆಲ ಪುಕ್ಕಲ ಶಿಷ್ಯರು ಹೆದರಿ ಅಲ್ಲೇ ಉಳಿದುಬಿಟ್ಟರು. ಕೆಲವರು ವಿಧಿಯಿಲ್ಲವೆಂದು ಭಾವಿಸಿ ಬುದ್ಧನ ಹಿಂದೆ ಹೆಜ್ಜೆ ಹಾಕಿದರು.

ಅಂಗುಲಿಮಾಲ ಒಂದು ಸಾವಿರ ಜನರನ್ನು ಕೊಲ್ಲುವುದಾಗಿ ಶಪಥ ಮಾಡಿದ್ದ. ಆಗಾಗಲೇ ಒಂಬೈನೂರಾ ತೊಂಬತ್ತೊಂಬತ್ತು ಜನರನ್ನು ಕೊಂದಾಗಿತ್ತು. ಇನ್ನೊಬ್ಬರ ಆಹುತಿ ಬೇಕಿತ್ತು. ಬಹಳ ದಿನಗಳಿಂದಲೂ ಕಾಡಿನಲ್ಲಿ ಕಾದು ಕುಳಿತಿದ್ದ. ಯಾರೊಬ್ಬರೂ ಸಿಕ್ಕಿರಲಿಲ್ಲ. ಅಂದು ಬುದ್ಧ ತನ್ನ ಪರಿವಾರದವರೊಂದಿಗೆ ಬರುತ್ತಿರುವುದನ್ನು ನೋಡಿದ ಅಂಗುಲಿಮಾಲ ಸಂತೋಷಪಟ್ಟ. ಆದರೆ ಅಗುಂಲಿಮಾಲನಲ್ಲಿ ಏನೋ ಒಂದು ಪರಿವರ್ತನೆ ಕಂಡುಬಂತು. ಅವನಲ್ಲಿದ್ದ ಕ್ರೂರತ್ವವೇಕೋ ದೂರ ಸರಿದು ಶಾಂತತ್ವ ಹತ್ತಿರವಾಗುತ್ತಿತ್ತು. ಇದು ವೈಜ್ಞಾನಿಕವಾಗಿಯೂ ಸತ್ಯ. ಮಹಾನ್ ತಪಸ್ವಿಗಳ ದಿವ್ಯ ತೇಜಸ್ಸು (Aura) ಅವರಿದ್ದಲ್ಲಿಂದ ಅದೆಷ್ಟೋ ದೂರದವರೆಗೂ ಪ್ರಭಾವ ಬೀರುವುದೆಂದು ಎಲ್ಲೋ ಓದಿದ್ದೆ. ಭಗವಾನ್ ಬುದ್ಧ ಮತ್ತು ಅದ್ವೈತ ಶಿಖಾಮಣಿ ಶಂಕರಾಚಾರ್ಯರಂತಹ ತಪೋ ತೇಜಸ್ಸು ಸುಮಾರು ನೂರು ಕಿಲೋಮೀಟರ್‌ಗಳಷ್ಟು ದೂರ ಪ್ರಭಾವಿಸುವುದಂತೆ. ಬಹುಶ: ನಮ್ಮ ದಾರ್ಶನಿಕರು ದೇವಾಲಯುದಲ್ಲಿರುವಂತಹ ದೇವರುಗಳಿಗೆ ಪ್ರಭಾವಳಿಯೆಂಬುದೊಂದನ್ನು ಇಟ್ಟು ತೋರಿಸಿರುವರು. ಇದು ವೈಜ್ಞಾನಿಕವಾಗಿಯೂ ಸತ್ಯವಾದುದು. ಆದ್ದರಿಂದ ಅಂಗುಲಿಮಾಲ

ಬುದ್ಧನಿಗೆ ಕೂಗಿ ಕೂಗಿ ಹೇಳಿದ. "ದಯಮಾಡಿ ನೀವು ಮುಂದೆ ಬರಬೇಡಿ, ಬಂದು ನನ್ನ ಕೈಯಿಂದ ಸಾಯಬೇಡಿರಿ. ನಿಮಗೆ ಪ್ರಾಣಭಿಕ್ಷೆ ನೀಡಿದ್ದೇನೆ. ಹಿಂತಿರುಗಿ ಹೋಗಿರಿ" ಎಂದು. ಆದರೆ ಬುದ್ಧ ಸ್ವಲ್ಪವೂ ಹಿಂಜರಿಯಲಿಲ್ಲ. ಮುಂದೆ ಮುಂದೆ ಬರುತ್ತಲೇ ಇದ್ದ. ಅಂಗುಲಿಮಾಲನ ಹತ್ತಿರವಾಗಿಯೇ ಮತ್ತೆ ಮುಂದೆ ಮುಂದೆ ನಡೆದರು. ಆದರೆ ಅಂಗುಲಿಮಾಲ ಅವರ ಹಿಂದೆಯೇ ಹೆಜ್ಜೆ ಹಾಕಿ, "ನಾನು ಹೇಳಿದು ಅರ್ಥವಾಗುತ್ತಿದೆಯೋ ಇಲ್ಲವೋ? ಅಥವಾ ಕೇಳಿಸುತ್ತಿದೆಯೋ ಇಲ್ಲವೋ? ನೀವು ಕಿವುಡರಲ್ಲ ತಾನೇ? ನಿಲ್ಲಿ ಅಲ್ಲೇ ನಿಲ್ಲಿ. ಮುಂದಡಿ ಇಡಬೇಡಿರಿ" ಹೀಗೆ ಕಿರುಚಿಕೊಂಡ.

ಬುದ್ಧ ಹೇಳಿದ, "ಈ ಬುದ್ಧ ಎಂದೋ ನಿಂತಿದ್ದಾನೆ. ನೀನು ನಿಲ್ಲು" ಎಂತೆಂದು.

"ಚಲಿಸುತ್ತಲೇ ನಿಂತಿರುವೆನೆಂದು ಹೇಳುತ್ತಿರುವೆಯಲ್ಲಾ? ಇದರ ಅರ್ಥವೇನು? ನೀನು ಹುಚ್ಚನಲ್ಲ ತಾನೇ?"

"ನಾನು ಹೇಳುತ್ತಿರುವುದು ಚಲಿಸುತ್ತಿರುವ ಶರೀರದ ವಿಷಯವನ್ನಲ್ಲ. ನಿನ್ನ ಮನಸ್ಸಿನ ವಿಷಯವನ್ನು ನಿನ್ನ ಮನಸ್ಸು ನಿಂತಿಲ್ಲ, ಚಲಿಸುತ್ತಲೇ ಇದೆ. ನಮ್ಮನ್ನೆಲ್ಲ ನೋಡಿ ಕತ್ತಿ ಮಸಿಯುವಾಗಲೂ ನಿನ್ನ ಮನಸ್ಸು ಚಲಿಸುತ್ತಿತ್ತು. ಈಗಲೂ ನಿನ್ನ ಮನಸ್ಸು ಕೊಲ್ಲಲೋ, ಬಿಡಲೋ ಎಂದು ಚಲಿಸುತ್ತಲೇ ಇದೆ. ಮೊದಲು ಆ ನಿನ್ನ ಮನಸ್ಸನ್ನು ನಿಲ್ಲಿಸು".

"ನನಗೆ ಯಾರೊಬ್ಬರ ಮಾತನ್ನು ಕೇಳಿ ಅಭ್ಯಾಸವಿಲ್ಲ. ಸುಮ್ಮನೆ ನನ್ನ ಮುಂದಕ್ಕೆ ಬಾ, ನಿನ್ನ ಕತ್ತನ್ನು ಕತ್ತರಿಸುವೆ".

"ಆಯಿತು ಸಾಯುವ ಮುನ್ನ ನನ್ನೊಂದು ಮಾತು ನಡೆಸಿಕೊಡುವೆಯಾ?"

"ಏನು ಹೇಳು. ಆ ಒಂದು ಮಾತಿಗಾಗಿಯೇ ನಾನು ಇಷ್ಟೊಂದು ಜನರನ್ನು ಕೊಂದಿರುವುದು. ನಿನ್ನ ಮಾತೇನು ಹೇಳು, ನಡೆಸಿಕೊಡುತ್ತೇನೆ".

"ಆ ಮರದಿಂದ ಮೊದಲೊಂದೆರೆಡು ಎಲೆ ಕಿತ್ತುಕೊಂಡು ಬಾ. ಆಮೇಲೆ ಹೇಳುತ್ತೇನೆ".

ಅಂಗುಲಿಮಾಲನು, "ಎಲೆಗಳನ್ನೇಕೆ? ಕೊಂಬೆಯನ್ನೇ ಕಡಿದು ತರುವೆ" ಎಂದೆನ್ನುತ್ತಾ ಮರದ ಕೊಂಬೆಯೊಂದನ್ನು ತಂದು ಬುದ್ಧನ ಮುಂದೆ ಇಟ್ಟು, "ಈಗೇನು ಮಾಡಲಿ ಹೇಳು?" ಎಂದು ಜೋರಾಗಿ ಕೇಳಿದ.

"ಈಗೇನು ಮಾಡುವುದು ಬೇಡ. ಕತ್ತರಿಸಿರುವ ಈ ಕೊಂಬೆಯನ್ನು ಪುನ: ಆ ಮರಕ್ಕೆ ಅಂಟಿಸು".

"ಈಗ ನನಗೆ ಖಾತ್ರಿಯಾಯಿತು. ನೀನು ನಿಜವಾಗಿಯೂ ಒಬ್ಬ ಹುಚ್ಚನೇ ಸರಿ. ಯಾಕೆಂದರೆ ಯಾರೊಬ್ಬರು ಕತ್ತರಿಸಬಹುದೇ ವಿನ: ಅಂಟಿಸಲು ಸಾಧ್ಯವಿಲ್ಲ".

"ಅಂಗುಲಿಮಾಲ, ಮುರಿಯುವ ಕತ್ತರಿಸುವ ಕೆಲಸ ಚಿಕ್ಕ ಮಕ್ಕಳು ಬೇಕಾದರೂ

ಮಾಡುತ್ತಾರೆ. ಅದಕ್ಕೆ ನಿನ್ನಂತಹ ಪೈಲ್ವಾನನೇ ಬೇಕಾಗಿಲ್ಲ. ಕತ್ತರಿಸಿದ್ದನ್ನು ಕೂಡಿಸುವ ಶಕ್ತಿ ನಿನ್ನಲ್ಲಿಲ್ಲವೆಂದ ಮೇಲೆ ಕತ್ತರಿಸುವ ಅಥವಾ ಕೊಲ್ಲುವ ಅರ್ಹತೆಯೂ ನಿನಗಿರಲಾರದು. ನೀನು ಇಲ್ಲಿಯವರೆಗೆ ಜನರನ್ನು ಸಾಯಿಸಿದ್ದೇ ತಪ್ಪು".

ಬುದ್ಧನ ತತ್ವೋಪದೇಶ ಕೇಳುತ್ತಾ ಅಂಗುಲಿಮಾಲ ಸಂಪೂರ್ಣ ಬದಲಾದ. ಕೈಯೊಳಗಿನ ಕತ್ತಿ ಕೆಳಬಿಟ್ಟ. ಪಶ್ಚಾತ್ತಾಪಪಡುತ್ತಾ ಬುದ್ಧನ ಪಾದಗಳಿಗೆರಗಿದ. "ಪ್ರಭು, ನನ್ನ ತಪ್ಪನ್ನು ಕ್ಷಮಿಸಿಬಿಡು" ಎಂದು ದು:ಖಿಸುತ್ತಾ ಬುದ್ಧನ ಪಾದಗಳ ಮೇಲೆ ಕಣ್ಣೀರಧಾರೆ ಹರಿಸಿದ.

ಬುದ್ಧ ಅವನನ್ನು ಕೈಹಿಡಿದು ಮೇಲೆತ್ತಿ, "ಅಂಗುಲಿಮಾಲ ಇಂದು ನೀನು ಉಪಲಬ್ಧಿಯಾದೆ. ಬ್ರಹ್ಮಜ್ಞಾನಿಯಾದೆ. ಸನ್ಯಾಸಿಯಾದೆ" ಎಂದರಷ್ಟೆ! ಬುದ್ಧನ ಹಿಂದೆ ಬಂದಿದ್ದ ಶಿಷ್ಯರಲ್ಲೊಬ್ಬ! "ನಾವು ನಿಮ್ಮೊಂದಿಗೆ ಹತ್ತಾರು ವರ್ಷಗಳಿಂದಿದ್ದೇವೆ. ನೀವೆಂದೂ ನಮ್ಮೊಬ್ಬರಿಗೂ ಹೀಗೆ ಹೇಳಿಯೇ ಇಲ್ಲ. ಆದರೆ ಇಂದು ಬಂದ ಈ ಕೊಲೆಗಡುಕ ಅಂಗುಲಿಮಾಲನಿಗೆ ಬ್ರಾಹ್ಮಣನಾದೆ, ಉಪಲಬ್ಧಿಯಾದೆ, ಸನ್ಯಾಸಿಯಾದೆ ಎಂದು ಹೇಳುತ್ತಿರುವುದು ಅದೆಷ್ಟು ಸರಿ?" ಎಂದು ಮೂಗು ಮುರಿದುಕೊಂಡ. ಬುದ್ಧ ಏನ್ನನ್ನೂ ಮಾತನಾಡಲಿಲ್ಲ. ಆದರೆ ಅವರಲ್ಲಿ ಅಂಗುಲಿಮಾಲನ ಮೇಲೆ ಈರ್ಷೆ ಹೊಟ್ಟೆಕಿಚ್ಚು ಹೆಚ್ಚಾಗುತ್ತಾ ಬಂತು. ಅದರಲ್ಲಿ ಕೆಲವರಿಗೆ ಅಂಗುಲಿಮಾಲನನ್ನು ಕೊಂದು ಬಿಡಬೇಕೆನ್ನುವಷ್ಟರ ಮಟ್ಟಿಗೆ ಮನಸ್ಸಿನಲ್ಲಿ ದ್ವೇಷ ಹುಟ್ಟಿತು.

ಬುದ್ಧನಿಗೆ ಅದೆಲ್ಲ ಅರ್ಥವಾಯಿತು. ಆಗ ಬುದ್ಧ ಅವರಿಗೆ "ಈ ವ್ಯಕ್ತಿ ನಿಮಗೆ ಅಪರಿಚಿತ. ಆದರೀತ ನಿಮ್ಮೆಲ್ಲರಿಗಿಂತ ಮುಂಚಿತವಾಗಿ ಆಧ್ಯಾತ್ಮದ ಜಿಗಿತವನ್ನು ಜಿಗಿಯಬಲ್ಲ. ಯಾಕೆಂದರೆ ಈತ ಇಲ್ಲಿಯವರೆಗೂ ಹತ್ಯೆಗಳನ್ನು ಮಾಡಿ ಮಾಡಿ ಇಂದಿಗೆ ಅದರಿಂದ ಮುಕ್ತನಾಗಿದ್ದಾನೆ. ಆದರೆ ನೀವಿಲ್ಲಿಯವರೆಗೂ ಹತ್ಯೆಗಳನ್ನು ಮಾಡಿಲ್ಲವಾದರೂ ಈಗೀಗ ನಿಮ್ಮ ಮನಸ್ಸಿನಲ್ಲಿ ಹತ್ಯೆ ಮಾಡುವ ಬಯಕೆ ಹುಟ್ಟಿದೆ. ಅಲ್ಲದೆ ಮುಂದೆ ನನ್ನುತ್ತರಾಧಿಕಾರಿಯಾಗಬೇಕೆಂಬ ದುರ್ಬುದ್ಧಿಯೂ ಹುಟ್ಟಿ ಬಂದಿದೆ. ನೀವು ಇಲ್ಲಿಯವರೆಗೂ ಮಾಡಿರುವ ಸಾಧನೆ ವ್ಯರ್ಥ. ಸಾಧನೆಗಳಿಲ್ಲದಿದ್ದರೂ ಈತ ಸಮರ್ಥ. ಇದಕ್ಕೆ ಹೆಚ್ಚು ಹೊತ್ತೇನು ಕಾಯಬೇಕಾಗಿಲ್ಲ. ಮುಂದೆ ನಾವು ಗ್ರಾಮ ಸೇರಿಕೊಂಡಾಗ ಇದೆಲ್ಲವೂ ಸಾಬೀತಾಗುವುದು" ಎಂದು ಹೇಳಿದ. ಮುಂದೊಂದು ಊರು ಸೇರಿಕೊಂಡರು. ಬುದ್ಧನಾಗ ಅಂಗುಲಿಮಾಲನನ್ನು ಕರೆದು ಭಿಕ್ಷೆಯ ಪಾತ್ರೆಯನ್ನು ಅವನ ಕೈಗೆ ಕೊಟ್ಟು, "ಅಂಗುಲಿಮಾಲ ಇಂದು ನೀನೇ ಈ ಗ್ರಾಮದೊಳಗೆ ಹೋಗಿ ಭಿಕ್ಷೆ ಬೇಡಿಕೊಂಡು ಬರಬೇಕು" ಎಂದು ಹೇಳಿ ಕಳುಹಿಸಿದ.

ಬುದ್ಧನ ಹಿಂದೆ ಅಂಗುಲಿಮಾಲ ಬಂದಿರುವ ವಿಷಯ ಊರ ಮಂದಿಗೆಲ್ಲಾ ಗೊತ್ತಾಗಿತ್ತು. ಅಂಗುಲಿಮಾಲನೇ ಇಂದು ಭಿಕ್ಷೆಗೆ ಬರುವನೆಂಬ ವಿಷಯವೂ ಊರಿನ ಜನರಿಗೆಲ್ಲಾ ತಿಳಿದಿದ್ದೂ ಆಯಿತು. ಆ ಕೂಡಲೇ ಊರಿನವರೆಲ್ಲ ಒಂದು ನಿರ್ಧಾರಕ್ಕೆ ಬಂದರು. ಯಾಕೆಂದರೆ ಅಂಗುಲಿಮಾಲನ ಹೆಸರು ಕೇಳಿದರೆ ಸಾಕು, ಎಂತಹ ಸಾಮ್ರಾಟನೂ ಸಹ ಹೆದರುತ್ತಿದ್ದ. ಅಂದಮೇಲೆ ಅಂತಹ ಕ್ರೂರಿ ಊರೊಳಗೊಬ್ಬನೆ ನಿರಾಯುಧನಾಗಿ ಬರುತ್ತಿರುವಾಗ, ಅವನಿಗೆ ಸರಿಯಾದ ಶಿಕ್ಷೆ ಕೊಡಬೇಕೆಂದು ಭಾವಿಸಿ, ಊರ ಜನರೆಲ್ಲರೂ ತಮ್ಮ ತಮ್ಮ ಮನೆಯ

ಬಾಗಿಲುಗಳನ್ನು ಮುಚ್ಚಿಕೊಂಡರು. ಪ್ರತಿಯೊಬ್ಬರೂ ಮಾಳಿಗೆಯ ಮೇಲೆ ಕುಳಿತುಕೊಂಡು ಭಿಕ್ಷೆಗೆ ಬಂದ ಅಂಗುಲಿಮಾಲನಿಗೆ ಕಲ್ಲು, ಕವಣೆ, ಕತ್ತಿ, ಕೊಡಲಿ, ಬರ್ಚಿಗಳಿಂದ ಹೊಡೆದೊಡೆದು ಘಾಸಿಗೊಳಿಸಿದರು. ಅಂಗುಲಿಮಾಲನ ಶರಿರವೆಲ್ಲ ರಕ್ತಸಿಕ್ತವಾಯಿತು. ಆದರೆ ಈ ಹಿಂದೆ ಕ್ರೂರಿಯಾಗಿದ್ದ ಅಂಗುಲಿಮಾಲ ಯಾರೊಬ್ಬರಿಗೂ ಒಂದೇಒಂದು ಅವಾಚ್ಯ ಶಬ್ದವನ್ನೂ ಪ್ರಯೋಗಿಸಲಿಲ್ಲ. ಶಾಂತ ಸ್ವಭಾವದಿಂದ ಭಿಕ್ಷೆ ಬೇಡಿದ. ಕೊನೆಗೆ ಬರಿ ಕೈಯಿಂದ ಹಿಂದಿರುಗಿ ಬುದ್ಧನಲ್ಲಿಗೆ ಬಂದು ತಲೆ ತಗ್ಗಿಸಿಕೊಂಡು ನಿಂತ.

ಬುದ್ಧನೇ ಅಂಗುಲಿಮಾಲನಲ್ಲಿಗೆ ಬಂದು, "ಅಷ್ಟೊಂದು ಜನ ನಿನ್ನ ಮೇಲೆ ಕಲ್ಲು ಕತ್ತಿಗಳನ್ನೆಸೆದು ನಿನ್ನ ಹೀಗೆ ಹಿಂಸೆಗೊಳಪಡಿಸಿರುವರಲ್ಲ. ಇದರಿಂದ ನಿನಗೇನೂ ಅನಿಸಲಿಲ್ಲವೆ?" ಎಂದು ಪ್ರಶ್ನಿಸಿದ.

ಅಂಗುಲಿಮಾಲನದಕ್ಕೆ, "ನಾನು ನಿನ್ನೆಯವರೆಗೆ ಹೇಗೆ ಮೂಢನಾಗಿದ್ದೆನೋ ಹಾಗೆಯೇ ಅವರಿನ್ನೂ ಮೂಢರಾಗಿಯೇ ಉಳಿದಿದ್ದಾರೆ ಎಂದೆನಿಸಿತು. ಪ್ರಭು, ಆದರೆ ನನ್ನದೊಂದು ಪ್ರಾರ್ಥನೆ. ನೀನು ಹೇಗೆ ನನ್ನಂತಹ ಮಹಾಕ್ರೂರಿಯನ್ನು ಕ್ಷಮಿಸಿದೆಯೋ! ಹಾಗೆ ಅವರನ್ನೂ ಕ್ಷಮಿಸಿಬಿಡು" ಎಂದು ಕೇಳಿದ.

ಆಗ ಬುದ್ಧ ತನ್ನ ಶಿಷ್ಯಂದಿರಿಗೆಲ್ಲ ಹೇಳಿದ್ದ, "ನೋಡಿದಿರಾ ಈತನನ್ನು, ನಿಮ್ಮಂತೆ ಈತನು ಯಾವೊಂದು ಆಚಾರ ವಿಚಾರಗಳನ್ನು ಪರಿಪಾಲಿಸಲಿಲ್ಲ. ನಿಮ್ಮಷ್ಟು ಸಮಯ ಹಾಳು ಮಾಡಿಕೊಳ್ಳಲೂ ಇಲ್ಲ. ಒಂದೇ ಕ್ಷಣದಲ್ಲಿ ರಾಗದ್ವೇಷಗಳನ್ನು ಗೆದ್ದುಬಿಟ್ಟ. ಈತನೇ ನಿಜವಾದ ಬ್ರಾಹ್ಮಣ" ಎಂದು.

ಇತಿಹಾಸದ ಪುಟಗಳನ್ನು ತಿರುವಿ ನೋಡಿದಾಗ ಇಂತಹ ಮಹಾಮಹಿಮರು ಅನೇಕರಾಗಿ ಹೋಗಿದ್ದಾರೆ. 'ವೇಮಣ್ಣ' ಮಹಾನ್ ವ್ಯಭಿಚಾರಿ. ಆತ ಮುಂದೆ ದೊಡ್ಡ ಯೋಗಿಯಾದ. ಉರಿಲಿಂಗ ಪೆದ್ದಿ ದೊಡ್ಡ ಕಳ್ಳ. ಮುಂದ ಆತ ದೊಡ್ಡ ಶರಣನಾದ. ಇದಕ್ಕವರು ಬರೆದಿರುವ ವಚನಗಳೇ ಸಾಕ್ಷಿ. ರತ್ನಾಕರ ಮಹಾಕ್ರೂರಿ. ಮುಂದೆ ಆತ ವಾಲ್ಮೀಕಿ ಎನಿಸಿಕೊಂಡ, ರಾಮಾಯಣ ಬರೆದ.

ಮೂರನೆಯದಾಗಿ ಬ್ರಹ್ಮಚರ್ಯದಿಂದ ಸನ್ಯಾಸಕ್ಕೆ ಪಾದಾರ್ಪಣೆ ಮಾಡುವುದು. ಇದಕ್ಕೆ ತಾವೇ ನೇರ ಹೋಗುವಂತಿಲ್ಲ. ಯಾಕೆಂದರೆ ಈ ಹಿಂದೆ ತಿಳಿಸಿರುವಂತೆ ಸಂಸಾರಿಗಳು ಹೆಂಡತಿಯ ಅಪ್ಪಣೆಯನ್ನು ಪಡೆದು ಹೇಗೆ ಸನ್ಯಾಸಾಶ್ರಮಕ್ಕೆ ಕಾಲಿಡುತ್ತಾರೆಯೋ ಹಾಗೆ, ಇವರಾದರೋ ತಾಯಿಯ ಅಪ್ಪಣೆಯನ್ನು ಪಡೆದೇ ಸನ್ಯಾಸಾಶ್ರಮಕ್ಕೆ ಹೆಜ್ಜೆ ಇಡಬೇಕು. ಇದು ಶಾಸ್ತ್ರ ಸಮ್ಮತವೂ ಸಹ.

ಅದ್ವೈತ ಶಿಖಾಮಣಿ ಶಂಕರಾಚಾರ್ಯರಿಗೆ ಸಂಸಾರಿಯಾಗಬೇಕೆಂದು ಇಚ್ಛೆ ಇರಲಿಲ್ಲ. ಆದರೆ ತಾಯಿ ಮಾತ್ರ ಸನ್ಯಾಸಕ್ಕೆ ಒಪ್ಪಿಗೆ ಕೊಟ್ಟಿರಲಿಲ್ಲ. ಹೀಗಿರಲೊಮ್ಮೆ ತಾಯಿ ಮತ್ತು ಮಗ ಬಟ್ಟೆ ಸೆಳೆಯಲೆಂದು ನದಿಗೆ ಹೋಗಿದ್ದರು. ತಾಯಿ ಬಟ್ಟೆ ಸೆಳೆಯುತ್ತಿದ್ದರೆ, ಶಂಕರರು ತಾಯಿಗಿಂತ

ಸ್ವಲ್ಪ ದೂರದಲ್ಲಿ ಈಜಾಡುತ್ತಿದ್ದರು. ಹೀಗೆ ಸ್ವಲ್ಪ ಸಮಯ ಕಳೆದ ನಂತರ ಶಂಕರರು ಒಂದು ಉಪಾಯ ಮಾಡಿದರು. ತಾವು ದಡದ ಹತ್ತಿರವೇ ನೀರೊಳಗೆ ನಿಂತು ತಮ್ಮ ಸುತ್ತಲೂ ನೀರಿನೊಳಗೆ ಕೆಂಪು ಬಣ್ಣವನ್ನು ಚಲ್ಲಿದರು. ಆ ನೀರು ರಕ್ತದಂತೆ ಕಂಡಿತು. ಕೂಡಲೇ ಶಂಕರರು ತಾಯಿಯನ್ನು ಕುರಿತು, "ಅಮ್ಮಾ ನನ್ನ ಕಾಲನ್ನು ಮೊಸಳೆ ಹಿಡಿದುಕೊಂಡಿದೆ. ಬಿಡಿಸಿಕೊಳ್ಳಲಾಗುತ್ತಿಲ್ಲ, ಬಾರಮ್ಮ ಕಾಪಾಡು" ಎಂದು ಅಳುವವರ ಹಾಗೆ ನಟಿಸಿ ಚೀರಾಡಿದರು.

ತಾಯಿ ಓಡೋಡಿ ಬಂದು ಮಗನ ಕೈಹಿಡಿದು ಎಳೆಯುತ್ತಾ, "ನಿನ್ನ ಶಕ್ತಿಯನ್ನೆಲ್ಲಾ ಹಾಕಿ ಕಾಲನ್ನು ಕಿತ್ತುಕೊಂಡು ಮೇಲೆ ಬಾ" ಎಂದಳು.

"ಇಲ್ಲಮ್ಮಾ, ಅದು ಸಾಮಾನ್ಯ ಮೊಸಳೆಯಲ್ಲ. ದೈವತ್ವವಿರುವ ಮೊಸಳೆಯದು. ನನ್ನ ಕಾಲು ಹಿಡಿಯುವ ಪೂರ್ವದಲ್ಲಿ ಅದು ಹೇಳಿತು. ನೀನು ಸನ್ಯಾಸಿಯಾಗುವೆಯೆಂದರೆ ಮಾತ್ರ ನಿನ್ನನ್ನು ಸಾಯಿಸುವುದಿಲ್ಲ. ಇಲ್ಲವೆಂದರೆ ಕೊಂದು ತಿನ್ನುವೆ ಎಂದು. ಈಗ ನನ್ನ ಅಳಿವು ಮತ್ತು ಉಳಿವು ಎರಡೂ ನಿನ್ನ ಕೈಯಲ್ಲಿದೆ" ಎಂದು ಮೌನವಹಿಸಿದರು.

ಉತ್ತರೆಯು ಬಾರದಿರೆ ಹೆತ್ತಮ್ಮ ಮುನಿದರೆ
ಮತ್ತೆ ಸತ್ಪುರುಷರ ವಾಕ್ಯ ಸುಳ್ಳಾದರೆ ಜಗವಿ
ನ್ನೆತ್ತ ಬದುಕುವುದು ಸರ್ವಜ್ಞ ॥

ಎಂಬಂತೆ, ಯಾವ ತಾಯಿ ತನ್ನ ಮಗನನ್ನು ಸಾಯಲು ಬಿಟ್ಟಾಳು? ಹಾಗೆ ಶಂಕರಾಚಾರ್ಯರ ತಾಯಿ "ಅಪ್ಪಾ ನಿನಗೆ ಸನ್ಯಾಸಕ್ಕೆ ಅಪ್ಪಣೆ ಕೊಟ್ಟಿದ್ದೇನೆ. ಬಿಡಿಸಿಕೊಂಡು ಮೇಲೆ ಬಾ" ಎಂದಳು. ಹೀಗೆ ತಾಯಿಯ ಅಪ್ಪಣೆ ಸಿಕ್ಕ ನಂತರ ಶಂಕರರು ಸನ್ಯಾಸಿಯಾದದ್ದು. ಸನ್ಯಾಸವೆಂದರೆ ಆಸೆ ರೋಷಗಳನ್ನು ಬಿಟ್ಟಿರುವುದು.

ಪಥ್ಯದಾಶೆಯ ಹಿರಿಯರು ಕೆಲಬರು
ಬುದ್ಧಿಯಾಶೆಯ ಹಿರಿಯರು ಕೆಲಬರು
ಸಮತೆಯಾಶೆಯ ಹಿರಿಯರು ಕೆಲಬರು
ಇವರೆಲ್ಲರು ತಮ್ಮ ನಿಜವ ತಾವರಿಯದೆ
ತಪವನಾಚರಿಸಿದರು
ವೇಷನಿರ್ವಯಲಾಗಿ ಆಶೆ ರೋಷವ ಬಿಟ್ಟು ದಾಸೋಹಿಯಾಗಿದ್ದರೆ
ಗುಹೇಶ್ವರ ಲಿಂಗವು ತಾನೆ

ಮಹಾಮಹಿಮರೆನಿಸಿಕೊಳ್ಳಲು ವೇಷ ಧರಿಸಿದರೆ ಸಾಲದು. ಆಸೆ ರೋಷಗಳನ್ನು ವರ್ಜಿಸಿರಬೇಕು. ಅಂಥವರು ಮಾತ್ರ ದಾಸೋಹಿಗಳಾಗಲು ಸಾಧ್ಯ.

ಸ್ವಾಮಿ ವಿವೇಕಾನಂದರು "ನೂರರಲ್ಲಿ ತೊಂಬತ್ತು ಜನ ಸನ್ಯಾಸಿಗಳು ಕಾಮ ಕಾಂಚನವನ್ನು ತ್ಯಾಗ ಮಾಡಿದ ಮೇಲೂ ಕೊನೆಯಲ್ಲಿ ಹೆಸರು ಕೀರ್ತಿಯ ಆಸೆಗೆ ಸಿಕ್ಕಿ ಹಾಕಿಕೊಳ್ಳುತ್ತಾರೆ. ಯಾಕೆಂದರೆ "ಕೀರ್ತಿ... ಉದಾತ್ತ ಜೀವಿಯ ಕೊನೆಯ ದೌರ್ಬಲ್ಯ

ಎಂತೆಂದಿರುವ ಹಾಗೆ" ಎಂದು ಹೇಳಿದ್ದಾರೆ. ಹೌದು, ಇಂದ್ರಿಯಗಳು ವಿಷಯಾದಿಗಳ ಮೇಲೆ ವೈರಾಗ್ಯ ತಾಳಿದ್ದರೂ ಸಹ ಕೆಲವ್ರೊಬ್ಬರಿಗೆ ಕೀರ್ತಿಯೆಂಬ ಶನಿ ಬೆನ್ನು ಹತ್ತಿರುತ್ತಾನೆ. ಪ್ರಶಂಸೆ, ಸನ್ಮಾನ, ಸಾಮಾಜಿಕ ಪ್ರತಿಷ್ಠೆ ಇತ್ಯಾದಿಗಳು ವ್ಯಕ್ತಿಯನ್ನು ಆಕರ್ಷಿಸತೊಡಗುವವು. ಯಾಕೆಂದರೆ ಅವರ ಯಾವ್ರೊಂದು ಸೇವಾ ಕಾರ್ಯಗಳು ಅವರ ಪ್ರತಿಷ್ಠೆಯನ್ನು ಹಾಗೂ ಅವರ ಕೀರ್ತಿಯನ್ನು ಹೆಚ್ಚಿಸುವುದಿಲ್ಲವ್ರೋ ಅವು ಎಷ್ಟೇ ಮುಖ್ಯವಾಗಿದ್ದರೂ ಅಂತಹ ಸೇವಾ ಕಾರ್ಯಗಳಿಗೆ ಅವರು ಕೈಹಾಕುವುದಿಲ್ಲ. ಇದು ನಿಜವಾದ ಸನ್ಯಾಸ ಮಾರ್ಗವಲ್ಲ.

ಒಳ ಮರ್ಮ ಅರಿಯದೆ ಹೊರಚರ್ಮದ ಮೋಹ ಹಾಗೂ ಪ್ರತಿಷ್ಠೆಗಳಿಗೆ ಬಲಿಯಾಗಿರುವಂತಹ ವೇಷಧಾರಿಗಳ ಬಗ್ಗೆ ಒಂದು ಕಥೆ.

ಜನಕ ಮಹಾರಾಜನ ಹೆಸರು ಕೇಳದವರಿರಲಿಕ್ಕಿಲ್ಲ. ಆತನ ಸಭೆಯಲ್ಲೊಮ್ಮೆ ಸರ್ವಸಂಗ ಪರಿತ್ಯಾಗಿಗಳೆನಿಸಿಕೊಂಡಂತಹ ವಿದ್ವಾಂಸರು, ಮಹರ್ಷಿಗಳು ಸೇರಿದ್ದರು. ಅಲ್ಲಿ ಆತ್ಮ ಅನಾತ್ಮಗಳ ಚರ್ಚೆ ಬಹಳ ಗಂಭೀರವಾಗಿ ನಡೆಯುತ್ತಿತ್ತು. ಆ ಸಭೆಗೆ ತಂದೆಯ ಶಾಪದಿಂದ ಶರೀರದ ಎಂಟು ಭಾಗಗಳಲ್ಲಿ ವಕ್ರತೆ ಹೊಂದಿದ್ದ. ಅಷ್ಟಾವಕ್ರ ಮಹಾಮುನಿಗಳು ಬಂದರು. ಅವರ ದೇಹ ನೋಡಿ ಸಭೆಯಲ್ಲಿದ್ದ ಮಹಾಮಹಿಮರೆಲ್ಲರೂ ಗಹಗಹಿಸಿ ನಗಲಾರಂಭಿಸಿದರು. ಅಷ್ಟವಕ್ರ ಮಹಾಮುನಿಯು ಅದನ್ನು ಗಣನೆಗೆ ತೆಗೆದುಕೊಳ್ಳದೆ ಜನಕ ಮಹಾರಾಜನನ್ನು "ಮಹಾರಾಜ, ಈ ನಿನ್ನ ಆಸ್ಥಾನದಲ್ಲಿ ನಡೆಯುತ್ತಿರುವ ಸಭೆ ಯಾವುದು? ಕೀರ್ತಿ ಹಾಗೂ ವ್ಯಕ್ತಿ ಪ್ರತಿಷ್ಠೆಯದ್ದೋ? ಅಥವಾ ಆತ್ಮಜ್ಞಾನಕ್ಕೆ ಸಂಬಂಧಿಸಿದ್ದೋ? ಎಂತೆಂದು ಕೇಳಿದರು.

ಮಹಾರಾಜನು, "ಇದು ಆತ್ಮಜ್ಞಾನಿಗಳ ಸಭೆ" ಎಂದನು.

"ಬಹುಶ: ಈ ಸಭೆ ನನಗೆ ಹಾಗೆ ತೋರುತ್ತಿಲ್ಲ. ಇಲ್ಲಾರು ಅಂತಹ ಆತ್ಮ ಜ್ಞಾನಿಗಳು ಕಂಡುಬರುತ್ತಿಲ್ಲ. ಇದು ಚಮ್ಮಾರರ ಸಭೆ" ಎಂದಿದ್ದ ಅಷ್ಟಾವಕ್ರ.

"ಅಂದರೆ ನಿಮ್ಮ ಮಾತಿನ ಅರ್ಥ ಸ್ವಲ್ಪ ಬಿಡಿಸಿ ಹೇಳಿ".

"ರಾಜಾ, ಇಲ್ಲಿರುವವರೆಲ್ಲಾ ನನ್ನ ಎಲುಬಿನ ಗೂಡ ದೇಹವನ್ನು ನೋಡಿ ನಗುತ್ತಿದ್ದಾರೆ. ಆದ್ದರಿಂದ ಇವರೆಲ್ಲ ನಮ್ಮೊಳಗಿರುವ ಆತ್ಮದ ಮರ್ಮವನ್ನರಿತವರಲ್ಲ. ಇವರ ಜ್ಞಾನ ಅನಾತ್ಮವೆನಿಸಿದ ಹೊರಗಿನ ದೇಹ ಚರ್ಮಕ್ಕಷ್ಟೇ ಮೀಸಲು. ಆದ್ದರಿಂದ ಇವರೆಲ್ಲರೂ ಚಮ್ಮಾರರೆ" ಹೀಗೆ ಹೇಳಿ ಮೌನವಿಸಿದ. ಹೀಗೆ ವೇಷವ್ರೊಂದೇ ಸನ್ಯಾಸವಲ್ಲ, ಭಾವ ಶುದ್ಧಿಯಿರಬೇಕು.

ಕೃಷ್ಣ: ಭೋಗೀ ಶುಕೋ ಯೋಗೀ ವಶಿಷ್ಠ: ಕರ್ಮಕಾರಕ: ।
ರಾಜಾನೌ ರಾಮಜನಕೌ ಸರ್ವೇ ವೈ ಬ್ರಹ್ಮವಿತ್ತಮಾ: ॥

ಭೋಗದ ಜೀವನ ನಡೆಸಿದ ಶ್ರೀಕೃಷ್ಣ, ಯೋಗಿಯಾದ ಶುಕಮಹರ್ಷಿ, ಕರ್ಮಯೋಗಿಯಾದ ವಶಿಷ್ಠ ಮಹರ್ಷಿ, ರಾಜರಾದ ಶ್ರೀರಾಮಚಂದ್ರ ಮತ್ತು ಜನಕ ಮಹಾರಾಜ ಇವರೆಲ್ಲರೂ ಪರಬ್ರಹ್ಮ ತತ್ವವನ್ನು ತಿಳಿದವರು.

ಕೈಲಾಸದಲ್ಲಿ ಶಿವ ಪಾರ್ವತಿಗೆ ಅದ್ವೈತದ ರಹಸ್ಯ ತತ್ವ ಉಪದೇಶಿಸುತ್ತಿದ್ದ. ಪಾರ್ವತಿ ತನ್ಮಯಳಾಗಿ ಕೇಳುತ್ತಿದ್ದಳು. ಅಲ್ಲಿಯೇ ಹತ್ತಿರದಲ್ಲೊಂದು ಶುಕವು (ಗಿಳಿಯು) 'ಹೂಂ ಹೂಂ' ಎನ್ನುತ್ತಿತ್ತು. ಶಿವನಿಗೆ ಅದು ತಿಳಿಯಿತು. ಅದೇ ಸಂದರ್ಭದಲ್ಲಿ ಆ ಗಿಳಿಯ ಹೊಟ್ಟೆಯಿಂದ ಒಂದು ಮೊಟ್ಟೆ ಬಿದ್ದು ಒಡೆದುಕೊಂಡು ಗಿಳಿ ಮರಿಯು ಹೊರಬಂದಿತು. ಇದನ್ನು ನೋಡಿದ ಶಿವ "ಶಿಷ್ಯವೃತ್ತಿ ಮಾಡದ ಅಯೋಗ್ಯ ಗಿಳಿಮರಿಗೆ ಜ್ಞಾನಬೋಧೆ ಸರಿಯಾದುದಲ್ಲ" ಎಂದುಕೊಂಡು ಆ ಮರಿಯನ್ನು ತನ್ನ ತ್ರಿಶೂಲದಿಂದ ಕೊಲ್ಲಲು ಹೋದ.

ಆ ಶುಕ ಮರಿ ಕೂಡಲೆ ಅಲ್ಲಿಂದ ಹಾರಿ ಹೋಗಿ ಬದರಿಕಾಶ್ರಮದಲ್ಲಿದ್ದ ವ್ಯಾಸ ಪತ್ನಿಯ ಗರ್ಭವನ್ನು ಸೇರಿಕೊಂಡಿತು. ಹನ್ನೆರಡು ವರ್ಷಗಳ ಕಾಲ ಅಲ್ಲಿದ್ದುಕೊಂಡೇ ಶ್ರೀಕೃಷ್ಣನ ಧ್ಯಾನ ಮಾಡಿತು. ಒಮ್ಮೆ ವ್ಯಾಸರು ಈ ಧ್ವನಿಯನ್ನು ಕೇಳಿಸಿಕೊಂಡರು. ಆ ಗರ್ಭದೊಳಗಿರುವ ಅದಕ್ಕೆ 'ಹೊರಗೆ ಬಾ' ಎಂದು ಕರೆದರು. ಆಗ ಆ ಶಿಶುವು "ಕೃಷ್ಣನನ್ನು ತೋರಿಸುವುದಾದರೆ ನಾನು ಹೊರಬರುತ್ತೇನೆ" ಎಂದಿತು. ವ್ಯಾಸರು ಕೂಡಲೇ ಶ್ರೀಕೃಷ್ಣನನ್ನು ಪ್ರಾರ್ಥಿಸಿದರು. ಆಗ ಶ್ರೀಕೃಷ್ಣ ಬಂದು ನಿಂತ. ಕೂಡಲೇ ವ್ಯಾಸ ಪತ್ನಿಯ ಗರ್ಭದಿಂದ ಶುಕಮುನಿ ಹೊರಬಂದು ಶ್ರೀಕೃಷ್ಣನ ದರ್ಶನ ಪಡೆದುಕೊಂಡ. ಹುಟ್ಟಿದಾಕ್ಷಣ ಪರಮಾತ್ಮನ ದರ್ಶನ ಪಡೆದುದ್ದರಿಂದ ಶುಕಮುನಿ ಮಹಾಜ್ಞಾನಿಯಾದ.

ಭಕ್ತಿ–ಜ್ಞಾನ–ವೈರಾಗ್ಯ ಮೂರ್ತಿಯಾದ ಶುಕಮುನಿ ಆಗಾಗಲೆ ೧೬ ವರ್ಷದ ಸುಂದರ ತರುಣ. ಆತನ ಒಂದು ಪದ್ಧತಿ ಹೀಗಿತ್ತು. ಭಿಕ್ಷೆ ಬೇಡುತ್ತಾ ಯಾರ ಮನೆಯ ಮುಂದೆಯಾದರೂ ಬಂದು ನಿಂತನೆಂದರೆ ಆ ಮನೆಯವರು ಹಸುವಿನ ಕೆಚ್ಚಲಿನಿಂದ ಒಂದು ಧಾರೆ ಹಾಲು ಕರೆಯುವಷ್ಟು ಸಮಯ(ಗೋದೋಹದ ಕಾಲ)ದೊಳಗೆ ಭಿಕ್ಷೆ ನೀಡಬೇಕಿತ್ತು. ಒಂದು ವೇಳೆ ಅಷ್ಟು ಸಮಯದೊಳಗೆ ನೀಡದಿದ್ದರೆ ಮುಂದೆ ಸಾಗುತ್ತಿದ್ದ.

ಒಂದು ದಿನ ಶುಕಮುನಿ ನಗ್ನನಾಗಿ (ಬೆತ್ತಲೆಯಾಗಿ) ಕಾಡಿನೊಳಗೆ ಹೋಗುತ್ತಿದ್ದ. ಸ್ವಲ್ಪ ದೂರದಲ್ಲಿ ಆತನ ಹಿಂದೆ "ಮಗಾ ಮಗಾ" ಎಂದು ಕೂಗುತ್ತ ವ್ಯಾಸರು ಹೊರಟಿದ್ದರು. ಹೀಗೆ ಹೋಗುತ್ತಿರುವಾಗ ಆ ಅಡವಿಯಲ್ಲೊಂದು ಕೊಳವಿತ್ತು. ಆ ಕೊಳದಲ್ಲಿ ದೇವಕನ್ಯೆಯರು ಜಲಕ್ರೀಡೆಯಾಡುತ್ತಿದ್ದರು. ನಗ್ನರಾಗಿ ಜಲಕ್ರೀಡೆಯಾಡುತ್ತಿದ್ದ ಕನ್ನಿಕೆಯರು ಶುಕಮುನಿ ಬರುವುದನ್ನು ನೋಡಿದರು. ಅದಕ್ಕವರಲ್ಲಿ ಯಾವೊಂದು ಪರಿವರ್ತನೆಯಾಗಲಿಲ್ಲ. ಹಾಗೆಯೇ ಜಲಕ್ರೀಡೆ ಮುಂದುವರೆಸಿದರು. ಶುಕಮುನಿ ತನ್ನ ಪಾಡಿಗೆ ತಾನು ಅವರ ಮುಂದೆಯೇ ನಡೆದು, ಮುಂದೆಮುಂದೆ ಹೋಗಿಬಿಟ್ಟ. ಅಷ್ಟರಲ್ಲಿ ಆ ಕನ್ಯೆಯರಿಗೆ ಸ್ವಲ್ಪ ದೂರದಲ್ಲಿ ಬರುತ್ತಿದ್ದ ವ್ಯಾಸ ಮಹರ್ಷಿಗಳನ್ನು ನೋಡಿದರು. ಕೂಡಲೆ ಆ ಕನ್ನಿಕೆಯರು ಕೊಳದಿಂದ ಹೊರಬಂದು, ತಮ್ಮ ತಮ್ಮ ಉಡುಪುಗಳನ್ನು ಧರಿಸಿಕೊಂಡರು. ವ್ಯಾಸರಿಗೆ ಆಶ್ಚರ್ಯವಾಯಿತು. ಆಗಲೇ ಆ ಕನ್ನಿಕೆಯರ ಬಳಿಗೆ ಬಂದ ವ್ಯಾಸರು, "ನನ್ನ ಮಗ ತರುಣ. ಅಷ್ಟೆ ಅಲ್ಲ! ಅವನು ಬೆತ್ತಲೆಯಾಗಿ ಹೋಗುತ್ತಿದ್ದ. ಆಗ ನಿಮಗಾರಿಗೂ ಸಂಕೋಚ, ನಾಚಿಕೆ ಆಗಲಿಲ್ಲ. ನಾನು ಮುದುಕ, ಮೈತುಂಬ ಬಟ್ಟೆ ಧರಿಸಿದ್ದೇನೆ. ಹೀಗಿರುವಾಗ ನನ್ನನ್ನು ನೋಡಿಯೇ ನಾಚಿಕೆ ಪಟ್ಟುಕೊಂಡಿದ್ದೇಕೆ" ಎಂದು ಕೇಳಿದರು.

ಕನ್ನಿಕೆಯರು, "ಮುನಿಗಳೇ ನಿಮ್ಮಲ್ಲಿನ್ನು ದೇಹಬುದ್ಧಿ ನಾಶವಾಗಿಲ್ಲ. ಅದಿನ್ನು ಉಳಿದುಕೊಂಡಿದೆ. ಆದರೆ ನಿಮ್ಮ ಮಗ ಶುಕಮಹಾಮುನಿಯಲ್ಲಿ ಗಂಡು-ಹೆಣ್ಣು ಎಂಬ ಭೇದ ಭಾವವೇ ಇಲ್ಲ. ಆದ್ದರಿಂದ ನಮ್ಮಲ್ಲಾಗ ಸಂಕೋಚ ನಾಚಿಕೆ ಹುಟ್ಟಿಬರಲಿಲ್ಲ. ಯಾಕೆಂದರೆ ಅವರ ಸನ್ಯಾಸತ್ವದಲ್ಲಿ ಪರಿಪೂರ್ಣತೆ ಇದೆ. ಆದ್ದರಿಂದ ನಾವು ಬಟ್ಟೆ ತೊಡುವ ಮನಸ್ಸು ಮಾಡಲಿಲ್ಲ" ಹೀಗೆ ಹೇಳಿದರು. ಇದನ್ನು ಕೇಳಿದ ವ್ಯಾಸರು ಮಗನ ಸಾಧನಾ ಸ್ಥಿತಿಯ ಬಗ್ಗೆ ಆನಂದಪಟ್ಟರು.

ಸೃಷ್ಠಿ ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. ದೃಷ್ಟಿ ಬದಲಿಸಬೇಕು. ಸಂಸಾರಿಗೂ ಸನ್ಯಾಸಿಗೂ ಇಷ್ಟೇ ವ್ಯತ್ಯಾಸ. ಈ ಕಾರಣಕ್ಕಾಗಿಯೇ ನಮ್ಮ ದಾರ್ಶನಿಕರು ಸನ್ಯಾಸವನ್ನು ನಾಲ್ಕನೆಯ ಮೆಟ್ಟಿಲಾಗಿ ಗುರುತಿಸಿರುವುದು.

೧) **ಬ್ರಹ್ಮಚರ್ಯ :** "ಗಿಡವಿದ್ದಾಗ ಬಗ್ಗದ್ದು, ಮರವಾದಾಗ ಬಗ್ಗೀತೆ?" ಎಂಬ ನಾಣ್ಣುಡಿ ಇರುವುದು. ಈ ಕಾರಣಕ್ಕಾಗಿ ಬಾಲ್ಯದಲ್ಲಿ ಅಂದರೆ ಸುಮಾರು ಇಪ್ಪತ್ತೆರಡು ಇಪ್ಪತ್ಮೂರು ವಯಸ್ಸಿನ ಪರ್ಯಂತರ ಲೌಕಿಕ ಮತ್ತು ಅಲೌಕಿಕಗಳೆರಡು ಸತ್ ಸಂಸ್ಕಾರ ಅತ್ಯವಶ್ಯ. ಅದು ಈ ವಯಸ್ಸಿನಲ್ಲಿ ಆಗಬೇಕು. ಈ ಮೆಟ್ಟಿಲನ್ನು ಬ್ರಹ್ಮಚರ್ಯ ಎನ್ನುತ್ತಾರೆ. ಬ್ರಹ್ಮಚರ್ಯವೆಂದರೆ ವೀರ್ಯವನ್ನು ಧಾರಣೆ ಮಾಡುವುದು. ಮತ್ತೊಂದು ಅರ್ಥ! ಅವರ ಮನಸ್ಸು ಸದಾ ಬ್ರಹ್ಮನಲ್ಲಿ ಚರಿಸುತ್ತಿರಬೇಕು. ಇದು ಬ್ರಹ್ಮಚರ್ಯದ ವ್ರತದ ನಿಜಸ್ಥಿತಿಯು.

೨. **ಗೃಹಸ್ಥಾಶ್ರಮ :** ಕಾಮ ಪ್ರಕೃತಿಯ ಧರ್ಮ. ಇದು ವಿಕೃತವಾಗಬಾರದು. ಸಂಸ್ಕೃತಿಯ ಆಧಾರದ ಮೇಲೆ ಕಾಮವನ್ನು ತಣಿಸಿ ಕಾಮವನ್ನು ಗೆಲ್ಲಬೇಕು. ಇದಕ್ಕಾಗಿಯೇ ವಿವಾಹವೆಂಬ ಸತ್ಕರ್ಮ ನಡೆಸುತ್ತಿರುವುದು. ಸುಮಾರು ನಲವತ್ತೈದರಿಂದ ಐವತ್ತು ವರ್ಷಗಳ ಪರ್ಯಂತರ ಸುಸಂಸ್ಕೃತನಾಗಿ ಈ ಆಶ್ರಮದಲ್ಲಿರಬೇಕು. ಈ ಬಗ್ಗೆ ಶರಣರು ಹೀಗೆ ಹೇಳುತ್ತಾರೆ.

**ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ**
**ಛಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ**
**ಛಲ ಬೇಕು ಶರಣಂಗೆ ಪರದೈವವನೊಲ್ಲೆನೆಂಬ**
**ಛಲ ಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ**
**ಛಲ ಬೇಕು ಶರಣಂಗೆ ಪ್ರಸಾದದಿಟವೆಂಬ**
**ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವಾ ॥**

ಇದೇ ಅರ್ಥದಲ್ಲೊಂದು ಶ್ಲೋಕವಿದೆ. **ಮಾತೃವತ್ ಪರನಾರೇಷು ಲೋಷ್ಟವತ್ ಪರ ಧನೇಷು ಆತ್ಮವತ್ ಸರ್ವಪೂಜ್ಯೇಷು.**

ಪರನಾರಿಯರನ್ನೂ ತಾಯಿಯಂತೆ ಕಾಣಬೇಕು. ಒಮ್ಮೆ ಪಾಶ್ಚಿಮಾತ್ಯ ನಾರಿಯೊಬ್ಬಳು ಸ್ವಾಮಿ ವಿವೇಕಾನಂದರ ಬಳಿ ಬಂದು "ನಿಮ್ಮ ಮೇಲೆ ನನಗೆ ಮೋಹವಾಗಿದೆ. ನಿಮ್ಮನ್ನು ಮನಸಾರೆ ಪ್ರೀತಿಸುತ್ತಿದ್ದೇನೆ. ದಯಮಾಡಿ ನನ್ನನ್ನು ಮದುವೆಯಾಗಿ" ಎಂದು ಪ್ರೇಮಭಿಕ್ಷೆ ಬೇಡುತ್ತಾಳೆ.

ವಿವೇಕಾನಂದರು "ಪ್ರಪಂಚದಲ್ಲಿ ನಿನಗೆ ಯಾರೊಬ್ಬರೂ ಸಿಗಲಿಲ್ಲವೇ ತಾಯಿ. ನನ್ನನ್ನೇ ಏಕೆ ಬಯಸಿಬಂದೆ?" ಎಂದು ಕೇಳಿದರು.

ಅದಕ್ಕವಳು "ನಿಮ್ಮನ್ನು ಮದುವೆಯಾದರೆ ನಿಮ್ಮಂತಹ ವಿಶ್ವವಿಖ್ಯಾತ ಮಗನನ್ನು ಪಡೆಯಬಹುದು. ಯಾಕೆಂದರೆ ಅದು ನಿಮ್ಮ ಬೀಜವಲ್ಲವೇ?" ಎಂದು ಹೇಳಿದಳು.

ವಿವೇಕಾನಂದರು "ಅಮ್ಮ ನನ್ನಂತಹ ಮಗನನ್ನು ಪಡೆಯಬೇಕೆಂಬ ಆಸೆ ನಿನಗಿದ್ದುದಾದರೆ ವರ್ಷಾನುಗಟ್ಟಲೆ ಕಾಯುವುದಾದರೂ ಏಕೆ? ಈಗಲೇ ನನ್ನನ್ನು ನಿನ್ನ ಮಗನೆಂದು ಸ್ವೀಕರಿಸಿಬಿಡು ತಾಯಿ" ಎಂದರಂತೆ.

ಮತ್ತೊಬ್ಬರ ಸಂಪತ್ತನ್ನು ಕಣ್ಣೆತ್ತಿಯೂ ನೋಡಬಾರದು. ರಾಮಕೃಷ್ಣ ಪರಮಹಂಸರು ಮುಂದೆ ಮುಂದೆ ಹೋಗುತ್ತಿದ್ದರು. ಅವರ ಹೆಂಡತಿ ಶಾರದಾದೇವಿ ಅವರ ಹಿಂದೆ ಸ್ವಲ್ಪ ದೂರದಲ್ಲಿ ಬರುತ್ತಿದ್ದರು. ಮುಂದೆ ನಡೆಯುತ್ತಿದ್ದ ರಾಮಕೃಷ್ಣರಿಗೊಂದು ವಜ್ರದ ಹರಳು ನೆಲದ ಮೇಲೆ ಫಳಫಳ ಹೊಳೆದದ್ದು ಕಂಡಿತು. ಕೂಡಲೆ ಅದರ ಮೇಲೆ ಮಣ್ಣು ಮುಚ್ಚಿದರು. ಯಾಕೆಂದರೆ ಸರ್ವಸಂಗ ಪರಿತ್ಯಾಗಿಗಳಾದ ತಾವು ತಮ್ಮ ಹೆಂಡತಿಯೂ ಅದರ ಮೋಹಕ್ಕೆ ಒಳಗಾಗಬಾರದೆಂತೆಂದು. ಸ್ವಲ್ಪ ದೂರ ಹೋದನಂತರ ರಾಮಕೃಷ್ಣ ಪರಮಹಂಸರು ಶಾರದಾ ದೇವಿಗೆ ಹೇಳಿದರು. "ಅಲ್ಲೊಂದು ವಜ್ರದ ಹರಳು ಬಿದ್ದಿತ್ತು, ನೀನು ನೋಡಿ ನೀನದರ ಮೇಲೆ ಆಸೆಪಡಬಹುದೆಂದು ನಾ ನಿನಗೆ ಕಾಣಿಸದಂತೆ ಮಣ್ಣು ಮುಚ್ಚಿ ಬಂದಿದ್ದೆ, ಗೊತ್ತೇ?" ಎಂದು ಪ್ರಶ್ನಿಸಿದರು.

"ನೀವು ಮಣ್ಣ ಮೇಲೆ ಮಣ್ಣು ಹಾಕಿದ್ದು ನನಗೇನು ಗೊತ್ತಿಲ್ಲವೇ? ನಾನು ಅಂಥವುಗಳನ್ನೆಲ್ಲಾ ಎಂದೋ ಮಣ್ಣೆಂದು ಭಾವಿಸಿರುವೆ. ಆದರೆ ನೀವು ಮಾತ್ರ ಇನ್ನೂ ಅದನ್ನು ವಜ್ರವಾಗೇ ನೋಡಿದಿರಿ" ಎಂದು ಹೇಳಿದಳು. ಇದು ಸೃಷ್ಟಿ ಬದಲಿಸುವುದಲ್ಲ, ದೃಷ್ಟಿ ಬದಲಿಸುವುದು. ಇದೇ ಶರಣ ಸಂತರ ಮಾರ್ಗ. ಗೃಹಸ್ಥಾಶ್ರಮದಲ್ಲಿ ಹೀಗೆ ಹೆಜ್ಜೆ ಇಟ್ಟವರು ಮಾತ್ರ ಮುಂದಿನ ಎರಡಾಶ್ರಮಗಳಿಗೆ ಪಾದಾರ್ಪಣೆ ಮಾಡಲು ಅರ್ಹತೆ ಪಡೆವುದು.

೩. ವಾನಪ್ರಸ್ಥಾಶ್ರಮ : ಇದು ಐವತ್ತನೆಯ ವಯಸ್ಸಿನ ನಂತರದಲ್ಲಿ ಬರುವಂಥದ್ದು. ಈ ಸಂದರ್ಭದಲ್ಲಿ ಪುತ್ರ ಪೌತ್ರಿಗಳ ವ್ಯಾಮೋಹ ಕಳೆದುಕೊಂಡಿರಬೇಕು. ಕೆಲ ವರ್ಷಗಳ ಪರ್ಯಂತರ ದಂಪತಿಗಳಿಬ್ಬರೇ ಜೊತೆಯಲ್ಲಿರಬೇಕು. ಆದಷ್ಟು ಇಬ್ಬರೂ ಈ ಆಶ್ರಮದಲ್ಲಿ ಮುಂದಿನ ಸನ್ಯಾಸಾಶ್ರಮದ ಗುರಿ ಇಟ್ಟುಕೊಂಡೇ ಜೀವನ ಸಾಗಿಸಬೇಕು. ಅಲ್ಲದೆ ತಾವಿಬ್ಬರೂ ತಾವು ದಂಪತಿಗಳೆಂಬ ಭಾವವನ್ನು ನಾಶಗೊಳಿಸಿಕೊಳ್ಳಬೇಕು. ಭಾವನಾತ್ಮಕವಾಗಿ ತಂದೆ ಮಗಳಂತೆಯೋ, ತಾಯಿ ಮಗನಂತೆಯೋ ಜೀವನ ಸಾಗಿಸಬೇಕು. ಅದು ಜನ ಮೆಚ್ಚಲಲ್ಲ. ಜನಾರ್ಧನನ್ನು ಮೆಚ್ಚಿಸಲು. ಇವು ಮೂರು ಆಶ್ರಮಗಳನ್ನು ದಾಟಿದ ನಂತರ ಸನ್ಯಾಸಕ್ಕೆ ಪಾದಾರ್ಪಣೆ ಮಾಡಬೇಕು. ಆಸೆ ಮತ್ತು ರೋಷಗಳೆರಡು ನಾಶವಾದುದ್ದೇ ಸನ್ಯಾಸಾಶ್ರಮವು.

ಹುಬ್ಬಳ್ಳಿಯ ಸಿದ್ಧಾರೂಢರಲ್ಲಿಗೊಬ್ಬರು ಬಂದು, "ಪ್ರಭು, ನಾನು ನಿಮ್ಮ ತಲೆಯ

ಮೇಲಿಡಲು ನವರತ್ನಗಳಿಂದ ತುಂಬಿರುವ ಚಿನ್ನದ ಕಿರೀಟವೊಂದನ್ನು ತಂದಿರುವೆ. ಅದನ್ನು ನೀವು ಧರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು" ಹೀಗೆ ಅವರಲ್ಲಿ ಕೈ ಮುಗಿದು ಬೇಡಿಕೊಂಡ. ಸಿದ್ಧಾರೂಢರು ಅದಕ್ಕೇನನ್ನೂ ಪ್ರತಿಕ್ರಿಯಿಸಲಿಲ್ಲ. ಮೌನವಿದ್ದರು. 'ಮೌನಂ ಸಮ್ಮತಿ ಲಕ್ಷಣಂ' ಎಂದು ಭಾವಿಸಿ ಅವರ ತಲೆಯ ಮೇಲೆ ಕಿರೀಟವಿಟ್ಟು ಕೇಳಿದ. "ನಿಮ್ಮ ಮನಸ್ಸಿಗೆ ಆನಂದವಾಯಿತೇ" ಎಂದು.

ಸಿದ್ಧಾರೂಢರು ಹೇಳಿದರಂತೆ! "ಮಲದ ಮೇಲೆ ಮಲಕುಂತೈತೆ ಮನಸ್ಸು ಮಾತ್ರ ನಿರ್ಮಲವಾಗೈತೆ" ಎಂದು.

ಶರಣಸಂತ, ಮಹಾಂತರಿಗೆ ಭೌತಿಕ ಸಂಪತ್ತು ಹೊಲಸಿಗೆ ಸರಿಸಮಾನ. ಶರೀರವೂ ಮಲಮೂತ್ರಗಳಿಂದ ತುಂಬಿದ್ದು. ದು:ಖಮಯವಾದದ್ದು ಶರೀರ ಮತ್ತು ಭೌತಿಕ ಸಂಪತ್ತುಗಳು. ಆದ್ದರಿಂದಲೇ ಅವರು ಮಲದ ಮೇಲೆ ಮಲ ಕುಂತೈತಿ, ಮನಸ್ಸು ನಿರ್ಮಲಾಗೈತಿ ಅಂದಿರೋದು. ಇದೇ ನಿಜವಾದ ಸನ್ಯಾಸವು.

## ಸನ್ಯಾಸದ ಅರಿವು

ಅನ್ನ! ಪ್ರಾಣ ಬಲ
ಮೌನ! ಮನ ಬಲ
ಹೊರಗದ್ದಲ ಒಳಗಾಗದ –
ಧ್ಯಾನ! "ಆತ್ಮಬಲ" ಎಂದ
ಶ್ರೀಗುರು ಸಿದ್ಧಲಿಂಗ ಮಹಾಂತ

# ಅಂತರಂಗ ಶುದ್ಧಿ:

ಕಾಣದ ಮನಸ್ಸು! ಅದು ಇದೆ ಎಂದು ಹೇಳುತ್ತಿದ್ದೇವೆ. ಹಾಗೆ ಒಪ್ಪಿಕೊಂಡಿದ್ದೇವೆಯೂ ಸಹ. 'ಮನ ಏವ ಮನುಷ್ಯಾಣಾಂ ಕಾರಣಮ್ ಬಂಧ ಮೋಕ್ಷಯೋ" ಅಂದರೆ ಮಾನವರನ್ನು ಬಂಧಿಸಲಿಕ್ಕೂ ಮೋಕ್ಷಕ್ಕೂ ಕಾರಣವಾದದ್ದು ಮನಸ್ಸು. ವೈರಾಗ್ಯನಿಧಿ ಅಕ್ಕಮಹಾದೇವಿ ಹೇಳುತ್ತಾಳೆ.

**ಲೋಕದ ಚೇಷ್ಟೆಗೆ ರವಿ ಬೀಜವಾದಂತೆ**
**ಕರಣಂಗಳ ಚೇಷ್ಟೆಗೆ ಮನವೇ ಬೀಜ**
**ಎನಗುಳ್ಳದೊಂದು ಮನ ಆ ಮನ ನಿಮ್ಮಲ್ಲಿ ಒಡವೆರೆದ ಬಳಿಕ**
**ಎನಗೆ ಭವವಿನ್ನುಂಟೇ ಚನ್ನಮಲ್ಲಿಕಾರ್ಜುನಾ ॥**

ಈ ಜಗತ್ತು ಸಂಪೂರ್ಣ ಕತ್ತಲಮಯವಾಗಿದ್ದರೆ. ಲೋಕದಲ್ಲಿ ಯಾವೊಂದು ವ್ಯವಹಾರಗಳೂ ನಡೆಯುತ್ತಿರಲಿಲ್ಲ. ಶೂನ್ಯವಾಗಿರುತ್ತಿತ್ತು. ಹಾಗೆ ಮಾನವರಲ್ಲಿ ಮನಸ್ಸೆಂಬುದು ಇಲ್ಲದಿದ್ದರೆ ಸರ್ವೇದ್ರಿಯಗಳ ಚೇಷ್ಟೆ ನಡೆಯುತ್ತಿರಲಿಲ್ಲ. ಜೀವಾತ್ಮರನ್ನು ಭವದ ದು:ಖಗಳು ಬಂಧಿಸುತ್ತಿರಲಿಲ್ಲ. ಆದ್ದರಿಂದ ಇರುವ ಆ ಒಂದು ಮನವನ್ನು ಇಂದ್ರಿಯಗಳ ಕಡೆ ಹರಿಸಿದೆ. ಚನ್ನಮಲ್ಲಿಕಾರ್ಜುನ ನಿನ್ನ ಕಡೆ ಹರಿಸಿಬಿಟ್ಟರೆ! ಭವದ ಆ ದು:ಖಗಳು ನನ್ನನ್ನೇನು ಮಾಡಬಲ್ಲವು!

ಮನಸ್ಸು ಮಾನವರ ಸುಖದು:ಖಗಳಿಗೆ ಕಾರಣವಾದುದು. ಮನಸ್ಸೇ ಮಾಯೆ. ಮನಸ್ಸೇ ಮಹಾಂತ. ಆದರೆ ಈ ಮನಸ್ಸಿನ ನಿಯಂತ್ರಣ ಅಷ್ಟು ಸುಲಭವಾದುದಲ್ಲ. ಬಸವಣ್ಣ ಹೇಳುತ್ತಾನೆ, "ಮನವೇ ಸರ್ಪ, ತನುವೇ ಹೇಳಿಗೆ" (ಹಾವಿನಬುಟ್ಟಿ) ಎಂತೆಂದು. ಮನವನ್ನು ಒಂದು ಘಟಸರ್ಪಕ್ಕೆ ಹೋಲಿಸಿದ್ದಾನೆ. ಇದನ್ನೇ ಒಬ್ಬ ಮಹಾತ್ಮ ಹೇಳುತ್ತಾನೆ, "ಕೇಳಿರಯ್ಯಾ! ನವಖಂಡ ಪೃಥ್ವಿಯೊಳಗೆ ಒಂದು ಹುತ್ತುಂಟು. ಆ ಹುತ್ತೊಳಗೊಂದು ಹಾವುಂಟು. ಹುತ್ತನ್ನು ಕೆಡಿಸದೆ ಹಾವನ್ನು ಸಾಯ್ಸದೆ, ರತ್ನವನು ವಶಪಡಿಸಿಕೊಂಬಾತನೇ ನಿಜ ವೀರಶೈವ" ಒಂಬತ್ತು ದ್ವಾರಗಳಿಂದ ಕೂಡಿರುವ ಈ ಶರೀರವನ್ನೇ ಹುತ್ತ ಎಂದು ಕರೆದಿರುವುದು. ಸದಾ ಹರಿದಾಡುವಂತಹ ಮನಸ್ಸೇ ಹಾವು. ಈ ಶರೀರವನ್ನು ಬಹುವಾಗಿ ದಂಡಿಸಿ ಆರೋಗ್ಯವನ್ನು ಕೆಡಿಸಿಕೊಳ್ಳದೆ! ಮನಸ್ಸಿನ ಸಮತೋಲನವನ್ನು ನಾಶಪಡಿಸಿಕೊಳ್ಳದೆ! ತನ್ನಲ್ಲಿ ತಾನಿಂತು ಆನಂದಿಸುವವನೇ ನಿಜವಾದ ವೀರಶೈವನು. ಹಠಯೋಗದ ಮಾರ್ಗದಿಂದಲ್ಲ, ರಾಜಯೋಗ ಮಾರ್ಗದಿಂದ.

ಮನಸ್ಸು ವಿಷವೆಂಬ ಹೊಲಸಿನಿಂದ ತುಂಬಿಕೊಂಡಿದೆ. ಅದು ಇಂದು ನೆನ್ನೆಯದಲ್ಲ. ಜನ್ಮಜನ್ಮಾಂತರಗಳಿಂದ ಮೆತ್ತಿಕೊಂಡು ಬಂದಿರುವಂಥದ್ದು. ಆ ಹೊಲಸು ತಾನಾಗಿಯೇ ಬಂದು ಮನಸ್ಸಿಗೆ ಮೆತ್ತಿಕೊಳ್ಳಲಿಲ್ಲ. ಮನಸ್ಸೇ ಅದನ್ನು ನಿರಂತರ ಅಂಟಿಸಿಕೊಳ್ಳುತ್ತಾ ಬಂತು. ಇದು ನಿರಂತರ ಸಾಗಿರುವುದರಿಂದ ಹೊಲಸು ಬಿಡುಗಡೆ ಹೊಂದುತ್ತಿಲ್ಲ. ಮನಸ್ಸು ದು:ಖದಿಂದ ವಿಮುಕ್ತಗೊಳ್ಳುತ್ತಿಲ್ಲ. ಯಾಕೆಂದರೆ ಮನಸ್ಸು ಸದಾ ಮಾಡಿರುವಂತಹ ಮತ್ತು ಮಾಡುವಂತಹ ಸಂಕಲ್ಪ ವಿಕಲ್ಪಗಳು ಬಹಳ ಕೆಟ್ಟವಾಗಿರುತ್ತವೆ. ಅಂದರೆ ನಕಾರಾತ್ಮಕ (Negative) ಸಂಕಲ್ಪವಾಗಿರುತ್ತವೆ. ಇದು ಹೇರಳ. ಅದು ಏನಾದರೂ ಸಕಾರಾತ್ಮಕ (Positive) ಸಂಕಲ್ಪಗಳನ್ನು

ಮಾಡಿದ್ದರೆ ಅವು ಅತಿವಿರಳ. ಈ ಸಕಾರಾತ್ಮಕ (ಧನಾತ್ಮಕ) ಸಂಕಲ್ಪಗಳ ಬಗ್ಗೆ ಶ್ರೀ ಶಿಖಾಮಣಿಯ ಶ್ಲೋಕವೊಂದನ್ನು ನೋಡುವುದು ಹೆಚ್ಚು ಸೂಕ್ತ.

**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ**
**ದಾನಂ ಪೂಜಂ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹ: ॥**

ಹಿಂಸೆ ಮಾಡದಿರುವುದು, ಸತ್ಯವನ್ನೇ ಹೇಳುವುದು, ಪರರ ವಸ್ತುಗಳನ್ನು ಕದಿಯದಿರುವುದು, ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬರುವುದು (ಏಕಪತ್ನಿ ವ್ರತಸ್ಥನಾಗಿರುವುದು), ದಯೆವುಳ್ಳವನಾಗಿರುವುದು, ಕ್ಷಮಿಸುವಂತಹ ಭಾವವಿರುವುದು, ದಾನ ಮಾಡುವ ಗುಣವುಳ್ಳವನಾಗಿರುವುದು. ಈ ಸಪ್ತಸೂತ್ರಗಳಲ್ಲದೆ ಪೂಜೆ, ಜಪ ಮತ್ತು ಧ್ಯಾನಾದಿ ಕ್ರಿಯೆಗಳನ್ನಾಚರಿಸುವುದು. ಈ ದಶಸೂತ್ರಗಳೇ ಧನಾತ್ಮಕವಾದುವುಗಳು. ಇದಕ್ಕೆ ವಿರುದ್ಧವಾದ ಹಿಂಸೆ, ಅಸತ್ಯ (ಸುಳ್ಳು), ಕಳ್ಳತನ ಇತ್ಯಾದಿ ಕ್ರಿಯೆಗಳೇ ಋಣಾತ್ಮಕ (ನಕಾರಾತ್ಮಕ) ಕರ್ಮಗಳು ಇಂತಹ ಕ್ರಿಯೆಗಳನ್ನಾಚರಿಸುವ ಸಂಕಲ್ಪಗಳನ್ನು ನಾವು ಹುಟ್ಟಿದಾಗಿನಿಂದ ಅಲ್ಲ, ಜನ್ಮಜನ್ಮಾಂತರಗಳಿಂದಲೂ ಈ ನಮ್ಮ ಮನಸ್ಸು ಇಂತಹ ಕೆಟ್ಟ ಸಂಕಲ್ಪಗಳನ್ನೇ ಮಾಡುತ್ತಾ ಬಂದಿದೆ. ಆದ್ದರಿಂದಲೇ ಈ ಮನಸ್ಸು ಹೊಲಸಿನಿಂದ ತುಂಬಿಕೊಂಡಿರುವುದು. ಇದನ್ನು ಹೇಗೆ ಶುದ್ಧೀಕರಿಸಬೇಕೆಂಬುದರ ಬಗ್ಗೆ ಮನುಸ್ಮತಿಯಲ್ಲಿ ಹೀಗೆ ಹೇಳಿದೆ. **"ಅದ್ಭಿರ್ಗಾತ್ರಾಣಿ ಶುದ್ಧ್ಯಂತಿ, ಮನ: ಸತ್ಯೇನ ಶುದ್ಧ್ಯತಿ"** ಎಂತೆಂದು. ತನುವನ್ನು ನೀರಿನಿಂದ ತೊಳೆದು ಶುದ್ದೀಕರಿಸುವಂತೆ ಮನಸ್ಸನ್ನು ಸತ್ಯದಿಂದ ಮಾತ್ರವೇ ಶುದ್ಧೀಕರಿಸಲು ಸಾಧ್ಯವು. ಇದೇ ವಿಚಾರನ್ನು ಬಸವಣ್ಣ ತನ್ನ ವಚನದಲ್ಲಿ ಹೀಗೆ ಹೇಳಿರುವುದು.

**ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,**
**ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ**
**ಇದೇ ನಮ್ಮ ಕೂಡಲ ಸಂಗಮದೇವನೊಲಿಸುವ ಪರಿ**

ಇದೇ ಸದಾ(ಸತ್ಯಾ)ಚಾರ ಸಂಹಿತೆ. ಅಂತರಂಗ ಶುದ್ಧಿಯ ಬಣ್ಣನೆ, ಈ ಬಗ್ಗೆ ಆಯ್ದಕ್ಕಿ ಲಕ್ಕಮ್ಮ ಹೇಳಿದ್ದಾಳೆ.

**ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ**
**ಚಿತ್ತ ಶುದ್ಧದಲ್ಲಿ ಕಾಯಕ ಮಾಡುವಲ್ಲಿ**
**ಸದ್ಭಕ್ತರಿಗೆ ಎತ್ತ ನೋಡಿದರತ್ತ ಲಕ್ಷ್ಮಿ ತಾನಾಗಿಪ್ಪಳು**

ಸಂಕುಚಿತ ಮನೋಭಾವದವರಿಗೆ ಸದಾ ಮನಸ್ಸಿನಲ್ಲಿ ತಳಮಳ, ಅಶಾಂತಿ, ಸಂಕಟ ಮತ್ತು ವ್ಯಥೆ. ಇವರು ಎಷ್ಟಿದ್ದರೂ ಬಡವರೆ. ಚಿತ್ತಶುದ್ಧಿ ಇದ್ದವರು ಏನಿರದಿದ್ದರೂ ಸದಾ ಸಂಪದ್ಭರಿತರು.

ಶುದ್ಧ ಮತ್ತು ಅಶುದ್ಧ ಮನದ ವಿವರಣೆಯ ಬಗ್ಗೆ ಒಂದು ಕಥೆ! ಗುರು ಒಬ್ಬ ತನ್ನ

ಶಿಷ್ಯನೊಂದಿಗೆ ನಡೆದು ಹೋಗುತ್ತಿದ್ದರು. ಒಂದು ನದಿಯ ಹತ್ತಿರ ಬಂದರು. ಅವರು ಆ ನದಿ ದಾಟಿ ಹೋಗಬೇಕಿತ್ತು. ಆದರೆ ಅಲ್ಲೊಬ್ಬ ನವ ತಾರುಣ್ಯದ ಹೆಂಗಸು ನದಿ ದಾಟಲು ಕಷ್ಟಪಡುತ್ತಿದ್ದಳು. ಅದನ್ನು ನೋಡಿದ ಗುರುಗಳು ಆಕೆಯನ್ನು ತಮ್ಮ ಹೆಗಲ ಮೇಲೆ ಕೂಡ್ರಿಸಿಕೊಂಡು ಹೊಳೆ ದಾಟಿದರು. ಹೊಳೆ ದಾಟಿದ ನಂತರ ಅವಳು ಗುರುಗಳಿಗೆ ನಮಸ್ಕರಿಸಿ, ಕೃತಜ್ಞತೆ ತಿಳಿಸಿ ಹೊರಟು ಹೋದಳು. ಗುರುಶಿಷ್ಯರ ಪ್ರಯಾಣ ಮುಂದುವರೆಯಿತು.

ಶಿಷ್ಯನ ಮನಸ್ಸಿನಲ್ಲಿ ತಳಮಳ, ಸರ್ವಸಂಗ ಪರಿತ್ಯಾಗಿಯಾದ ತನ್ನ ಗುರು ಆ ತರುಣಿಯನ್ನು ತಮ್ಮ ಹೆಗಲ ಮೇಲೆ ಕೂಡಿಸಿಕೊಂಡು ಹೊಳೆ ದಾಟಿದರಲ್ಲಾ? ಇವರೆಂತಹ ಸನ್ಯಾಸಿ. ನಮಗೆ ಮಾತ್ರ ಕಟ್ಟುನಿಟ್ಟಿನ ಆಚಾರ. ಇವರಿಗದು ಅನ್ವಯಿಸುವುದಿಲ್ಲವೇ? ಅವಳೇಕೆ ಗುರು ಹೆಗಲ ಮೇಲೆ ಕೂಳಿತಳೋ? ನನ್ನ ಹೆಗಲ ಮೇಲೆ ಕೂಡಬಾರದಿತ್ತೇ? ಹೋಗಲಿ ಈ ಗುರುವಾದರೂ ಏಕೆ ಆ ಕೆಲಸ ಮಾಡಬಾರದಿತ್ತು? ಇತ್ಯಾದಿ ಇತ್ಯಾದಿ ವಿಕಲ್ಪ ಆಲೋಚನೆಗಳು ಮೂಡಿಬಂದವು. ಆದರೆ ಶಿಷ್ಯ ಸುಮ್ಮನಿರಲಿಲ್ಲ. ಸ್ವಲ್ಪ ಸಮಯದ ನಂತರ ಗುರುಗಳನ್ನು "ಗುರುಗಳೇ, ನೀವು ಆ ತರುಣಿಯನ್ನು ಹೆಗಲ ಮೇಲೆ ಕೂಡಿಸಿಕೊಂಡು ಹೊಳೆ ದಾಟಿದ್ದು ಸರಿಯಲ್ಲ. ಸನ್ಯಾಸಿಗಳಾದ ನೀವು ತಪ್ಪು ಮಾಡಬಾರದಿತ್ತು" ಎಂದು ಕೇಳಿಬಿಟ್ಟ.

ಗುರುಗಳು ನಕ್ಕು, "ಹೂಂ ನಾನು ಆಕೆಯನ್ನು ನದಿ ತೀರದಲ್ಲಿಯೇ ಬಿಟ್ಟುಬಿಟ್ಟೆ. ಆಕೆಯನ್ನು ನಾನು ಹೊತ್ತುಕೊಂಡಾಗಲೂ ಆಕೆ ನನ್ನ ಮನಸ್ಸಿನಲ್ಲಿ ಕೂತಿರಲಿಲ್ಲ. ಇಳಿಸಿ ಇಷ್ಟು ಹೊತ್ತಾದರೂ ನನ್ನ ಮನಸ್ಸಿನೊಳಗೆ ಆಕೆ ಆವರಿಸಿಕೊಂಡಿಲ್ಲ. ಮೂರು ತಾಸುಗಳಾದರೂ ಆಕೆ ಇನ್ನೂ ನಿನ್ನ ಮನಸ್ಸಿನೊಳಗೆ ಉಳಿದಿರುವಳೆಂದರೆ ಆ ನಿನ್ನ ಮನಸ್ಸು ಅದೆಷ್ಟು ಮಲಿನ ವಿಷಯಗಳಿಗೆ ಅವಕಾಶ ಮಾಡಿಕೊಂಡಿದೆಯಲ್ಲ. ನೀನು ನನ್ನ ಶಿಷ್ಯನಾಗಲು ಅರ್ಹನಲ್ಲ" ಎಂದರು.

ಶಿಷ್ಯನಿಗೆ ಜ್ಞಾನೋದಯವಾಯಿತು. ಸೃಷ್ಟಿಯಲ್ಲಿರುವ ವಸ್ತುವ್ಯಕ್ತಿಗಳಾವು ಮಲಿನವಲ್ಲ. ಅವುಗಳಲ್ಲಿ ನಮ್ಮ ಮನಸ್ಸು ಅಭಿಮಾನ ತಾಳಿದರೆ ಮಾತ್ರ ಮಲಿನವಾಗುವುದು. ಇದನ್ನೆಲ್ಲ ಅಲ್ಲಮಪ್ರಭು ಹೀಗೆ ಹೇಳಿದ್ದಾನೆ.

ಹೊನ್ನು ಮಾಯೆಯಂಬರು, ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯಂಬರು, ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯಂಬರು, ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ ॥

ಸೃಷ್ಟಿಯಲ್ಲಿರುವ ಹೊನ್ನು, ಹೆಣ್ಣು, ಮಣ್ಣು ಇವುಗಳು ತಪ್ಪಲ್ಲ. ಅವುಗಳ ಮೇಲೆ ಆಸೆಪಡುತ್ತಿರುವ ಮನಸ್ಸಿನದು ತಪ್ಪು. ಆ ಆಸೆ, ದ್ವೇಷರೋಷಗಳಾಗಿ ಪರಿವರ್ತನೆ ಹೊಂದುವುದು. ಮನಸ್ಸಿನ ಶಾಂತಿ ಕದಡುವುದು.

ಭಗವಾನ್ ಬುದ್ಧನಲ್ಲಿಗೆ ಓರ್ವ ಬ್ರಾಹ್ಮಣ ಬಂದ. ಬೌದ್ಧ ಧರ್ಮಕ್ಕೆ ಬಹಳ ಜನ

ಸೇರುತ್ತಿದ್ದರಿಂದ ಆ ಬ್ರಾಹ್ಮಣನಿಗೆ ಸಿಟ್ಟಿತ್ತು. ಆದ್ದರಿಂದ ಆ ಬ್ರಾಹ್ಮಣ ಬುದ್ಧನನ್ನು ಬಾಯಿಗೆ ಬಂದಂತೆ ಬೈದ. ಬುದ್ಧ ಧೃತಿಗೆಡದೆ ಗಂಭೀರವಾಗಿ ಕುಳಿತಿದ್ದ. ಬ್ರಾಹ್ಮಣನಿಗೆ ಮತ್ತಷ್ಟೂ ಕೋಪ ಉಕ್ಕಿಬಂತು. "ನಿನ್ನನ್ನು ಇಷ್ಟು ಹೊತ್ತು ಬೈದರೂ ನೀನು ಏನೊಂದನ್ನೂ ಮಾತನಾಡದೆ ಕಲ್ಲಿನಂತೆ ಕುಳಿತಿರುವೆಯಲ್ಲ. ನಾಚಿಕೆಯಾಗುವುದಿಲ್ಲವೇ?" ಎಂದು ಕೇಳಿದ.

ಬುದ್ಧ, "ನೀನು ಬೈಯುವುದು, ಹೇಳುವುದು ಎಲ್ಲಾ ಮುಗಿಯಿತೇ?" ಎಂದ.

"ಎಲ್ಲಾ ಆಯಿತು. ಈಗ ನೀನು ಹೇಳು" ಎಂದು ಕೇಳಿದ ಬ್ರಾಹ್ಮಣ.

ಬುದ್ಧ, "ಅಯ್ಯಾ ನಿನ್ನ ಮನೆಗೆ ಯಾರಾದರೂ ಬಂಧುಮಿತ್ರರು ಬಂದಿರುತ್ತಾರೆ. ಆಗ ನೀನವರಿಗೆ ಉಣ್ಣಲು ತಿನ್ನಲು ಏನನ್ನಾದರೂ ಕೊಡುವೆ. ಆದರವರು ಏನನ್ನೂ ತಿನ್ನುವುದಿಲ್ಲ, ಮುಟ್ಟುವುದಿಲ್ಲ ಸಹ. ಆಗ ಅವುಗಳನ್ನೆಲ್ಲಾ ಏನು ಮಾಡುವೆ?" ಎಂದು ವಿನಯದಿಂದ ಕೇಳಿದ.

ಬ್ರಾಹ್ಮಣನು "ಅವರು ತೆಗೆದುಕೊಳ್ಳದಿದ್ದರೆ ಅವುಗಳನ್ನು ನನ್ನಲ್ಲಿಯೇ ಇಟ್ಟುಕೊಳ್ಳುತ್ತೇನೆ. ಹಾಗೆ ಮುಂದೆ ಅವುಗಳನ್ನು ನಾವೇ ತಿನ್ನುತ್ತೇವೆ" ಎಂದ.

ಆಗ ಬುದ್ಧ "ಅಯ್ಯಾ ಈಗಲೂ ಅಷ್ಟೇ ಆಗಿರುವುದು. ನೀನು ಬೈದ ಯಾವುಗಳನ್ನೂ ನಾನು ತೆಗೆದುಕೊಂಡಿಲ್ಲ. ಅವೆಲ್ಲವನ್ನೂ ನಿನಗೇ ಬಿಟ್ಟಿದ್ದೇವೆ. ಅವೆಲ್ಲವನ್ನೂ ನೀನೇ ಇಟ್ಟುಕೋ, ನೀನೇ ತಿನ್ನು, ನೀನೇ ಅರಗಿಸಿಕೋ" ಎಂದು ಹೇಳಿದ.

ಮನಃಶುದ್ಧಿ ಇದ್ದ ಮಹಾತ್ಮರು ಕೆಟ್ಟವುಗಳನ್ನು ಮನಸ್ಸಿನ ಮೇಲೆ ತಂದುಕೊಳ್ಳುವುದಿಲ್ಲ. ಮತ್ತೆ ಮನಮಲಿನಕ್ಕೆ ಆಸ್ಪದ ಕೊಡುವುದಿಲ್ಲ. ಈ ಮನಸ್ಸಿನ ಮಲಿನವೇ ದೊಡ್ಡ ನಂಜು (ವಿಷ). ಇದು ಬೇರೋಬ್ಬರ ಮೇಲೆ ಕೆಟ್ಟ ಪರಿಣಾಮ ಬೀರುವುದಕ್ಕಿಂತ ತಮ್ಮ ಮೇಲೆಯೇ ಅದು ಹೆಚ್ಚು ದುಷ್ಪರಿಣಾಮ ಬೀರುವುದು. ಒಬ್ಬ ಹಿಂದಿ ಸುಭಾಷಿತಕಾರ ಹೇಳುತ್ತಾನೆ,

ತನ ಸುಂದರ ಮನ ಮಲಿನ ಕೈಸೆ ।
ವಿಷಪೂರಿತ ಕನಕ ಘಟ ಜೈಸೇ ॥

ವ್ಯಕ್ತಿಯೊಬ್ಬ ಬಹಿರಂಗದಲ್ಲಿ ಬಹಳಷ್ಟು ಅಲಂಕೃತ (ಸುಂದರ)ನಾಗಿ ಕಾಣುತ್ತಿದ್ದಾನೆ. ಆದರೆ ಅವನ ಒಳಮನಸ್ಸು ಸಾಕಷ್ಟು ಹೊಲಸಿನಿಂದ ತುಂಬಿಕೊಂಡಿದೆ. ಅದು ಹೇಗೆಂದರೆ ಒಳಗೆ ವಿಷ ತುಂಬಿಕೊಂಡು, ಹೊರಗೆ ಫಳಫಳ ಹೊಳೆಯುವ ಬಂಗಾರದ ಕೊಡದಂತಿದೆ ಎಂಬ ಅರ್ಥವು.

ಒಬ್ಬ ಮಹಾನ್ ಸಂತ ಊರ ಹೊರಗಿರುವ ದೇವಾಲಯವೊಂದರಲ್ಲಿ ವಾಸವಾಗಿದ್ದ. ಪ್ರತಿದಿನ ಭಿಕ್ಷೆ ಬೇಡಿಕೊಂಡು ಊಟ ಮಾಡುತ್ತಿದ್ದ. ಒಂದು ಓರ್ವ ಹೆಂಗಸು ಅಲ್ಲಿಗೆ ಬಂದು, "ಪೂಜ್ಯರೇ, ನೀವು ಇನ್ನು ಮುಂದೆ ಭಿಕ್ಷೆಗೆ ಹೋಗಬೇಡಿರಿ. ಪ್ರತಿನಿತ್ಯ ನಮ್ಮ ಮನೆಗೆ ಊಟಕ್ಕೆ ಬನ್ನಿ, ಹಾಗೆ ನೀವು ಬಂದಾಗ ನನಗೇನಾದರೂ ಸ್ವಲ್ಪ ಸ್ವಲ್ಪ ಆಧ್ಯಾತ್ಮದ ಬಗ್ಗೆ ಉಪದೇಶ

ಮಾಡಿರಿ" ಎಂದು ಬೇಡಿಕೊಂಡಳು. ಸಂತಮಹಾಶಯ ಅದಕ್ಕೊಪ್ಪಿ, ಅಂದೇ ಅವರ ಮನೆಗೆ ಹೋದ. ಆದರೆ ಹೋಗುವ ಪೂರ್ವದಲ್ಲಿ ತಾ ಊಟ ಮಾಡುವ ಕಂಚಿನ ಬಟ್ಟಲನ್ನು ಹೊರಗೆ ಫಳಫಳ ಹೊಳೆಯುವಂತೆ ತಿಕ್ಕಿಕೊಂಡ. ಹಾಗೆ ಬಟ್ಟಲಿನ ಒಳಗಡೆ ಹೊಲಸನ್ನು ಸವರಿಕೊಂಡು ಹೋಗಿದ್ದ. ಹೋದವನೇ ಊಟಕ್ಕೆ ಕುಳಿತ. ತನ್ನ ಊಟದ ಬಟ್ಟಲನ್ನು ಮುಂದೆ ಇಟ್ಟುಕೊಂಡು ಅದರಲ್ಲಿ ಊಟ ಹಾಕುವಂತೆ ಹೇಳಿದ. ಆ ಹೆಂಗಸು ಊಟವನ್ನು ತಂದು ಆ ಬಟ್ಟಲಲ್ಲಿ ನೀಡಲು ಹೋದಳು. ಬಟ್ಟಲೊಳಗೆ ಹೊಲಸಿರುವುದನ್ನು ಕಂಡು ತಂದ ಊಟ ಕೆಳಗಿಟ್ಟು, ಕೂಡಲೆ ಬಟ್ಟಲು ತೆಗೆದುಕೊಂಡು ಹೋಗಿ; ತೊಳೆದು ತಂದು ಸಂತನ ಮುಂದಿಟ್ಟು ಊಟಕ್ಕೆ ನೀಡಿದಳು. ಸಂತ ಊಟ ಮಾಡಿ ಮೇಲೆದ್ದು ಹೊರಹೋಗಹತ್ತಿದ.

ಆಗ ಆ ಹೆಂಗಸು, "ಪೂಜ್ಯರೆ, ಏನನ್ನಾದರೂ ಉಪದೇಶ ಮಾಡಿರಿ". ಎಂದು ಕೇಳಿದಳು.

"ನಾ ಹೇಳುವುದೇನಿದೆಯಮ್ಮಾ, ಎಲ್ಲಾ ನೀನೇ ಹೇಳಿ ಬಿಟ್ಟಿದ್ದೀಯಿ" ಎಂದರು.

"ನಾನೇನೂ ಮಾತಾಡಿಯೇ ಇಲ್ಲ!" ಎಂದಳು.

"ನೀನು ಮಾತಾಡದಿದ್ದರೂ, ಮಾಡಿ ತೋರಿಸಿರುವೆಯಮ್ಮಾ" ಎಂದರು.

"ಏನನ್ನು" ಎಂದಳು.

"ತಾಯಿ, ಹೊಲಸು ತುಂಬಿದ ಬಟ್ಟಲಿನೊಳಗೆ ಶುದ್ಧವಾದ ಆಹಾರವನ್ನು ಹೇಗೆ ಹಾಕಲು ಬರುವುದಿಲ್ಲವ್ರೋ ಹಾಗೆ ಮಲಿನ ತುಂಬಿಕೊಂಡಿರುವ ಮನಸ್ಸಿನೊಳಗೆ ಪರಿಶುದ್ಧವಾದ ತತ್ವಗಳನ್ನು ತುಂಬಲಾಗುವುದಿಲ್ಲ. ತುಂಬಿದರೂ ಅವು ಕೆಡುವವು. ಅಂದರೆ ತಪ್ಪುಗ್ರಹಿಕೆ ಕಾರಣವಾಗುವವು. ಆದ್ದರಿಂದ ಮನಸ್ಸು ತೊಳೆದುಕೊಂಡಾಗ ಮಾತ್ರ ಸದ್ವಚನಗಳ ಒಳತೂರಿವವು ಎಂಬ ಸತ್ಯ ಇಂದು ನನಗೆ ನೀನೇ ತೋರಿಸಿ ಕೊಟ್ಟೆ ತಾಯಿ" ಎಂದು ಹೇಳಿದ್ದ ಸಂತ ಮಹಾಶಯ. ಇದನ್ನೇ ಶಂಕರಾಚಾರ್ಯರು ಹೇಳಿರುವುದು.

ಸತ್ಸಂಗತ್ವೇ ನಿಸ್ಸಂಗತ್ವಂ ನಿಸ್ಸಂಗತ್ವೇ ನಿರ್ಮೋಹತ್ವಂ ।
ನಿರ್ಮೋಹತ್ವೇ ನಿಶ್ಚಲತತ್ವಂ ನಿಶ್ಚಲತತ್ವೇ ಜೀವನ್ಮುಕ್ತಿ: ॥

ಶರಣ, ಸಂತ, ಮಹಾಂತರ ಅನುಭಾವದ ನುಡಿಗಳನ್ನಾಲಿಸುತ್ತಾ ಬರುವುದರಿಂದ ಶಬ್ದಾದಿ ಪಂಚವಿಷಯಗಳ ಸಂಗ ದೂರವಾಗುವವು. ಮತ್ತೆ ಇಂಥವರ ಸಂಗ ಹೆಚ್ಚಾದಂತೆಲ್ಲ ಮೋಹ ನಷ್ಟವಾಗುವುದು. ಮೋಹ ನಷ್ಟವಾದಾಗ ಮನಸ್ಸು ನಿಶ್ಚಲವಾಗುವುದು. ಮನಸ್ಸು ನಿಶ್ಚಲವಾದಾಗ ಜೀವನ್ಮುಕ್ತಿ ಲಭ್ಯವಾಗುವುದು. ಅಂದರೆ!, "ಚಂಚಲ ಮನಸ್ಸೇ ಜೀವಾತ್ಮ! ನಿಶ್ಚಲ ಮನಸ್ಸೇ ಪರಮಾತ್ಮ" ।

ರಮಣ ಮಹರ್ಷಿಗಳ ಆಶ್ರಯದಲ್ಲಿ ಒಬ್ಬ ಶಿಷ್ಯನಿದ್ದ. ಅವನಿಗೆ ಆಧ್ಯಾತ್ಮ ಅಷ್ಟು ಬೇಗ ಅರ್ಥವಾಗಲಿಲ್ಲ. ಅದಕ್ಕವನು ರಮಣ ಮಹರ್ಷಿಗಳಿಗೆ ಹೇಳಿದ. "ಪೂಜ್ಯರೇ, ನಿಮ್ಮ

ಉಪದೇಶ ನನ್ನ ತಲೆಯೊಳಗೆ ಹೋಗುತ್ತಿಲ್ಲ. ಆದ್ದರಿಂದ ನಾನು ಮರಳಿ ಮನೆಗೆ ಹೋಗುತ್ತೇನೆ. ನನಗೆ ಅಪ್ಪಣೆ ಕೊಡಿರಿ" ಎಂದು ಕೇಳಿಕೊಂಡ.

ಆಗ ಮಹರ್ಷಿಗಳು ಗೋಶಾಲೆಯಲ್ಲಿದ್ದ ಸಗಣಿಯ ಪುಟ್ಟಿಯೊಂದನ್ನು ತರಿಸಿ ಹೀಗೆ ಹೇಳಿದರು. "ಈ ಪುಟ್ಟಿಯನ್ನು ಬಾವಿಯ ಹಗ್ಗಕ್ಕೆ ಕಟ್ಟಿ ಬಾವಿಯೊಳಗೆ ಬಿಟ್ಟು ಈ ಪುಟ್ಟಿಯೊಳಗೆ ನೀರೆಳೆದು ಮೇಲೆ ತರಬೇಕು" ಎಂದು ಆಜ್ಞಾಪಿಸಿದರು.

ಅದಕ್ಕಾತ, "ಅದಾಗದ ಮಾತು. ಪುಟ್ಟಿಯಲ್ಲಿ ನೀರು ನಿಲ್ಲುವುದಿಲ್ಲ" ಎಂದ.

"ಆಗಲಿ ಸ್ವಲ್ಪ ಹೊತ್ತು ಪ್ರಯತ್ನ ಮಾಡಿ ನೋಡು" ಎಂದು ಹೇಳಿದರು.

ಆತ ಬಹಳ ಹೊತ್ತು ಪ್ರಯತ್ನ ಮಾಡಿದ. ಅಂದರೆ ಸಗಣಿಯ ಪುಟ್ಟಿಯನ್ನು ಕಟ್ಟಿ ನೀರೊಳಗೆ ಬಿಟ್ಟು ಮತ್ತೆ ಮೇಲೆಳೆದ. ಹೀಗೆ ಸುಮಾರು ಮೂವತ್ತು ನಲವತ್ತು ಬಾರಿ ಪ್ರಯತ್ನಿಸಿದ. ಕೊನೆಗೆ ಗುರುಗಳಿಗೆ ಹೇಳಿದ. "ಪೂಜ್ಯರೇ ಆಗುತ್ತಿಲ್ಲ. ನೀರು ಬರಲು ಸಾಧ್ಯವಿಲ್ಲ" ಎಂದು.

ರಮಣ ಮಹರ್ಷಿಗಳಾಗ "ಆಯಿತು, ಪುಟ್ಟಿಯನ್ನು ಬಿಚ್ಚಿ ತೆಗೆದುಕೊಂಡು ಬಾ" ಎಂದರು. ಆತ ಪುಟ್ಟಿಯನ್ನು ಬಿಚ್ಚಿ ತಂದು ಗುರುಗಳ ಮುಂದೆ ಇಟ್ಟ. ಆಗ ಮಹರ್ಷಿಗಳು ಮತ್ತೆ ಕೇಳಿದರು. "ಆಗ ಪುಟ್ಟಿ ಹೇಗೆ ಕಾಣುತ್ತಿತ್ತು, ಈಗ ಹೇಗೆ ಕಾಣುತ್ತಿದೆ, ಪುಟ್ಟಿಯಲ್ಲಿ ಕಂಡುಬರುವ ಬದಲಾವಣೆ ಏನು? ಎಂದು.

ಅವನು ಹೇಳಿದ, "ಆಗ ಪುಟ್ಟಿಯ ತುಂಬ ಸಗಣಿ ಮೆತ್ತಿಕೊಂಡಿತ್ತು. ಈಗ ಪುಟ್ಟಿ ಸ್ವಚ್ಛವಾಗಿದೆ" ಎಂದ.

ಅದಕ್ಕೆ ಮಹರ್ಷಿಗಳು "ಹಾಗಾಗುವುದಕ್ಕೆ ಕಾರಣ?"

"ಪುಟ್ಟಿ ಮತ್ತೆ ಮತ್ತೆ ನೀರಿನೊಳಗೆ ಹೋಗಿ ಬಂದಿದ್ದರಿಂದ ಅದು ಸ್ವಲ್ಪ ಸ್ವಲ್ಪವೇ ಸ್ವಚ್ಛವಾಗುತ್ತಾ ಈಗ ಈ ಸ್ಥಿತಿಗೆ ಬಂದಿದೆ" ಎಂದನಾತ.

ಮಹರ್ಷಿಗಳು ಹೇಳಿದರು, "ಆಧ್ಯಾತ್ಮವೂ ಅಷ್ಟೇ. ಅಷ್ಟು ಸುಲಭವಾಗಿ ಅರ್ಥವಾಗುವಂಥದ್ದಲ್ಲ. ದಿನದಿನವೂ ನಿನ್ನ ಮನಸ್ಸಿನಲ್ಲಿ ಹತ್ತಿಕೊಂಡಿರುವಂತಹ ಲೌಕಿಕದ ಕೊಳೆ ಆ ಸಗಣಿ ಪುಟ್ಟಿಯಂತೆ ಸ್ವಚ್ಛವಾಗುತ್ತಾ ಬರಬೇಕು. ಆ ಕೊಳೆ ಇಂದು ನಿನ್ನೆಯದಲ್ಲ. ಈ ಜನ್ಮದ್ದಷ್ಟೆ ಅಲ್ಲ, ಜನ್ಮಜನ್ಮಾಂತರಗಳಿಂದಲೂ ಅಂಟಿಕೊಂಡು ಬಂದಿರುವಂಥದ್ದು. ಅದು ಅಷ್ಟು ಸುಲಭವಲ್ಲ. ಕಷ್ಟವಾದರೂ ಸಾಧ್ಯವಿದೆ" ಎಂದು ಹೇಳಿದರು. ಮುಂದವನು ಅವರಲ್ಲಿದ್ದು ಮಹಾಜ್ಞಾನಿಯಾದ.

ಮನಸ್ಸು ಅದೆಷ್ಟು ದುರ್ಬಲಗೊಳ್ಳುವುದೋ ಅಷ್ಟೇ ಸಬಲಗೊಳ್ಳುವುದು ಸಹ. ದುರ್ಬಲ ಮನಸ್ಸನ್ನು ಸಬಲಗೊಳಿಸುವುದು. ಸಬಲ ಮನಸ್ಸನ್ನು ದುರ್ಬಲಗೊಳಿಸುವುದೂ ಸಹ. ಅದಕ್ಕೆ ಕುರುಕ್ಷೇತ್ರ ಮಹಾಯುದ್ಧದ ಸಂದರ್ಭದಲ್ಲಿನ ಸನ್ನಿವೇಶವೊಂದು ಹೀಗಿದೆ, ಕುರುಕ್ಷೇತ್ರ ಯುದ್ಧ ನಡೆವುದು ಖಾತ್ರಿಯಾಯಿತು. ಶ್ರೀಕೃಷ್ಣನ ಸಮಸ್ತ ಸೈನ್ಯ ಕೌರವರ ಕಡೆಗೆ. ನಿಶ್ಶಸ್ತ್ರಧಾರನಾದ

ಶ್ರೀಕೃಷ್ಣ ಪರಮಾತ್ಮ ಪಾಂಡವರ ಕಡೆಗೆ. ಇಂತಹ ಒಂದು ತೀರ್ಮಾನ ಆಗಿ ಹೋಗಿತ್ತು.

ನಕುಲ ಸಹದೇವರ ತಾಯಿ ಮಾದ್ರಿಯ ಸಹೋದರ, ಶಲ್ಯ. ಧರ್ಮರಾಜ ಆತನ ಬಳಿ ಬಂದು ಯುದ್ಧದಲ್ಲಿ ತಮ್ಮ ಕಡೆ ಸಹಾಯ ಮಾಡುವಂತೆ ಯಾಚಿಸಿದ. ಶಲ್ಯ ಧರ್ಮರಾಜನಿಗೆ ಒಪ್ಪಿಗೆ ಕೊಟ್ಟು ಕಳುಹಿಸಿದ. ಯುದ್ಧ ಸಂದರ್ಭಕ್ಕೆ ಸರಿಯಾಗಿ ಶಲ್ಯ ತನ್ನ ಸೈನ್ಯ ಸಮೇತ ಪಾಂಡವರು ಉಳಿದು ಕೊಂಡಿದ್ದ ಉಪಪ್ಲಾವ್ಯ ನಗರದ ಕಡೆಗೆ ನಡೆದ.

ಧರ್ಮರಾಜನಿಗೆ ಶಲ್ಯನ ಸಹಾಯ ಸಿಕ್ಕಿರುವ ವಿಷಯ ದುರ್ಯೋಧನನಿಗೆ ತಿಳಿಯಿತು. ಅದಕ್ಕೊಂದು ಕಪಟ ನಾಟಕವಾಡಿದ. ಶಲ್ಯ ಬರುತ್ತಿದ್ದ ದಾರಿಯಲ್ಲಿ ಸೈನಿಕರು ತಂಗಲು ಡೇರೆಗಳನ್ನು ಹಾಕಿಸಿದ. ಹಾಗೆ ಸಂತೃಪ್ತ ಭೋಜನದ ವ್ಯವಸ್ಥೆಯನ್ನೂ ಮಾಡಿದ. ಬಹುಶ: ಧರ್ಮರಾಜನೇ ಈ ವ್ಯವಸ್ಥೆಯನ್ನೆಲ್ಲಾ ಮಾಡಿರಬೇಕೆಂದುಕೊಂಡ ಶಲ್ಯ ಮಹಾರಾಜ. ಮುಂದದು ಗುಟ್ಟಾಗಿ ಉಳಿಯಲಿಲ್ಲ. ಆ ವ್ಯವಸ್ಥೆ ದುರ್ಯೋಧನನದೆಂಬುದು ಗೊತ್ತಾಯಿತು. ಕೊನೆಗೆ ದುರ್ಯೋಧನ ಶಲ್ಯನಲ್ಲಿಗೆ ಬಂದು "ನನ್ನ ಆತಿಥ್ಯ ಸ್ವೀಕರಿಸಿರುವ ನಿಮಗೆ ಅನಂತ ಪ್ರಣಾಮಗಳು" ಎಂದನು.

"ನಿಮ್ಮ ಆತಿಥ್ಯಕ್ಕೆ ಪ್ರತಿಯಾಗಿ ನಾನೇನು ಮಾಡಲಿ" ಎಂದು ಕೇಳಿದ ಶಲ್ಯ.

"ನೀವು ನಮ್ಮೊಡನೆ ಯುದ್ಧದಲ್ಲಿ ಕೈ ಜೋಡಿಸಬೇಕು" ಎಂದ ಕೌರವ.

ಧರ್ಮಸಂಕಟಕ್ಕೆ ಸಿಕ್ಕಿಕೊಂಡ ಶಲ್ಯ ಮಹಾರಾಜ ಕೌರವನನ್ನು ಹೀಗೆ ಕೇಳಿದ. "ದುರ್ಯೋಧನ ಈ ಮೊದಲೇ ಧರ್ಮರಾಜನಿಗೆ ಮಾತು ಕೊಟ್ಟಿರುವೆ. ಆದರೀಗ ನಿನ್ನ ಆತಿಥ್ಯವನ್ನು ಪಡೆದಿರುವೆ. ಇದಕ್ಕೆ ಪರಿಹಾರ ಧರ್ಮರಾಜನಲ್ಲಿಯೇ ಸಿಗಬೇಕು. ಆದ್ದರಿಂದ ಒಮ್ಮೆ ಆತನನ್ನು ಕಂಡು ಬರುತ್ತೇನೆ. ಬಂದ ನಂತರ ಸೂಕ್ತ ಒಪ್ಪಿಗೆ ನೀಡುತ್ತೇನೆ" ಎಂದು ತಿಳಿಸಿ ಧರ್ಮರಾಜನಲ್ಲಿಗೆ ಬಂದು, ನಡೆದುದ್ದನ್ನೆಲ್ಲ ತಿಳಿಸಿದನು. ಧರ್ಮರಾಜನಿಗೆ ಶಲ್ಯನ ಧರ್ಮಸಂಕಟ ಅರ್ಥವಾಯಿತು.

ಧರ್ಮರಾಜ ಕೊನೆಗೊಂದು ವಿನಂತಿ ಮಾಡಿಕೊಂಡ. "ಶಲ್ಯ ನೀನು ನಿನ್ನ ಸೈನ್ಯವನ್ನೆಲ್ಲಾ ಕೌರವನಿಗೆ ಬಿಟ್ಟುಬಿಡು. ಆದರೆ ನೀನು ಮಾತ್ರ ಯುದ್ಧದಲ್ಲಿ ಕರ್ಣನಿಗೆ ಸಾರಥಿಯಾಗಬೇಕಷ್ಟೆ. ಆಗ ನೀನು ಕರ್ಣನಿಗೆ "ಅರ್ಜುನನ ಬಲ ಪರಾಕ್ರಮದ ಮುಂದೆ ನಿನ್ನ ಪರಾಕ್ರಮ ಏನೂ ಅಲ್ಲ! ಎಂದು ಆಗಾಗ ಕರ್ಣನಿಗೆ ಹೇಳುತ್ತಾ ಅವನ ಮನೋಬಲವನ್ನು ಕುಗ್ಗಿಸಬೇಕು. ಇಷ್ಟು ಮಾಡಿದರೆ ಸಾಕು, ನೀನು ನನಗೆ ಮೊದಲು ಕೊಟ್ಟ ಮಾತು ಉಳಿಸಿದಂತಾಗುವುದು" ಹೀಗೆ ಹೇಳಿ ಕಳುಹಿಸಿದ್ದ.

ಮುಂದೆ ನಡೆದ ಕುರುಕ್ಷೇತ್ರ ಮಹಾಯುದ್ಧದಲ್ಲಿ ಶಲ್ಯನು ಹಾಗೆಯೇ ಮಾಡಿದ್ದ. ಕರ್ಣನು ಯುದ್ಧದಲ್ಲಿ ತನ್ನ ಮಾತು ಕೇಳಲಿಲ್ಲವೆಂದು, ಶಲ್ಯನು ಸಾರಥ್ಯವನ್ನು ಬಿಟ್ಟೇ ರಥದಿಂದ ಕೆಳಗಿಳಿದು ಹೋಗಿದ್ದ. ಅರ್ಥಾತ್ ಈ ಕಥೆಯಲ್ಲಿ ಮನೋವಿಜ್ಞಾನ ಅಡಗಿದೆ!

ಆಧ್ಯಾತ್ಮ ಜೀವಾತ್ಮನ ದುರ್ಬಲ ಮನಸ್ಸನ್ನು ಸಬಲಗೊಳಿಸುವಂಥದ್ದು. ಮೃತ

ಭಾವವನ್ನು ನಾಶಗೊಳಿಸಿ ಅಮೃತ ತತ್ವವನ್ನು ಬೋಧಿಸುವಂಥದ್ದು. ಆದರೆ ಆಧ್ಯಾತ್ಮ ಎಂಬುದು ಭೌತಿಕದ ಸ್ಥೂಲ ವಸ್ತು ಹಾಗೂ ವ್ಯಕ್ತಿಗಳನ್ನು ತೋರಿಸಿ ಹೇಳುವಂತಹ ಬೋಧೆಯಲ್ಲಿ. ಅದು ಬುದ್ಧಿಗೆ ನಿಲುಕುವ ವಿಜ್ಞಾನವಲ್ಲ. ಬುದ್ಧಿ ತತ್ವವನ್ನು ಮೀರಿ ನಿಂತ ಜ್ಞಾನ. ಅಂದರೆ ಪರಿಶುದ್ಧ ಅರಿವು. ಅದು ಅವಿರೋಧವಾದ ಆನಂದಬೋಧೆ.

ಒಬ್ಬ ಗುರುವಿನ ಬಳಿಗೆ ಈ ಆಧ್ಯಾತ್ಮದ ಸಾಧನೆಗೆಂದೇ ಇಬ್ಬರು ಬಂದರು. ಬಂದು ಗುರುವಿನಲ್ಲಿ ಜ್ಞಾನ ಭಿಕ್ಷೆ ಬೇಡಿದರು. ಕೂಡಲೆ ಗುರುವು ಅವರಿಬ್ಬರನ್ನು ಪರೀಕ್ಷೆಗೊಳಪಡಿಸಿದ. ಅವರಿಬ್ಬರ ಕೈಗೆ ಒಂದೊಂದು ಪಾರಿವಾಳವನ್ನು ಕೊಟ್ಟು "ಯಾರೂ ನೋಡಿರಬಾರದು ಅಂತಹ ಜಾಗದಲ್ಲಿ ನಿಮ್ಮ ಕೈಯಲ್ಲಿರುವ ಪಾರಿವಾಳವನ್ನು ಕೊಂದು ಬರಬೇಕು. ಅಂಥವರು ಮಾತ್ರ ನನ್ನ ಶಿಷ್ಯರಾಗಲು ಅರ್ಹತೆ ಪಡೆವಿರಿ. ಹಾಗೆ ಅವರಿಗೆ ಆಧ್ಯಾತ್ಮ ಹತ್ತಿರವಾಗುವುದು. ಹೋಗಿ ಮೊದಲು ನಾನು ಹೇಳಿರುವ ಕೆಲಸ ಮಾಡಿಕೊಂಡು ಬನ್ನಿ" ಎಂದು ಹೇಳಿ ಅವರನ್ನು ಕಳುಹಿಸಿದರು.

ಒಬ್ಬ ಮಾತ್ರ ಯಾರೂ ಇಲ್ಲದ ಜಾಗದಲ್ಲಿ ಆ ಪಾರಿವಾಳವನ್ನು ಕೊಂದು ಹಾಕಿ ಗುರುಗಳಲ್ಲಿಗೆ ಬಂದ. ಮತ್ತೊಬ್ಬ ಜನರಿಲ್ಲದ ಜಾಗಕ್ಕೆ ಹೋಗಿ ಪಾರಿವಾಳವನ್ನು ಕೊಲ್ಲಲೆತ್ನಿಸಿದ! ಆದರೆ ಅವನ ಮನಸ್ಸಿನಲ್ಲಿ "ಯಾರೂ ನೋಡದಿದ್ದರೂ ನಾನು ನೋಡುತ್ತಿರುವೆನಲ್ಲ" ಎಂದುಕೊಂಡು ಕಣ್ಣು ಮುಚ್ಚುಕೊಂಡು ಪುನ: ಸಾಯಿಸಲೆತ್ನಿಸಿದ. ಆದರೂ ಅವನ ಮನಸ್ಸು ಒಪ್ಪಲಿಲ್ಲ. "ನನ್ನ ಕಣ್ಣು ನೋಡದಿದ್ದರೂ ನನ್ನ ಮನಸ್ಸಿಗೆ ಗೊತ್ತಾಗುತ್ತದೆಯಲ್ಲ. ಮನವರಿಯದೆ ಕಳ್ಳತನವಿಲ್ಲ" ಎಂದು ಭಾವಿಸಿಕೊಂಡು ಪಕ್ಷಿಯನ್ನು ಸಾಯಿಸದೆ ಗುರುಗಳಲ್ಲಿಗೆ ಬಂದು "ಗುರುಗಳೇ, ಇದು ನನ್ನಿಂದ ಸಾಧ್ಯವಿಲ್ಲ. ಯಾರೂ ಇಲ್ಲದ ಜಾಗ ನನಗೆ ಸಿಗಲಿಲ್ಲ. ಯಾಕೆಂದರೆ ಯಾರೂ ಇಲ್ಲದ ಜಾಗದಲ್ಲಿ, ನನ್ನ ಕಣ್ಣು ನೋಡುತ್ತಿತ್ತು! ಮತ್ತೆ ಕಣ್ಣುಮುಚ್ಚಿಕೊಂಡೆ. ಆದರೆ ಕೊಲ್ಲುವುದು ನನ್ನ ಮನಸ್ಸಿಗೆ ಗೊತ್ತಾಗುತ್ತಿತ್ತು! ಆದ್ದರಿಂದ ನನ್ನಿಂದ ಆ ಪಕ್ಷಿಯನ್ನು ಸಾಯಿಸಲು ಸಾಧ್ಯವಾಗಲಿಲ್ಲ. ಕ್ಷಮಿಸಿಬಿಡಿ ನಾ ಮರಳಿ ನನ್ನ ಮನೆಗೆ ಹೋಗಿಬಿಡುತ್ತೇನೆ" ಎಂದು ಹಿಂದಕ್ಕೆ ಹೆಜ್ಜೆಯಿಟ್ಟ.

ಗುರುಗಳಾಗ, "ನೀನು ಹೋಗಬೇಡ. ನೀನೇ ನನ್ನ ನಿಜವಾದ ಶಿಷ್ಯ. ಆಧ್ಯಾತ್ಮ ಎಂಬುದು ಸ್ಥೂಲ ವಿಚಾರವಲ್ಲ. ಸೂಕ್ಷ್ಮಾತಿ ಸೂಕ್ಷ್ಮ. ಆದ್ದರಿಂದ ನಿನ್ನ ಬುದ್ಧಿ ಸ್ಥೂಲವಾಗಿಯಷ್ಟೇ ವಿಚಾರಿಸಿದೆ. ಸೂಕ್ಷ್ಮ ಮನಸ್ಸಿನವರೆಗೂ ಹೋಗಿದೆ ಎಂದ ಮೇಲೆ ನೀನೇ ನನ್ನ ನಿಜವಾದ ಶಿಷ್ಯ" ಎಂದು ಅವನನ್ನು ಆಲಂಗಿಸಿ ಶಿಷ್ಯನಾಗಿ ಸ್ವೀಕರಿಸಿದರು. ಹೀಗೆ ಆಧ್ಯಾತ್ಮದ ಜ್ಞಾನಕ್ಕೆ ಮೊದಲು ಮನಸ್ಸಿನ ಬಗ್ಗೆ ಸಾಕಷ್ಟು ತಿಳಿದಿರಬೇಕು. ಅಷ್ಟೇ ಅಲ್ಲ, ಮನೋನಿಗ್ರಹ ಆಧ್ಯಾತ್ಮದ ಸಾಧನೆಯ ಪ್ರಮುಖ ಹೆಬ್ಬಾಗಿಲು.

# ಗುರಿ-ಗುರು

ಗುರಿ ಇಲ್ಲದವರಿಗೆ ಗುರು ಬೇಕಿಲ್ಲ. ಇದನ್ನೇ ಮಹಾತ್ಮರೂ ಸಹ ಹೀಗೆ ಹೇಳುತ್ತಾರೆ, "ಮೊದಲು ಗುರಿಯಿರಬೇಕು, ನಂತರ ಗುರು ಬೇಕು" ಎಂದು. ನಾವು ಹಿಂದಿನ ಅಂಕಣಗಳಲ್ಲಿ ತಿಳಿಯುತ್ತಾ ಬಂದದ್ದು, ಮನುಕುಲದ ಗುರಿಗೆ ಸಂಬಂಧಿಸಿದ ವಾಸ್ತವಿಕ ಸತ್ಯಾಂಶಗಳು.

'ಗುರಿ' ಏನೇ ಇರಲಿ, ಮೊದಲು ನಾವದನ್ನು ಪಡೆಯಬೇಕೆಂಬ ಇಚ್ಛಾಶಕ್ತಿ ಪ್ರಬಲವಾಗಿರಬೇಕು. ಅದನ್ನೇ ಉತ್ಕಟಬಯಕೆ ಅಥವಾ ಜಿಜ್ಞಾಸೆ ಎನ್ನುವುದು. ಈ ಇಚ್ಛಾಶಕ್ತಿಯ ಪ್ರಬಲತೆಯು ಮುಂದೆ ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳಾಗಿ ಪ್ರಬಲಗೊಂಡು ಗುರಿ ತಲುಪಲು ಸಾಧ್ಯವಾಗುವುದು.

ಮಹದಿಚ್ಛೆ ಅಥವಾ ಮಹತ್ವಾಕಾಂಕ್ಷೆಯುಳ್ಳ ವ್ಯಕ್ತಿಯು, ಜೀವನದಲ್ಲಿ ಏನನ್ನು ಬೇಕಾದರೂ ಸಾಧಿಸಬಲ್ಲ. ಯಾವೊಬ್ಬ ವ್ಯಕ್ತಿ ತನ್ನ ಜೀವನದ ಗುರಿಯನ್ನು ಮೊದಲೇ ನಿರ್ಣಯಿಸಿ ಅದಕ್ಕೆ ತಕ್ಕಂತೆ ಪ್ರಯತ್ನಿಸುತ್ತಾ ಹೋದರೆ ಯಾವುದೂ ಅಸಾಧ್ಯವಲ್ಲ.. ನೆಪೋಲಿಯನ್ ಬೋನಾಪಾಟ್ ಬಾಲ್ಯದಲ್ಲಿ ಅತ್ಯಂತ ಕಡುಬಡವ. ಮುಂದೆ ಈತ ಯೂರೋಫ್ ದೇಶದ ಸರ್ವಾಧಿಕಾರಿಯಾದ. ಅಂದರೆ ಚಕ್ರವರ್ತಿಯಗಿ ಮೆರೆದ. ಇದಕ್ಕೆ ಕಾರಣ ಬಾಲ್ಯದಲ್ಲಿಯೇ ಆತನ ಮನಸ್ಸಿನಲ್ಲಡಗಿಕೊಂಡಿದ್ದ ಸರ್ವಾಧಿಕಾರತ್ವದ ಇಚ್ಛಾಶಕ್ತಿಯ ಬೀಜವು.

ಮುಂದೊಮ್ಮೆ ಈತ ಸೈನಿಕರ ಶಾಲೆ ಸೇರಿದ್ದ. ಒಂದು ದಿನ ಮೇಲಾಧಿಕಾರಿಗಳು ಅಲ್ಲಿಗೆ ಬಂದಿದ್ದರು. ಮೇಲಾಧಿಕಾರಿ ಪ್ರತಿಯೊಬ್ಬ ಬಾಲಕರನ್ನು ಪ್ರಶ್ನಿಸುತ್ತಾ ಬಾಲಕ ನೆಪೋಲಿಯನ್ ಬಳಿಬಂದು "ಮುಂದೆ ನೀನೇನಾಗ ಬಯಸುವೆ?" ಎಂದು ಪ್ರಶ್ನಿಸಿದ್ದ. ಹಿಂದುಮುಂದು ನೋಡದೆ ಅದಕ್ಕುತ್ತರವಾಗಿ "ನಾನೀದೇಶದ ಸಾರ್ವಭೌಮನಾಗುತ್ತೇನೆ" ಎಂದು ದಿಟ್ಟತನದಿಂದ ಹೇಳಿದ್ದ. ಮುಂದೆ ಯುರೋಫ್ ದೇಶದ ಸಾರ್ವಭೌಮನಾಗಿ ಮೆರೆದ.

ರಾಮಕೃಷ್ಣ ಪರಮಹಂಸರು ಹೇಳುತ್ತಾರೆ. "ಕೈಯಲ್ಲಿ ಭಂಗಿ ಹಿಡಿದುಕೊಂಡು 'ಭಾಂಗ್ ಭಾಂಗ್' ಎಂದು ಅರಚಾಡಿದರೆ ಮತ್ತು ಬರುವುದಿಲ್ಲ. ಅದಕ್ಕೆ ಬೇಕಾದ ವಸ್ತುಗಳನ್ನು ಅದರಲ್ಲಿ ತುಂಬಬೇಕು. ನಂತರ ಬೆಂಕಿ ಹಚ್ಚಿ, ಭಂಗಿ ಸೇದಬೇಕು. ಆಗ ಮಾತ್ರ ಮತ್ತೇರಲು ಸಾಧ್ಯ" ಎಂದು. ಹೀಗೆ ಯಾವೊಂದು ಕಾರ್ಯವನ್ನು ಹೇಗೇಗೋ ಮಾಡಲು ಸಾಧ್ಯವಿಲ್ಲ.

ಯಾವೊಂದು ಕಾರ್ಯ ಸಾಧನೆಯ ಪೂರ್ವ ಆ ಕಾರ್ಯಕ್ಕೆ ಸಂಬಂಧಿಸಿದ ಕ್ರಮಬದ್ಧತೆಗಳನ್ನು ಅನುಸರಿಸುವುದು ಅನಿವಾರ್ಯವಾಗಿದೆ. ಈ ಬಗ್ಗೆ ಒಂದು ದೃಷ್ಟಾಂತ. ಒಬ್ಬ ಮಹಾನ್ ಕಳ್ಳ. ಅವನಿಗೆ ವಯಸ್ಸಾಗಿತ್ತು, ಮುದುಕನಾಗಿದ್ದ, ತಾನು ಸಾಯುವ ಪೂರ್ವ ತನ್ನ ಮಗನಿಗೆ ಕಳ್ಳತನ ಮಾಡುವ ಚಾಣಾಕ್ಷತನವನ್ನು ಕಲಿಸಿಕೊಡಬೇಕೆಂದುಕೊಂಡ. ಅದೊಂದು ದಿನ ರಾತ್ರಿ ಮಗನನ್ನು ಕರೆದುಕೊಂಡು ಹೋಗಿ ದೊಡ್ಡ ಶ್ರೀಮಂತರ ಮನೆಗೆ ಕನ್ನ ಹಾಕಿಸಿ ಹೇಳಿದ, "ನೀನೊಬ್ಬನೆ ಒಳ ಹೋಗಿ ಕಳ್ಳತನ ಮಾಡಿಕೊಂಡು ಬಾ, ನಾನು ಇಲ್ಲಿಯೇ ಕಾವಲು ಕಾಯುತ್ತೇನೆ" ಎಂದು ಹೇಳಿ ಕಳುಹಿಸಿದ. ಸ್ವಲ್ಪ ಸಮಯದ ನಂತರ "ಕಳ್ಳಾ, ಕಳ್ಳಾ, ಕಳ್ಳಾ"

ಎಂದು ಜೋರಾಗಿ ಕೂಗಿಕೊಂಡು ಓಡಿ ಹೋಗಿ ತನ್ನ ಮನೆ ಸೇರಿಕೊಂಡ.

ಆಜುಬಾಜಿನಲ್ಲಿದ್ದ ಜನರಿಗೆ ಎಚ್ಚರವಾಯಿತು. ಕೂಡಲೆ ಅವರು ಎದ್ದು ಹೊರಬರಹತ್ತಿದರು. ಇತ್ತ ಆ ಕಳ್ಳನಿಗೆ ಅದು ತನ್ನ ತಂದೆಯ ಧ್ವನಿಯೆಂದು ಅರ್ಥವಾಯಿತು. ಆದರೂ ಕೊನೆಯಲ್ಲಿ ಕೋಪ ನಿಗ್ರಹಿಸಿಕೊಂಡು ಹೇಗೋ ತಪ್ಪಿಸಿಕೊಂಡು ಬಂದು ಮನೆ ಸೇರಿದ. ತಂದೆಯನ್ನು ಸಿಟ್ಟಿನಿಂದ ದುರುಗುಟ್ಟಿಕೊಂಡು ನೋಡುತ್ತಾ, "ನೀನು ನನ್ನನ್ನು ಕಳ್ಳತನ ಮಾಡಲು ಕಳಿಸಿದ್ದೋ? ಅಥವಾ ಜನರಿಂದ ನನಗೆ ಒದೆ ತಿನಿಸಿ ಜೈಲಿಗೆ ಕಳುಹಿಸಲೆಂದು ಕಳಿಸಿದ್ದೋ?" ಎಂದು ಕೇಳಿದ.

"ಎರಡೂ ಎಲ್ಲ. ಕಳ್ಳತನ ಮಾಡುವುದನ್ನು ಕಲಿಸಲು ಕಳಿಸಿದ್ದೆ" ಎಂದ ತಂದೆ.

"ಓಹೋ! ಕಳ್ಳತನ ಕಲಿಸುವುದು ಹೀಗೋ"? ಎಂದು ಕೇಳಿದ ಮಗ.

"ಹೌದು, ಕಳ್ಳನಾಗುವ ಅರ್ಹತೆ ಪಡೆಯಲು ಮೊದಲು ತಪ್ಪಿಸಿಕೊಳ್ಳುವುದನ್ನು ಕಲಿಯಬೇಕು. ಆಗ ಮಾತ್ರ ಕಳ್ಳತನ ಕರಗತವಾಗುವುದು. ಈಗ ನಿನಗೆ ನಾನು ಕಲಿಸಿದ್ದು ಕಳ್ಳನಾಗಲು ಕೊಟ್ಟಂತಹ ಪ್ರಥಮ ಶಿಕ್ಷಣ ಎಂದು ಹೇಳಿದ.

ಅನಾಮಿಕನ ಸೂಕ್ತಿಯೊಂದು ಹೀಗಿದೆ. "ಯಶಸ್ಸಿನ ಹಾದಿಯಲ್ಲಿ ಅನೇಕ ರೀತಿಯ ಪ್ರಲೋಭಗಳೆಂಬ ನಿಲ್ದಾಣಗಳಿರುತ್ತವೆ. ಅಲ್ಲಿ ಬಲಿಯಾಗದೆ ಪಯಣ ಮುಂದುವರಿಸಿದಾತ ಗೆಲ್ಲುತ್ತಾನೆ" ಎಂತೆಂದು. ಹೌದು, ಗೆಲುವನ್ನು ಹತ್ತಿರವಾಗಿಸಿಕೊಳ್ಳಲು ಹಲವಾರು ಮೆಟ್ಟಿಲುಗಳನ್ನು ಹತ್ತಬೇಕು. ಹಾಗೆ ಹಲವಾರು ಅಡ್ಡಿ ಆತಂಕಗಳನ್ನೂ ಸಹ ಹೆದರಿಸಬೇಕು. ಇಂತಹ ಶಕ್ತಿ ಮೊದಲು ನಮ್ಮಲ್ಲಿ ನಾವೇ ಸಂಪಾದಿಸಿಕೊಳ್ಳಬೇಕು. ಇದೇ ಉತ್ಕಟವಾದ ಬಯಕೆಯು. ಇದಕ್ಕೊಬ್ಬ ಮಾರ್ಗದರ್ಶಕ ಅವಶ್ಯ. ಆತನನ್ನೇ 'ಗುರು' ಎನ್ನುವುದು. ಅಂತಹ ಗುರುವನ್ನು ಶಿವಶರಣರು ಹೀಗೆ ಬಣ್ಣಿಸುತ್ತಾರೆ.

ಹರ ತನ್ನ ರೂಪತೋರಲಿಕ್ಕೆ ಶ್ರೀಗುರುವಾದ
ಆ ಗುರುವೇ ಕರಸ್ಥಲಕ್ಕೆ ಲಿಂಗವಾದ
ಮನಸ್ಥಲಕ್ಕೆ ಮಂತ್ರವಾದ, ತನುಸ್ಥಲಕ್ಕೆ ಪ್ರಸಾದವಾದ
ಪ್ರಾಣಸ್ಥಲಕ್ಕೆ ಜಂಗಮವಾದ ಕೂಡಲ ಚೆನ್ನಸಂಗಯ್ಯನಲ್ಲಿ
ಶಿವಯೋಗಿ ಸಿದ್ಧರಾಮಯ್ಯ ಒಬ್ಬರೇ ತಾವಾದರು

ಇದು ಗುರುವಿನ ಶಕ್ತಿಯೂ ಸಹ. ಗುರುವೇಷಧಾರಿಗಳೆಲ್ಲರೂ ಗುರುಶಕ್ತಿ ಹೊಂದಿರಲು ಸಾಧ್ಯವಿಲ್ಲ. ಹೀಗೆ ಭಕ್ತನೂ ಸಹ. ಗುರುಶಿಷ್ಯರ ಯೋಗ್ಯತೆಗಳು ಹೇಗಿರಬೇಕು? ಎಂಬುದರ ಬಗ್ಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಗುರುಕಾರುಣ್ಯ ಸ್ಥಲದಲ್ಲಿ ರೇಣುಕ ಭಗವತ್ಪಾದರು ಹೀಗೆ ಹೇಳುತ್ತಾರೆ.

ತತೋ ವಿವೇಕ ಸಂಪನ್ನೋ ವಿರಾಗೀ ಶುದ್ಧಮಾನಸಃ ।
ಜಿಜ್ಞಾಸುಃ ಸರ್ವಸಂಸಾರದೋಷಧ್ವಂಸಕರಂ ಶಿವಂ ॥ (೬-೧)

ಉಪೈತಿ ಲೋಕವಿಖ್ಯಾತಂ ಲೋಭಮೋಹವಿವರ್ಜಿತಂ ।
ಆತ್ಮತತ್ವ ವಿಚಾರಜ್ಞ ವಿಮುಖ ವಿಷಯಭ್ರಮಂ ॥ (೬–೨)
........................................................... (೬–೩, ೪–೫)
ಲಿಂಗಾಂಗಸ್ಥಲಬೇದಜ್ಞಂ ಶ್ರೀಗುರುಂ ಶಿವವಾದಿನಂ ॥ (೬–೬)

ವ್ಯಾಖ್ಯಾನ : ಸಾಂಸಾರಿಕ ಸಂಬಂಧದ ವಿಷಯಾದಿಗಳಲ್ಲಿ ಹೇಯ ಬುದ್ಧಿಯು ಉತ್ಪನ್ನವಾದ ನಂತರ ನಿರ್ಮಲಾಂತ: ಕರಣನೂ ಶರೀರಾತ್ಮ ವಿವೇಕವುಳ್ಳವನೂ ವಿರಾಗಿಯೂ ಆದ ಸಾಧಕನು ಸಮಸ್ತ ಸಂಸಾರದೋಷಗಳನ್ನು ನಾಶಮಾಡುವ ಮಹಾಲಿಂಗ (ಶಿವತತ್ವ)ವನ್ನು ತಿಳಿಯಲಿಚ್ಛಿಸುವವನಾಗಿರುತ್ತಾನೆ. ಇದು ಶಿಷ್ಯನಿಗಿರಬೇಕಾದಂತಹ ಅರ್ಹತೆಯು.

ಜಗದ್ವಿಖ್ಯಾತನೂ, ಲೋಭಮೋಹವಿಧೂರನೂ, ಜೀವಾತ್ಮ ಪರಮಾತ್ಮರ ಯಥಾರ್ಥಸ್ವರೂಪವನ್ನು ತಿಳಿದವನೂ, ವಿಷಯಭ್ರಮದಿಂದ ವಿಮುಕ್ತನಾದವನೂ, ಶಿವಾದ್ವೈತ ಸಿದ್ಧಾಂತವನ್ನು ತಿಳಿದವನೂ, ನಾನಾವಿಧ ಸಂಶಯಗಳಿಂದುತ್ಪನ್ನವಾದ ವಿಭ್ರಮಗಳನ್ನು ದೂರ ಮಾಡುವವನೂ, ಸಮಸ್ತ ತಂತ್ರಗಳ ಪ್ರಯೋಗವನ್ನು ಬಲ್ಲವನೂ, ಶಿಷ್ಯಧರ್ಮನಿಷ್ಠನೂ, ಸತ್ಯವಾದಿಯೂ, ಶಿಷ್ಯಸಂಪ್ರದಾಯ ವಿಶಿಷ್ಟ ಪವಿತ್ರ ಗುರುಸ್ಥಲ (ಆಚಾರ್ಯ) ವಂಶಪರಂಪರೆಯಿಂದ ಪ್ರಾಪ್ತವಾದ ಆಚಾರಧರ್ಮಗಳುಳ್ಳವನೂ, ಕುತ್ಸಿತಾಚಾರಗಳಿಂದ ದೂರೀಕೃತನಾದವನೂ, ಶಿವಧ್ಯಾನಾಸಕ್ತನೂ, ಶಾಂತನೂ, ಶಿವಸ್ವರೂಪವನ್ನು ಬಲ್ಲವನೂ, ಭಸ್ಮದ್ಧೂಲನದಲ್ಲಿ ಇಚ್ಛೆವುಳ್ಳವನೂ, ಶಿವಲಿಂಗಪೂಜೆಯಲ್ಲಿ ನಿರತನಾದವನೂ, ಲಿಂಗಾಂಗ ಸಾಮರಸ್ಯ (ಶಿವಜೀವೈಕ್ಯ) ಸ್ವರೂಪವನ್ನು ತಿಳಿದವನೂ, ಶಿವಾದ್ವೈತವಾಸನೆಯಲ್ಲಿ ಮಗ್ನನಾದವನು, ಅಂಗಸ್ಥಲ-ಲಿಂಗಸ್ಥಲಾತ್ಮಕಗಳಾದ ನೂರೊಂದು ಸ್ಥಲಗಳ ಭೇದಸ್ವರೂಪವನ್ನು ತಿಳಿದವನು, ಸದಾಮಂಗಲ ವಚನಗಳನ್ನಾಡುವವನೂ ಇಂತಹ ಸರ್ವಗುಣಗಳುಳ್ಳ ಸದ್ಗುರುವನ್ನು ಶಿಷ್ಯನಾದವನು ಆಶ್ರಯಿಸಬೇಕು.

ಹೀಗೆ ಮೇಲೆ ಹೇಳಿರುವ ತತ್ವಸಿದ್ಧಾಂತಗಳು ಗುರು ಎನ್ನಿಸಿಕೊಳ್ಳುವವರಲ್ಲಿರಬೇಕು. ಬಹುಶ: ಇಂತಹ ಪರಿಶುದ್ಧ ಅರಿವು ಆಚಾರಗಳಿಲ್ಲದ ವೇಷಭಾಷಧಾರಿಗಳನ್ನು ಕಂಡೇ ಶ್ರೀ ಸಿದ್ಧಯ್ಯ ಪುರಾಣಿಕರು ಹೀಗೆ ಹೇಳಿರಬೇಕು.

ನಿನ್ನ ಹೆಸರಿನಲ್ಲಿ ಉಪ್ಪು ಬಿಟ್ಟವರುಂಟು, ಸೊಪ್ಪು ಬಿಟ್ಟವರುಂಟು
ತುಪ್ಪ ಬಿಟ್ಟವರುಂಟು, ತಪ್ಪು ಬಿಟ್ಟವರ ತೋರಾ!
ನಿನಗೆ ಕೇಶ ಬಿಟ್ಟವರುಂಟು, ವೇಷ ಬಿಟ್ಟವರುಂಟು
ದೇಶ ತೊರೆದವರುಂಟು, ಆಸೆ ತೊರೆದವರ ತೋರಾ!
ಸ್ವತಂತ್ರಧೀರ ಸಿದ್ಧೇಶ್ವರಾ ॥

"ಯಥಾ ಗುರು ತಥಾ ಶಿಷ್ಯ" ಎಂದಿರುವಂತೆ ಶಿಷ್ಯರ ಸಂಬಂಧಕ್ಕೆ ಬಹಳ ಅರ್ಥವುಂಟು. ಅಂತಹ ಅರ್ಥವಿಲ್ಲದ ಸಂಬಂಧದ ಬಗ್ಗೆ ಸರ್ವಜ್ಞ ಹೀಗೆ ಹೇಳುತ್ತಾನೆ.

ಬಳ್ಳಿ ಗುರುಡರು ಸೇರಿ ಹಳ್ಳವನು ಬಿದ್ದಂತೆ
ಒಳ್ಳೆಯ ಗುರುವಿನುಪದೇಶವಿಲ್ಲದಿರೆ
ಎಲ್ಲಿಯದು ಮುಕ್ತಿ ಸರ್ವಜ್ಞ ॥
ಹೇಳಬಲ್ಲಡೆ ಗುರುವು ಕೇಳಬಲ್ಲಡೆ ಶಿಷ್ಯ
ಹೇಳಲು ಕೇಳಲು ಅರಿಯದಾ ಗುರುಶಿಷ್ಯರ
ಮೇಳವೆಂತೆಂದ ಸರ್ವಜ್ಞ ॥

ಪರತತ್ವ ಹೇಳುವ ಸಾಮರ್ಥ್ಯ ಗುರುವಿನಲ್ಲಿರಬೇಕು. ಕೇಳುವ ಉತ್ಕಟ ಬಯಕೆ ಶಿಷ್ಯನಲ್ಲಿರಬೇಕು. ಈ ಎರಡೂ ಇಲ್ಲದವರ ಸಂಬಂಧ ಅಪ್ರಯೋಜಕ. ಆದರೆ ಮಾನವ ಜನ್ಮದ ಸಾರ್ಥಕತೆ ಪಡೆಯಲು ಸದ್ಗುರು ಬೇಕೇಬೇಕು. ಆದ್ದರಿಂದ ಸರ್ವಜ್ಞ ಹೇಳುವಂತೆ "**ನೀರನ್ನು ಸೋಸಿ ಕುಡಿಯಬೇಕು, ಗುರುವನ್ನು ಸೋಸಿ ಪಡೆಯಬೇಕು**".

ಆಧ್ಯಾತ್ಮದ ಜಿಜ್ಞಾಸುವಾಗಿದ್ದ ಕಬೀರರು ಸದ್ಗುರುವಿನ ಸಂಶೋಧನೆಯಲ್ಲಿದ್ದರೂ ಆ ಸಂದರ್ಭದಲ್ಲಿ ಅವರ ಮನಸ್ಸಿಗೆ ಬಂದದ್ದು ಕಾಶಿಯಲ್ಲಿದ್ದ ಗುರುಗಳಲ್ಲೊಬ್ಬರಾದ ರಾಮಾನಂದ ಶ್ರೀಗಳು. ಆದರೆ ಅವರನ್ನು ಗುರುಗಳನ್ನಾಗಿ ಸ್ವೀಕರಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಯಾಕೆಂದರೆ ಜಾತಿಯೆಂಬ ಅಡ್ಡಗೋಡೆ ಅವರಿಬ್ಬರಲ್ಲಿ ಎದ್ದು ಕಾಣುತ್ತಿತ್ತು. ರಾಮಾನಂದರು ಕಬೀರನನ್ನು ಶಿಷ್ಯನನ್ನಾಗಿ ಸ್ವೀಕಾರ ಮಾಡುವಂತಹ ಮನೋಭಾವವುಳ್ಳವರಾಗಿದ್ದರೂ ಸಹ ಅವರ (ಬ್ರಾಹ್ಮಣ) ಸಮುದಾಯ ಅಷ್ಟು ಸುಲಭವಾಗಿ ಬಿಟ್ಟು ಕೊಡುವಂತಿರಲಿಲ್ಲ. ಇದನ್ನು ಸಹ ಕಬೀರರು ಮನಗಂಡಿದ್ದರು. ಅದಕ್ಕೆಂದೇ ಕಬೀರರು ಹೀಗೆ ಮತ್ತೊಂದು ಯೋಚನೆ ಮಾಡಿದರು. "ಗುರುವೆಂದರೆ ಮಂತ್ರೋಪದೇಶದ ಮೂಲಕ ದೀಕ್ಷೆ ಕೊಡುವವರು. ಆ ದೀಕ್ಷೆ ಏಕಾಂತದಲ್ಲಿ ಹಸ್ತಮಸ್ತಕ ಯೋಗದ ಮುಖಾಂತರ ನಡೆಯುವುದು. ಹೇಗಿದ್ದರೂ ಗುರುಗಳ ಬಾಯಿಂದ ಸದಾ ರಾಮಮಂತ್ರ ಜಪ ನಡೆದೇ ನಡೆಯುತ್ತಿದೆ. ಅವರು ಕುಂತರೂ 'ರಾಮ' ನಿಂತರೂ 'ರಾಮ' ನಡೆದರೂ 'ರಾಮ'. ಯಾರೊಬ್ಬರಲ್ಲಿ ಮಾತಾಡುತ್ತಿದ್ದರೂ 'ರಾಮ' 'ರಾಮ್ ರೋಟಿ ಲಾವ್', 'ರಾಮ್ ಪಾನಿ ಲಾವ್' ಎನ್ನವುದು ಅವರ ಸ್ವಭಾವವಾಗಿಬಿಟ್ಟಿದೆ. ಅಲ್ಲದೆ ಪ್ರತಿದಿನ ಬೆಳಗಿನಜಾವ ಐದು ಗಂಟೆಯ ಸುಮಾರು ಗಂಗಾನದಿಗೆ ಸ್ನಾನಕ್ಕೆಂದು ಹೋಗುವರು. ಆಗ ಅವರ ಜೊತೆಯಲ್ಲಿ ಯಾರೂ ಇರುವುದಿಲ್ಲ. ಅವರ ಸ್ನಾನಕ್ಕೆಂದು ಬರುವ ಮೆಟ್ಟಿಲುಗಳ ಮೇಲೆ ನಾನು ಮಲಗಿರಬೇಕು. ಆಗ ಅವರು ತಮ್ಮ ಪಾದವನ್ನು ನನ್ನ ಮೇಲಿಟ್ಟು 'ರಾಮ' ಎನ್ನುವರು. ನನಗಾಗ ಅವರ ಪಾದ ಸ್ಪರ್ಶವೂ ಆಗುವುದು. ಏಕಾಂತದಲ್ಲಿ ಮಂತ್ರೋಪದೇಶವೂ ನಡೆದು ಹೋಗುವುದು" ಹೀಗೆ ಭಾವಿಸಿಕೊಂಡ. ಮುಂದೊಮ್ಮೆ ಅದರಂತೆಯೇ ನಡೆದು ಬಿಟ್ಟಿತು. ಅಂದಿನಿಂದ ಕಬೀರ ಕಾಶಿಯ ತುಂಬ "ನಾನು ರಾಮಾನಂದರ ಶಿಷ್ಯ. ಅವರಿಂದ ನನಗೆ ದೀಕ್ಷೆಯಾಗಿದೆ. ಅವರೇ ನನ್ನ ಗುರುಗಳು" ಎಂದು ಆನಂದದಿಂದ ಹೇಳಿಕೊಂಡು ತಿರುಗಾಡಹತ್ತಿದ.

ಇದನ್ನು ಕೇಳಿಸಿಕೊಳ್ಳುತ್ತಿದ್ದ ಬ್ರಾಹ್ಮಣರು ಹಲವರಿಗೆ ಸಹಿಸಿಕೊಳ್ಳಲಾಗಲಿಲ್ಲ. ಅವರೆಲ್ಲರೊಮ್ಮೆ ಹೋಗಿ "ನೀವು ಜಾತಿ ಭ್ರಷ್ಟರು" ಎಂದು ದಂಡಿಸಿದರು. ಆಗ ರಾಮಾನಂದರು

ಅವರೆಲ್ಲರಿಗೆ ಶಾಂತಭಾವದಿಂದ ಹೇಳಿದರು. "ಇಲ್ಲ ನಾನವನಿಗೆ ದೀಕ್ಷೆ ಕೊಟ್ಟಿಲ್ಲ. ಬೇಕಾದರೆ ಅವನನ್ನೇ ಇಲ್ಲಿಗೆ ಕರೆತನ್ನಿ ಕೇಳೋಣ" ಎಂದು ಹೇಳಿಕಳುಹಿಸಿದರು. ಸ್ವಲ್ಪ ಸಮಯದ ನಂತರ ಕಬೀರನನ್ನು ಹಿಡಿದು ತಂದು ರಾಮಾನಂದರ ಮುಂದೆ ನಿಲ್ಲಿಸಿದರು. ರಾಮಾನಂದರು "ಏ ಯಾರು ನಿನಗೆ ದೀಕ್ಷೆ ಕೊಟ್ಟದ್ದು. ಸರಿಯಾಗಿ ಹೇಳು" ಎಂದು ಕೇಳಿದರು.

ಕಬೀರನದಕ್ಕೆ "ನೀವೇ ನನಗೆ ದೀಕ್ಷೆ ಕೊಟ್ಟದ್ದು" ಎಂದು ಉತ್ತರಿಸಿದ.

ರಾಮಾನಂದರು ಅದೆಷ್ಟು ಸಲ ಕೇಳಿದರೂ ಹಾಗೆಯೇ ಉತ್ತರ ಕೊಡುತ್ತಿದ್ದ. ಅವರಿಗೆ ಅವನ ಮುಗ್ಧತೆ ಅರ್ಥವಾಯಿತು. ಆದರೆ ಅವರ ಸಮುದಾಯದವರಿಗದು ಬೇಕಾಗಿರಲಿಲ್ಲ. ಆದ್ದರಿಂದ ಕೂಡಲೆ ಕಬ್ಬಿಣದ ಸಲಾಕೆಯನ್ನು ಕೈಯಲ್ಲಿ ಹಿಡಿದುಕೊಂಡು ರಾಮಾನಂದರು ಕಬೀರನಿಗೆ ಹೊಡೆಯುತ್ತಾ ಕೇಳಿತ್ತಿದ್ದರು, "ಹೇ ರಾಮ್ ಸಚ್ ಬೋಲೋ" ಎಂದು.

ಆದರೆ ಕಬೀರರು ರಾಮಾನಂದರಿಂದ ಹೊಡೆಸಿಕೊಳ್ಳುತ್ತಾ ಹೀಗೆ ಅನ್ನುತ್ತಿದ್ದರು. "ಓ ದೀಕ್ಷೆ ಕಚ್ಚಾ ಥೀ. ಯೇ ದಿಕ್ಷೆ ಪಕ್ಕಾ ಹೋಗಾ" ಎಂತೆಂದು. ಅಂದರೆ ಆಗ ಪಡೆದ ದೀಕ್ಷೆ ನಕಲಿ ಇತ್ತು. ಈಗ ಪಡೆದಿರುವ ದೀಕ್ಷೆ ಅಸಲಿಯಾಯಿತು ಎಂಬರ್ಥವು. ಆಗ ರಾಮಾನಂದರು ಕಬೀರನನ್ನು ಅಪ್ಪಿಕೊಂಡರು. ಹಾಗೆ ಶಿಷ್ಯನನ್ನಾಗಿ ಒಪ್ಪಿಕೊಂಡರೂ ಸಹ. ಆಗೆಲ್ಲರೂ ಸತ್ಯ ಅರ್ಥ ಮಾಡಿಕೊಂಡರು. ಕಬೀರರಿಗೆ ಅಂತಹ ಯೋಗ್ಯ ಗುರುಗಳು ಸಿಕ್ಕಿದ್ದರಿಂದಲೇ ಅವರ ಹೆಸರು ಇಂದಿಗೂ ಅಚ್ಚಳಿಯದಂತೆ ಉಳಿದುಕೊಂಡಿರುವುದು.

ನ ಬಧ್ಯತಿ ಗುರೋರ್ವಾಕ್ಯಂ ವಿನಾ ಶಿಷ್ಯಸ್ಯ ಮಾನಸಂ ।
ತೇಜೇ ವಿನಾ ಸಹಸ್ರಾಂಶೋ ಕಥಂ ಸ್ಪುರತಿ ಪರಿಕಜಂ ॥ (ಸಿ.ಶಿ.)

ಸೂರ್ಯ ತೇಜಸ್ಸು ಇಲ್ಲದೆ ಕಮಲವು ಹೇಗೆ ಅರಳುವುದಿಲ್ಲವೋ ಹಾಗೆ ಗುರುವಿನ ಉಪದೇಶವಿಲ್ಲದೆ ಶಿಷ್ಯನ ಹೃದಯ ಕಮಲವೂ ಸಹ ಅರಳಲಾರದು. ಇದು ಮೇಲಿರುವ ಶ್ರೀ ಸಿದ್ಧಾಂತ ಶಿಖಾಮಣಿಯ ಶ್ಲೋಕಾರ್ಥವು.

ಎಮ್ಮಿಗನೂರು ಮಹಂತಿನ ಮಠದ ನನ್ನ ದೀಕ್ಷಾ ಗುರು ಲಿಂ॥ ಶ್ರೀ ಷ॥ ಬ್ರ॥ ಸಿದ್ಧಲಿಂಗ ಮಹಾಂತ ರಾಜ ಗುರುಗಳವರು ಹೇಳುತ್ತಿದ್ದರು. "ಯಾರಿಗೆ ನಿಗ್ರಹವಿದೆಯೋ ಅವರಿಗೆ ಅನುಗ್ರಹ ಖಂಡಿತ" ಎಂತೆಂದು. ಗುರುವಿನ ಅನುಗ್ರಹ ಸಿಕ್ಕ ನಂತರವೇ ವೇದಾನುಗ್ರಹ ಮತ್ತು ಶಿವಾ(ದೈವಾ)ನುಗ್ರಹ ದೊರೆಯುವುದು. ನಿಜಗುಣ ಶಿವಯೋಗಿಗಳು ಹೇಳುತ್ತಾರೆ. "ಎಂತಪ್ಪ ಪುರಷರ್ಗೆ ಗುರುವಿಲ್ಲದೆಂತಪ್ಪ ಪುರಷರ್ಗೆ ಮುಕ್ತಿ ಸಮನಿಸದು". ಹಾಗೆ ದಾಸವರೇಣ್ಯರೊಬ್ಬರು "ಗುರುವಿನ ಗುಲಾಮನಾಗುವ ತನಕ ಸಿಗದಣ್ಣ ಮುಕುತಿ" ಎಂದಿರುವರು. ಬಸವಣ್ಣ ಹೇಳುತ್ತಾನೆ.

ಮಡಕೆಯ ಮಾಡುವಡೆ ಮಣ್ಣೇ ಮೊದಲು
ತೊಡಿಗೆಯ ಮಾಡುವಡೆ ಹೊನ್ನೇ ಮೊದಲು
ಶಿವಪಥವನರಿವಡೆ ಗುರುಪಥವೇ ಮೊದಲು

ಕೂಡಲ ಸಂಗಮದೇವನರಿವಡೆ
ಶರಣರ ಸಂಗವೇ ಮೊದಲು

'ಮಣ್ಣು' ಮಡಕೆಗೆ ಮೂಲ. 'ಹೊನ್ನು' ಆಭರಣಗಳಿಗೆ ಮೂಲ. ಹಾಗೆ ಶಿವಸಾಯುಜ್ಯ ಪಡೆಯಲಿಕ್ಕೆ ಗುರುಪಾದವೇ ಮೂಲ. ಆದ್ದರಿಂದ ಗುರುವಿನ ಅನುಗ್ರಹ ಸಿಗುವಂತಾಗಲು ಆತನಿಗೆ ನಾವು ಚತುರ್ವಿಧ ಸೇವೆಯನ್ನು ಮಾಡಬೇಕೆಂದು ಶಾಸ್ತ್ರಗಳು ಹೇಳುತ್ತವೆ. ೧) ಆಪ್ತಸೇವೆ, ೨) ಅಂಗಸೇವೆ, ೩) ಸ್ಥಾನಸೇವೆ, ೪) ಸದ್ಭಾವನಾಸೇವೆ.

ನಮ್ಮ ಆಪ್ತವರ್ಗದವರನ್ನು ಪ್ರೀತಿಸುವಷ್ಟೇ ಶ್ರೀ ಗುರುಗಳಲ್ಲಿ ಪ್ರೀತಿ ಹೊಂದಿರಬೇಕು. ಇದು ಆಪ್ತಸೇವೆ ಎನಿಸುವುದು. ತನ್ನ ಸರ್ವಾಂಗಗಳನ್ನು ಅದೆಷ್ಟು ಮುತವರ್ಜಿಯಿಂದ ರಕ್ಷಣೆ ಮಾಡಿಕೊಳ್ಳುವನೋ ಅಷ್ಟೇ ಮುತವರ್ಜಿ ವಹಿಸಿ ಸದ್ಗುರುವಿನ ಸರ್ವಾಂಗಗಳ ಸೇವೆ ಮಾಡಿ ರಕ್ಷಿಸುತ್ತಿರಬೇಕು. ಇದು ಎರಡನೆಯದಾದ ಅಂಗಸೇವೆ. ತನ್ನ ಆಸ್ತಿಪಾಸ್ತಿಗಳ ಮೇಲೆ ಎಷ್ಟು ಜವಾಬ್ದಾರಿ ಇರುತ್ತದೆಯೋ ಅಷ್ಟೇ ಜವಾಬ್ದಾರಿ ಶ್ರೀಗುರುವಿನ ಮಠ ವಸ್ತು ಮತ್ತು ಆಸ್ತಿಪಾಸ್ತಿಗಳ ಮೇಲಿರಬೇಕು. ಹಾಗೆ ಸದ್ಗುರುವಿಗೆ ದಾನಧರ್ಮಾಧಿಗಳನ್ನೂ ಸಹ ಮಾಡುತ್ತಿರಬೇಕು. ಇದು ಸ್ಥಾನಸೇವೆ. ಕೊನೆಯದಾಗಿ ಸದ್ಭಾವನಾಸೇವೆ. ಭಗವಂತ ವೇಷಪ್ರಿಯನಲ್ಲ, ಭಾಷಾಪ್ರಿಯನಲ್ಲ. ಸದ್ಭಾವನಾಪ್ರಿಯನು. "ಮನವರಿಯದ ಕಳ್ಳತನವಿಲ್ಲ" ಎಂಬಂತೆ ನಿನ್ನ ಮನಸಾಕ್ಷಿಗೆ ಮೋಸವಾಗದಂತೆ ಸದ್ಗುರುವಿನಲ್ಲಿ ಸೇವಾನಿರತನಾಗಿರಬೇಕು. ಹೀಗೆ ಗುರುವನ್ನು ಸಂತುಷ್ಟಗೊಳಿಸಬೇಕು.

ವಿದ್ಯಾರ್ಜನೆಗೆಂದು ರಾಜಕುಮಾರನೊಬ್ಬ ಗುರುಕುಲ ಸೇರಿಕೊಂಡ. ಆ ರಾಜಕುಮಾರನ ಜೊತೆಗೆ ಒಬ್ಬ ಸೇವಾಳುವನ್ನೂ ಸಹ ರಾಜ ಕಳಿಸಿಕೊಟ್ಟಿದ್ದ. ಆ ಸೇವಕ ಪ್ರತಿನಿತ್ಯ ಗುರುಗಳ ಮತ್ತು ರಾಜಕುಮಾರರ ಸೇವೆಯನ್ನು ನಿಷ್ಠೆಯಿಂದ ಮಾಡುತ್ತಿದ್ದ. ಅಷ್ಟೇ ಅಲ್ಲ ಗುರುಗಳು ಶಿಷ್ಯರಿಗೆ ಹೇಳಿಕೊಡುತ್ತಿದ್ದ. ವೇದ ಪಾಠಗಳನ್ನೂ ಸಹ ಮನಸಿಟ್ಟು ಕೇಳಿ ಅಭ್ಯಾಸ ಮಾಡುತ್ತಿದ್ದ. ಹೀಗೆ ಸುಮಾರು ಹನ್ನೆರಡು ವರ್ಷ ಕಳೆದವು. ಗುರುಗಳು ಅವರನ್ನು ಆಶೀರ್ವದಿಸಿ ಮರಳಿ ಅವರ ರಾಜ್ಯಕ್ಕೆ ಕಳಿಸಿಕೊಟ್ಟರು.

ವಿದ್ಯಾಸಂಪನ್ನನಾಗಿ ಬಂದ ರಾಜಕುಮಾರನಿಗೆ ಅದೊಂದು ದಿನ ಪಟ್ಟಾಧಿಕಾರವೂ ನಡೆದು ಹೋಯಿತು. ಒಮ್ಮೆ ಆ ರಾಜ್ಯಕ್ಕೆ ಮಳೆ ಬಾರದೆ ಬರ ಕಾಣಿಸಿಕೊಂಡಿತು. ಅದಕ್ಕೆಂದೇ ಅಂದಿನ ಕಾಲದಲ್ಲಿ ಧರ್ಮದ ಮೊರೆ ಹೋಗುತ್ತಿದ್ದರು. ಪ್ರಯುಕ್ತ ತನ್ನ ಪೌರೋಹಿತ್ಯದಲ್ಲಿಯೇ ಪರ್ಜನ್ಯಹೋಮ ನಡೆಸಿದ. ಹೋಮ ಸಾಂಗೋಪಾಂಗವಾಗಿ ನಡೆಯಿತು. ಕೊನೆಯದಿನ ಪೂರ್ಣಾಹುತಿ ಕೊಡಬೇಕು. ಆ ಸಂದರ್ಭಕ್ಕೆ ಸರಿಯಾಗಿ ಆಕಾಶದಲ್ಲಿ ಗುಡುಗು ಮಿಂಚುಗಳು ಹುಟ್ಟಿಕೊಂಡವು. ದಟ್ಟಮೋಡ ಕವಿದವು. ರಾಜ ಸಂತೋಷದಿಂದ ಮಂತ್ರೋಚ್ಚಾರ ಮಾಡುತ್ತಾ ಪೂರ್ಣಾಹುತಿಯನ್ನೂ ಕೊಟ್ಟದ್ದಾಯಿತು. ಆದರೆ ಮಳೆ ಬರಲೇ ಇಲ್ಲ!

ಸೇವೆ ಮಾಡಲೆಂದು ರಾಜಕುಮಾರನ ಹಿಂದೆ ಗುರುಕುಲಕ್ಕೆ ಹೋಗಿದ್ದ ಸೇವಕ ಅದನ್ನೆಲ್ಲಾ ಗಮನಿಸಿದ. ದಟ್ಟ ಮೋಡ ಕವಿದಿದ್ದರೂ ಮಳೆ ಬಾರದದ್ದು ಏಕೆ ಎಂಬುದು

ಆತನಿಗೆ ಅರ್ಥವಾಗಿತ್ತು. ಕೂಡಲೇ ರಾಜಕುಮಾರನಲ್ಲಿಗೆ ಬಂದು ನಮಸ್ಕರಿಸಿ "ಪ್ರಭೂ ತಾವೇನೂ ತಿಳಿದುಕೊಳ್ಳದೆ ನನಗೆ ಅಪ್ಪಣೆ ಕೊಟ್ಟರೆ ನಾಳೆಯೊಂದು ದಿನ ನಾನೇ ಸ್ವತ: ಯಜ್ಞ ಮಾಡಿ ಮಳೆ ತರಿಸುವೆ. ಇದು ಸತ್ಯ, ನೀವು ನನ್ನನ್ನು ನಂಬಬೇಕು" ಎಂದು ಸವಿನಯವಾಗಿ ಪ್ರಾರ್ಥಿಸಿಕೊಂಡ.

ರಾಜನಿಗೆ ಆ ಮಾತನ್ನು ಕೇಳಿ ಇರಿಸುಮುರಿಸಾಯಿತು. ಸ್ವಲ್ಪ ಕೋಪವೂ ಹುಟ್ಟಿ ಬಂತು. ಆದರೂ ರಾಜ್ಯದ ಹಿತದೃಷ್ಟಿಯಿಂದ ಸೇವಕನಿಗೆ ಅನುಮತಿ ಕೊಟ್ಟ. ಮಾರನೆಯ ದಿನವೂ ಹೋಮ ನಡೆಯಿತು. ಹಿಂದಿನ ದಿನದಂತೆ ಅಂದೂ ಸಹ ಗುಡುಗು ಮಿಂಚುಗಳ ಆರ್ಭಟವೂ ಇತ್ತು. ಇನ್ನೇನು ಸೇವಕನೂ ಸಹ ಮಂತ್ರೋಚ್ಚಾರ ಮಾಡುತ್ತಾ ಪೂರ್ಣಾಹುತಿ ಕೊಟ್ಟ. ತಕ್ಷಣವೇ ಮೇಘರಾಜ (ಮಳೆರಾಯ) ಧರೆಯ ಮೇಲೆ ಧಾರಾಕಾರವಾಗಿ ಹರಿದುಬಂದ.

ರಾಜಕುಮಾರ ಚಿಂತಾಕ್ರಾಂತನಾಗಿ ಕುಳಿತಿದ್ದ. ಸೇವಕನು ಬಂದು ರಾಜಕುಮಾರನಿಗೆ ನಮಸ್ಕರಿಸಿದ. ಆಗ ರಾಜಕುಮಾರ "ಹೌದು, ನಾನು ಮಾಡಿದ ಹೋಮಾದಿ ಕ್ರಿಯೆಗಳಲ್ಲಿ ದೋಷವಿತ್ತೇ? ಅಥವಾ ಮಂತ್ರಗಳಲ್ಲೇನಾದರೂ ದೋಷಗಳು ಕಂಡುಬಂದವೇ?" ಎಂದು ಕೇಳಿದ.

"ಪ್ರಭು ಅವ್ಯಾವುದರಲ್ಲೂ ದೋಷಗಳಿರಲಿಲ್ಲ. ಆದರೆ ನೀವು ಗುರುಸೇವೆ ಮಾಡದಿದ್ದರಿಂದ ನಿಮ್ಮ ಕ್ರಿಯೆ ಮತ್ತು ಮಂತ್ರಗಳಿಂದ ಪೂರ್ಣಫಲ ಸಿಗಲು ಸಾಧ್ಯವಾಗಲಿಲ್ಲ. ಅದೇ ಕ್ರಿಯೆ ಅದೇ ಮಂತ್ರ. ಆದರೆ ಶ್ರೀ ಗುರುವಿಗೆ ನಾನು ಸೇವೆ ಮಾಡಿದ ಫಲದಿಂದ ಪರಿಪೂರ್ಣ ಲಾಭ ದೊರೆಯಿತು" ಎಂದು ಹೇಳಿದ. ಅಲ್ಲದೆ ಸತ್ಕರ್ಮಾದಿಗಳನ್ನಾಚರಿಸಲು ವೃಥಾ: ವಿಳಂಬ ಮಾಡುವುದು ಒಳ್ಳೆಯದಲ್ಲ.

ಅಜರಾಮರವತ್ ಪ್ರಾಜ್ಞ: ವಿದ್ಯಾಮರ್ಥಂಚ ಸಾಧಯೇತ್ ।
ಗೃಹಿತ ಇವಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥

ಈ ಸಂಸ್ಕೃತ ಶ್ಲೋಕದ ಅರ್ಥ ಹೀಗಿದೆ. ಪ್ರಜ್ಞಾವಂತನಾದ ಮಾನವನು ವಿದ್ಯೆಯನ್ನು ಗಳಿಸುವಂತಹ ಸಂದರ್ಭದಲ್ಲಿಯೂ ಹಾಗೂ ಹಣವನ್ನು ಗಳಿಸುವಂತಹ ಸಂದರ್ಭದಲ್ಲಿಯೂ ನಾನಿನ್ನೂ ಬಹಳ ವರ್ಷ ಬದುಕಿರುತ್ತೇನೆಯಂದೇ ಅವುಗಳನ್ನು ಸಂಪಾದಿಸುತ್ತಾ ಹೋಗಬೇಕು. ಆದರೆ ಅದೇ ಧರ್ಮಾಚರಣೆ ಮಾಡುವಂತಹ ಸಂದರ್ಭದಲ್ಲಿ ಮಾತ್ರ ಮೃತ್ಯುದೇವತೆ ಯಾವಾಗ ಬಂದು ಜುಟ್ಟನ್ನು ಹಿಡಿದು ಒಯ್ಯುತ್ತಾಳೋ ಎಂಬ ಪರಿಶುದ್ಧ ಭಾವನೆಯಿಂದ ಬೇಗಬೇಗ ಆಚರಿಸಿಕೊಂಡು ಹೋಗಬೇಕು.

ಒಮ್ಮೆ ಧರ್ಮರಾಯನ ಬಳಿ ಒಬ್ಬ ಬಂದು, "ಮಹಾಪ್ರಭು ನನಗೆ ಬಹಳ ಕಷ್ಟವಿದೆ. ದಯಮಾಡಿ ನನಗೆ ಒಂದು ನೂರು ಚಿನ್ನದ ನಾಣ್ಯಗಳನ್ನು ದಯಪಾಲಿಸಿ" ಎಂದು ಬೇಡಿಕೊಂಡನು. ಧರ್ಮರಾಜನು "ನಾಳೆ ಬಾ ಕೊಡುತ್ತೇನೆ" ಎಂದು ಹೇಳಿದ. ರೈತನು ಅದಕ್ಕೆ 'ಆಗಲಿ' ಎಂದು ಹೇಳಿ ಹಿಂತಿರುಗಿದ.

ಅಲ್ಲೇ ನಿಂತಿದ್ದ ಭೀಮಸೇನ ಇದೆಲ್ಲವನ್ನೂ ನೋಡಿ ಮುಗುಳ್ನಕ್ಕು ಅಲ್ಲಿಯೇ ಬಾಗಿಲ

ಬಳಿಯಿದ್ದ ವಿಜಯದುಂಡುಭಿ (ಜಯಭೇರಿ) ಯನ್ನು ಬಾರಿಸಿದ. ಈ ಶಬ್ದ ಕೇಳಿದ ಧರ್ಮರಾಜನಿಗೆ ಆಶ್ಚರ್ಯವಾಯಿತು. ಭೀಮಸೇನನ ಬಳಿಗೆ ಬಂದು "ಭೀಮಸೇನಾ ಏಕೆ ಜಯಭೇರಿ ಬಾರಿಸಿದೆ. ನಾವೀಗ ಯಾರೊಂದಿಗೂ ಯುದ್ಧ ಮಾಡಿಲ್ಲ, ಯಾರಿಂದಲೂ ಜಯ ಸಾಧಿಸಿಲ್ಲ. ಆದರೂ ಈ ವಿಜಯದುಂದುಭಿ ಬಾರಿಸಿದ್ದು ಯಾಕೆ?"

ಭೀಮಸೇನನು, "ಅಣ್ಣಾ ಈ ದಿನ ನಮಗೆ ಅತ್ಯಂತ ಮಹತ್ವವಾದ ವಿಜಯ ಪ್ರಾಪ್ತಿಯಾಗಿದೆ. ಇಂತಹ ವಿಜಯ ಇಡೀ ಜಗತ್ತಿನಲ್ಲಿ ಯಾರಿಗೂ ಸಿಕ್ಕಿಲ್ಲ. ಮುಂದೆ ಸಿಗುವುದೂ ಇಲ್ಲ, ಇಂದು ನೀನು ಮೃತ್ಯುದೇವತೆಯ ಮೇಲೆ ವಿಜಯವನ್ನು ಸಾಧಿಸಿರುವೆ" ಎಂದು ಹೇಳಿದ.

ಧರ್ಮರಾಜನು ತಮಾಷೆ ಮಾಡುತ್ತಿರುವೆಯೇನು? ಮೃತ್ಯುವನ್ನು ಗೆಲ್ಲಲು ಯಾರಿಂದ ಸಾಧ್ಯ" ಎಂದು ಕೇಳಿದ.

ಭೀಮಸೇನನಾಗ "ಅಣ್ಣಾ ನೀನು ಆ ಯಾಚಕನಿಗೆ ಬೇಡಿದ್ದನ್ನು ನಾಳೆ ಕೊಡುತ್ತೇನೆಂದು ಹೇಳಿದೆಯಲ್ಲಾ? ಅದರ ಅರ್ಥವೇನು? ಅಂದರೆ ನೀನು ನಾಳಿನವರೆಗೂ ಬದುಕಿರುತ್ತೇವೆಂದು ಭಾವಿಸಿರಬೇಕಾದರೆ ಆ ಮೃತ್ಯುದೇವತೆಯ ಮೇಲೆ ವಿಜಯ ಸಾಧಿಸಿದಂತಾಗಲಿಲ್ಲವೇ? ಇದಕ್ಕಿಂತಲೂ ಶ್ರೇಷ್ಟವಾದ ವಿಜಯ ಮತ್ತಿನ್ನಾವುದಿದೆ? ಅದಕ್ಕಾಗಿಯೇ ನಾನು ಆ ವಿಜಯ ದುಂದುಭಿ ಬಾರಿಸಿದ್ದು" ಎಂದು ಹೇಳಿದ್ದ.

ಧರ್ಮರಾಜನಿಗೆ ತನ್ನ ತಪ್ಪಿನ ಅರಿವಾಯಿತು. ಕೂಡಲೇ ಆ ಯಾಚಕನನ್ನು ಕರೆಸಿ ನೂರು ಚಿನ್ನದ ನಾಣ್ಯಗಳನ್ನು ಕೊಟ್ಟು ಕಳುಹಿಸಿದ.

ನಿಜಗುಣದೇವನ ಶಿಷ್ಯ ಚಂದಿಮರಸ ಶರಣ ತನ್ನೊಂದು ವಚನದಲ್ಲಿ ಹೀಗೆ ಹೇಳುತ್ತಾನೆ.

ಸಾವು ತಡವಲ್ಲ ನರಕ ದೂರವಲ್ಲ
ಕೆಮ್ಮನೆ ಕೆಡಬೇಡ ವಿಷಯವ ಬಿಡು
ಗುರುಭಕ್ತಿಯ ನಂಬು ಸುಖಿಯಪ್ಪೆ ಸಿಮ್ಮಲಿಗೆಯ ಚೆನ್ನರಾಮಾ ॥

ಈ ಶರಣ ಮನುಕುಲಕ್ಕೆ ಕೊಟ್ಟಿರುವಂತಹ ಎಚ್ಚರಿಕೆಯ ಸಂದೇಶವಿದು. ಸಾವು ಯಾರಿಗೂ ತಿಳಿಸಿಬರುವಂಥದ್ದಲ್ಲ. ಅದು ನಿಗೂಢ. ಯಾವಾಗ ಬೇಕಾದರೂ ಬರಬಹುದು. ಯಾಕೆಂದರೆ ನಾವು ಏನೊಂದನ್ನೂ ತರದಿದ್ದರೂ ಸಾವೊಂದನ್ನು ಮಾತ್ರ ಜೊತೆಯಲ್ಲಿಟ್ಟುಕೊಂಡೇ ಹುಟ್ಟಿ ಬಂದಿದ್ದೇವೆ. ಈ ಮಾತು ಸದಾ ಎಚ್ಚರದಲ್ಲಿದ್ದರೆ ತಪ್ಪು ಮಾಡಲು ಸಾಧ್ಯವಿಲ್ಲ. ಎಚ್ಚರ ತಪ್ಪಿ ನಡೆಯುತ್ತಿದ್ದರೆ ನರಕ ಅಲ್ಲೇ ಇದೆ. ಇದನ್ನರಿತು ಗುರುಪಾದ ಹಿಡಿ. ಗುರು ಮಾರ್ಗದಲ್ಲಿ ನಡೆ ಎಂದಿದ್ದಾನೆ.

ದಿಲೀಪನೆಂಬ ಚಕ್ರವರ್ತಿ ಬಹಳ ದಿನಗಳ ಹಿಂದೆ ಈ ನಮ್ಮ ಭರತದೇಶವನ್ನು ಆಳಿ ಹೋಗಿದ್ದಾನೆ. ಆತನಿಗೆ ಅದೆಷ್ಟೋ ವರ್ಷಗಳು ಕಳೆದರೂ ಸಂತಾನಭಾಗ್ಯ ಪ್ರಾಪ್ತಿಯಾಗಲಿಲ್ಲ. ಕಾರಣ ಅದರ ಪರಿಹಾರಕ್ಕೆಂದೇ ತನ್ನ ವಂಶದ ಗುರುಗಳಾದ ವಶಿಷ್ಠ ಮಹಾಮುನಿಗಳಲ್ಲೊಮ್ಮೆ

ಹೋಗಿ ಪ್ರಶ್ನಿಸುತ್ತಾನೆ. ಆಗ ವಶಿಷ್ಠರು ತಮ್ಮ ಜ್ಞಾನದೃಷ್ಟಿಯಿಂದೊಮ್ಮೆ ನೋಡಿ ದಿಲೀಪನಿಗೆ ಹೇಳಿದರು. "ರಾಜ, ನೀನೊಮ್ಮೆ ಸ್ವರ್ಗದಿಂದ ಭೂಲೋಕಕ್ಕೆ ಹಿಂತಿರುಗಿ ಬರುವಾಗ ದಾರಿಯಲ್ಲಿ ಕಲ್ಪವೃಕ್ಷದ ಕೆಳಗೆ ಕಾಮಧೇನುವು ನಿಂತುಕೊಂಡಿತ್ತು. ಅದನ್ನು ನೀನು ನೋಡಿದ್ದರೂ ಸಹ ನಮಸ್ಕರಿಸದೆ ಹಾಗೇ ಬಂದುಬಿಟ್ಟೆ. ಯಾಕೆಂದರೆ ಯಾರಾದರೂ ನಮಗಿಂತ ದೊಡ್ಡವರಾದವರು ನಮಗೆ ಎದುರಾದರೆ (ಕಂಡರೆ) ಅವರಿಗೆ ಗೌರವ ಕೊಡುವುದು ನಮ್ಮ ಧರ್ಮ. ಅದನ್ನು ನೀನಂದು ಮಾಡಲಿಲ್ಲ. ಕಾಮಧೇನು ಎಂದರೆ ಸಣ್ಣದ್ದಲ್ಲ. ಕಾಮಿತಾರ್ಥ ಫಲಗಳನ್ನು ಕೊಡುವಂಥದ್ದು. ಅದರ ಶರೀರದ ತುಂಬ ಮೂವತ್ಮೂರು ಕೋಟಿ ದೇವತೆಗಳೇ ತುಂಬಿಕೊಂಡಿದ್ದಾರೆ. ಅಂದಾಗ ಅದನ್ನು ನೀನು ಗೌರವಿಸಬೇಕಿತ್ತು, ಗೌರವಿಸಲಿಲ್ಲ. ಆದ್ದರಿಂದ ಅದು ನಿನ್ನ ಮೇಲೆ ಕೋಪಿಸಿಕೊಂಡು ಶಾಪ ಹಾಕಿದೆ. ಆದ್ದರಿಂದ ನೀನು ಕಾಮಧೇನುವನ್ನಾಗಲೀ ಅಥವಾ ಕಾಮಧೇನುವಿನ ಸಂತತಿಯನ್ನಾಗಲೀ ಇಪ್ಪತ್ತೊಂದು ದಿನಗಳ ಪರ್ಯಂತರ ದಂಪತಿಗಳಿಬ್ಬರೂ ಅದರ ಸೇವೆ ಮಾಡಿ ಸಂತುಷ್ಟಗೊಳಿಸಬೇಕು. ಆಗ ಮಾತ್ರ ನಿನಗೆ ಒಂದೇ ಒಂದು ಸಂತಾನ ಪ್ರಾಪ್ತಿಯಾಗುವುದು" ಎಂದು ಹೇಳಿದರು.

"ಗುರುವೇ ಕಾಮಧೇನು ಈಗ ಎಲ್ಲಿದೆ? ಹಾಗೂ ಅದರ ಸೇವಾಪೂಜಾದಿ ಕ್ರಿಯೆಗಳು ಹೇಗ್ಹೇಗೆ ನಡೆಯಬೇಕು? ಇದನ್ನೆಲ್ಲ ಸ್ವಲ್ಪ ವಿವರವಾಗಿ ತಿಳಿಸಿಕೊಡಿರಿ" ಎಂದು ಬೇಡಿಕೊಂಡ.

ವಶಿಷ್ಠರು "ಕಾಮಧೇನು ಈಗ ನಿನಗೆ ಸಿಗುವ ಮಟ್ಟದಲ್ಲಿಲ್ಲ. ಯಾಕೆಂದರೆ ಈಗ ಅದು ಪಾತಾಳ ಲೋಕದಲ್ಲಿದೆ. ಆದರೆ ಅದರದೇ ಆದ ಸಂತತಿಯೊಂದು ನನ್ನ ಆಶ್ರಮದಲ್ಲಿದೆ. ಅದರ ಹೆಸರು 'ನಂದಿನಿ'. ಸದ್ಯ ಈಗ ಅದರ ಸೇವೆ ಮಾಡಿದರೆ ಸಾಕು. ಅದರ ಸೇವೆ ಇಪ್ಪತ್ತೊಂದು ದಿನಗಳ ಪರ್ಯಂತರ ನೀವು ದಂಪತಿ ಸಮೇತರಾಗಿ ಬಹಳ ಎಚ್ಚರದಿಂದ ಮಾಡಬೇಕು. ಅದು ಹೀಗೆ. ಅದು ನಿಂತರೆ ನೀವಿಬ್ಬರು ನಿಂತಿರಬೇಕು. ನಡೆದರೆ ನೀವುಗಳು ನಡೆಯಬೇಕು. ಅಧು ಹುಲ್ಲು ತಿಂದರೆ ನೀವು ಊಟ ಮಾಡಬೇಕು. ಅದು ನೀರು ಕುಡಿದರೆ ನೀರು ಕುಡಿಯಬೇಕು. ಅದು ಮಲಗಿದರೆ ಮಲಗಬೇಕು. ಹೀಗೆ ಅದರ ನೆರಳು ಹೇಗೆ ಆ ನಂದಿನಿಯನ್ನು ಅನುಕರಣೆ ಮಾಡುವುದೋ? ಹಾಗೆ ನೀವು ಆಚರಣೆ ಪಾಲಿಸಬೇಕು. ಹೀಗೆ ಇಪ್ಪತ್ತೊಂದು ದಿನಗಳನ್ನಾಚರಿಸಿರಿ. ನಿಮಗೆ ಸಂತಾನ ಪ್ರಾಪ್ತಿ ಖಂಡಿತವಾಗಿಯೂ ಆಗುವುದು" ಎಂದು ಹೇಳಿದರು.

ರಾಜ ದಿಲೀಪನು ಗುರುಗಳಿಂದ ಆಶೀರ್ವಾದ ಪಡೆದುಕೊಂಡು ತನ್ನ ಹೆಂಡತಿ ಸುದೀಕ್ಷಣಾದೇವಿ ಸಮೇತನಾಗಿ ನಾರು ಮಡಿಗಳನ್ನುಟ್ಟು ನಂದಿನಿಯ ಸೇವೆಯನ್ನು ಪ್ರಾರಂಭಿಸಿದ. ಇಪ್ಪತ್ತು ದಿನಗಳ ಆಚರಣೆಯೂ ಕಳೆದಾಗಿತ್ತು. ಇನ್ನೊಂದು ದಿನ ಮಾತ್ರ ಉಳಿದುಕೊಂಡಿತ್ತು. ಆ ಕೊನೆಯ ದಿನ ದಂಪತಿಗಳಿಬ್ಬರೂ ಅದರ ಹಿಂದೆ ಹಿಂದೆ ನಡೆಯುತ್ತಲಿದ್ದರು. ಅವರ ಸೇವೆಯಿಂದ ನಂದಿನಿ ಸಂತುಷ್ಟಗೊಂಡಿತ್ತು. ಆದರೂ ಅವರನ್ನು ಪರೀಕ್ಷೆ ಮಾಡಬೇಕೆಂದು ಯೋಚಿಸಿದ ನಂದಿನಿಯು ಹಿಮಾಲಯ ಪರ್ವತದಲ್ಲಿರುವ ಒಂದು ಗವಿಯೊಳಗೆ ಹೋಗಿಬಿಟ್ಟಿತು. ಆ ಸಂದರ್ಭದಲ್ಲಿ ದಿಲೀಪನಿಗೆ ಸ್ವಲ್ಪ ಚಿತ್ತ ಕದಲುವಂತೆ ಮಾಯೆಯೂ ಆವರಿಸಿತ್ತು. ಕ್ಷಣಮಾತ್ರದಲ್ಲಿ

ನೋಡುತ್ತಾನೆ, ನಂದಿನಿ ಎಲ್ಲೆಲ್ಲೂ ಕಾಣಲಿಲ್ಲ.

ಸ್ವಲ್ಪ ಸಮಯದ ನಂತರ ಅಲ್ಲಿಯೇ ಕಾಣುತ್ತಿದ್ದ ಗವಿಯೊಂದರ ಒಳಗಿನಿಂದ ನಂದಿನಿಯ ಧ್ವನಿಯು ಜತೆಗೂಡಿ ಸಿಂಹಘರ್ಜನೆಯೂ ಕೇಳಿಬಂದಿತು. ಕೂಡಲೆ ಆ ಸಿಂಹವು ನಂದಿನಿಯನ್ನು ತಿನ್ನುವುದರ ಹಾಗೆ ಆರ್ಭಟಿಸುತ್ತಾ ಅದರ ಕತ್ತು ಹಿಡಿದುಕೊಂಡು ಹೊರಬಂದಿತು. ದಿಲೀಪ ಇದನ್ನು ಕಂಡು ಗಾಬರಿಯಾದ. ಕೂಡಲೇ ತನ್ನಲ್ಲಿದ್ದ ಬಿಲ್ಲಿನಿಂದ ಆ ಸಿಂಹದ ಮೇಲೆ ಬಾಣ ಹೂಡಲೆತ್ನಿಸಿದ. ಆದರ ಆತನ ಕೈಕಾಲುಗಳು ಚಲಿಸದೆ ಸ್ಥಂಭಿತವಾದವು. ಆಗ ವಿಚಲಿತನಾದ ದಿಲೀಪನು ತನ್ನ ಮನಸ್ಸಿನಲ್ಲಿ ಅಂದುಕೊಂಡ. "ಓಹೋ ಇದು ಸಾಮಾನ್ಯ ಸಿಂಹವಲ್ಲ. ಇದು ಮಾಯಾವಿ ಸಿಂಹವೇ ಆಗಿರಬೇಕು" ಎಂದುಕೊಳ್ಳುವಷ್ಟರಲ್ಲಿ ಆ ಸಿಂಹವೇ ಮಾತನಾಡಿ ಹೀಗೆ ಹೇಳಿತು, "ಎಲೈ ರಾಜ, ನನ್ನನ್ನು ಸಾಮಾನ್ಯ ಸಿಂಹ ಎಂದು ಭಾವಿಸಿಕೊಳ್ಳಬೇಡ. ನಾನು ಪಾರ್ವತಿದೇವಿಯ ವಾಹನವಾಗಿರುವವನು. ಅಲ್ಲದೆ ಪಾರ್ವತಿಯ ಆಜ್ಞಾನುಸಾರವಾಗಿ ನಾನಿಲ್ಲಿ ನೆಲೆಸಿರುವೆನು. ಯಾಕೆಂದರೆ ಪಾರ್ವತಿದೇವಿ ತನಗೆ ಸಂತಾನ ಆಗುವ ಪೂರ್ವ ಈ ಜಾಗದಲ್ಲಿ ಹಲವಾರು ಗಿಡಮರಗಳನ್ನು ಬೆಳೆಸಿದ್ದಾಳೆ. ಆದರೂ ಪ್ರಾಣಿಗಳು ಇಲ್ಲಿಗೆ ಬಂದು ಆ ಗಿಡ ಮರಗಳಿಗೆ ಮೈತಿಕ್ಕಿ ಆ ಮರಗಳ ತೊಗಟೆ ಕಿತ್ತು ಹಾಕಿದರೆ ಆ ಆದಿಶಕ್ತಿಗೆ ಸಾಕಷ್ಟು ನೋವು ಉಂಟಾಗುತ್ತದೆ. ಹಾಗಾಗದಂತೆ ಕಾಯುವುದು ನನ್ನ ಜವಾಬ್ದಾರಿ. ಅದಕ್ಕೂ ಮೀರಿ ಯಾರೊಬ್ಬರು ಹಾಗೆ ಮಾಡಿದ್ದಾದರೆ ಅವರನ್ನು ಕೊಂದುಬಿಡುತ್ತೇನೆ. ಅದನ್ನೇ ಈ ಆಕಳು ಮಾಡಿರುವುದರಿಂದ ಇದನ್ನು ನಾನು ಕೊಂದು ತಿನ್ನುತ್ತೇನೆ" ಎಂದು ಹೇಳಿತು.

ಆಗ ರಾಜ, "ಹೇ ಸಿಂಹರಾಜಾ ಆ ಆಕಳು ನನ್ನದಲ್ಲ. ಅದು ಗುರುವಿನ ಸಂಪತ್ತು. ಅದನ್ನು ನಾನಿಂದು ಮರಳಿ ಗುರುವಿಗೆ ಒಪ್ಪಿಸಬೇಕಾಗಿದೆ. ಆದ್ದರಿಂದ ಆ ನಂದಿನಿಯನ್ನು ಕೊಲ್ಲುವುದರ ಬದಲಾಗಿ ನನ್ನನ್ನು ಕೊಂದುಹಾಕು. ಅದನ್ನು ಬಿಟ್ಟುಬಿಡು" ಎಂದು ಬೇಡಿಕೊಂಡ.

ಅದಕ್ಕುತ್ತರವಾಗಿ ಸಿಂಹ "ಅಯ್ಯಾ ನೀನೆಂಥ ಮೂಢನಿದ್ದೀಯ. ಒಂದು ಆಕಳ ಸಲುವಾಗಿ ನಿನ್ನ ಪ್ರಾಣ ಯಾಕೆ ಕಳೆದುಕೊಳ್ಳುತ್ತೀಯಾ. ಇಂತಹ ನೂರು ಆಕಳು ಕೊಡುತ್ತೇನೆ. ಅವನ್ನು ಕೊಂಡೊಯ್ದು ನಿನ್ನ ಗುರುವಿಗೆ ಕೊಟ್ಟುಬಿಡು. ಆಗ ನಿನ್ನ ಗುರು ಸಂತುಷ್ಟರಾಗಿಬಿಡುತ್ತಾರೆ" ಎಂದು ಹೇಳಿತು.

ರಾಜ, "ನೀನು ನೂರಲ್ಲ, ಸಾವಿರ, ಲಕ್ಷ, ಕೋಟಿ ಕೊಟ್ಟರೂ ಪ್ರಯೋಜನವಿಲ್ಲ. ನನಗೆ ಇದೇ ಬೇಕು. ಇಲ್ಲದಿದ್ದರೆ ನನ್ನ ಪ್ರಾಣವೇ ಹೋಗಿಬಿಡಲಿ" ಅಂದಿದ್ದ.

ಆಗ ಸಿಂಹ "ಆಯಿತು ಬಾ ನಿನ್ನೀ ಆಕಳನ್ನು ಬಿಟ್ಟು ನಿನ್ನನ್ನೇ ತಿನ್ನುತ್ತೇನೆ" ಎಂದಾಗ ದಿಲೀಪ ಸಂತೋಷದಿಂದ ಸಿಂಹದ ಹತ್ತಿರ ಬಂದು ಅದರ ಮುಂದೆ ಕುಳಿತುಕೊಳ್ಳುತ್ತಾನೆ. ಆ ಕೂಡಲೇ ಆಕಾಶದಿಂದ ಪುಷ್ಪವೃಷ್ಟಿಯಾಗುವುದು. ಸಿಂಹ ಅಲ್ಲಿಂದ ಕಾಣದೆ ಮಾಯವಾಗಿ ಹೋಗಿತ್ತು.

ಆಗ ದಿಲೀಪನು ಆ ನಂದಿನಿಯನ್ನು ಕೇಳುತ್ತಾನೆ, "ಅಮ್ಮಾ ಗೋಮಾತೆ ಏನ್ನಮ್ಮಾ

ಇದೆಲ್ಲಾ" ಎಂದು.

ನಂದಿನಿ "ಹೌದು ಇದು ನನ್ನದೇ ಆದಂತಹ ಪರೀಕ್ಷೆಯು. ಯಾಕೆಂದರೆ ನೀನು ಇಲ್ಲಿಯವರೆಗೆ ಮಾಡಿದಂತಹ ಸೇವೆ ಎಂಥದ್ದು ಎಂಬ ಪರೀಕ್ಷೆ ಮಾಡಿದ್ದು ನಾನೇ. ನಿನ್ನ ಭಾವಾರ್ಪಿತ ಸೇವೆಯಿಂದ ನಾನು ಸಂತುಷ್ಟನಾಗಿದ್ದೇನೆ. ಇನ್ನು ನೀವು ದಂಪತಿಗಳಿಬ್ಬರೂ ಈಗಲೇ ನನ್ನ ಹಾಲನ್ನು ಹಿಂಡಿಕೊಂಡು ಸೇವನೆ ಮಾಡಿರಿ. ನಿಮಗೆ ಸತ್‌ಪುತ್ರ ಸಂತಾನ ಪ್ರಾಪ್ತಿಯಾಗುವುದು" ಎಂದು ಹೇಳಿತು.

ಆಗ ರಾಜ ಹೇಳ್ತಾನೆ, "ಮಾತೇ ನಾನು ನಿನ್ನ ಸೇವೆ ಮಾಡಲು ಪ್ರಾರಂಭಿಸಿದ್ದು ಗುರುಗಳ ಅಪ್ಪಣೆಯಿಂದ. ಆದ್ದರಿಂದ ನಾನು ಈಗಲೂ ಸಹ ಗುರುಗಳ ಅಪ್ಪಣೆ ಆಗದ ಹೊರತಾಗಿ ಹಾಲನ್ನು ಸೇವನೆ ಮಾಡುವುದಿಲ್ಲ. ಯಾಕೆಂದರೆ ಪ್ರಪಂಚದಲ್ಲಿ ಯಾವೊಂದು ಗುರುಗಳ ಮುಖದಿಂದ ಬಂದರೆ ಮಾತ್ರ ಅವು ಪವಿತ್ರವಾಗಿರುತ್ತವೆ. ಹಾಗೆ ಪ್ರಸಾದವೆನಿಸುತ್ತವೆ. ಆದ್ದರಿಂದ ಗುರುವಿನ ಅನುಮತಿಯ ನಂತರ ಸ್ವೀಕರಿಸುತ್ತೇವೆ" ಎಂದು ಹೇಳಿ ಅಲ್ಲಿಂದ ವಶಿಷ್ಠರ ಆಶ್ರಮಕ್ಕೆ ಬಂದರು. ಗುರುಗಳಿಗೆ ನಡೆದುದೆಲ್ಲ ತಮ್ಮ ಜ್ಞಾನದೃಷ್ಟಿಗೆ ಗೋಚರವಾಗಿದ್ದವು. ಆದ್ದರಿಂದ ಗುರುಗಳು ತಮ್ಮ ಪೂಜಾದಿಕ್ರಿಯೆಗಳನ್ನು ಮುಗಿಸಿಕೊಂಡು ಬಂದು ಆ ನಂದಿನಿಯ ಹಾಲನ್ನು ದಂಪತಿಗಳೀರ್ವರಿಗೆ ತಮ್ಮ ಅಮೃತಹಸ್ತದಿಂದ ಕುಡಿಯಲು ಕೊಟ್ಟು ಆಶೀರ್ವದಿಸಿದರು. ಮುಂದೆ ಅವರಿಗೊಂದು ಪುತ್ರಸಂತಾನವಾಯಿತು. ಅವನಿಗೆ ರಘು ಮಹಾರಾಜನೆಂಬ ಹೆಸರಿಟ್ಟರು. ಅಲ್ಲಿಂದ ಆ ವಂಶ ಬೆಳೆದ ಕಾರಣ "ರಘುವಂಶ" ಎಂಬ ಹೆಸರು ಪ್ರಸಿದ್ಧಿಗೆ ಬಂತು.

ಮಂತ್ರ ಮೂಲಮ್ ಗುರೋರ್ವಾಕ್ಯಮ್
ಪೂಜಾ ಮೂಲಮ್ ಗುರೋರ್ಪಾದಮ್
ಧ್ಯಾನ ಮೂಲಮ್ ಗುರೋರ್ಮೂರ್ತಿ
ಮುಕ್ತಿಮೂಲಂ ಗುರೋಃಕೃಪಾ: ॥

"ಗುರುಬ್ರಹ್ಮ: ಗುರುರ್ವಿಷ್ಣು: ಗುರುರ್ದೇವೋ ಮಹೇಶ್ವರ: ಗುರು ಸಾಕ್ಷಾತ್ ಪರಬ್ರಹ್ಮ: ತಸ್ಮೈ ಶ್ರೀ ಗುರುವೇ ನಮ:" ಎಂತೆಂದು. "ನ ಗುರೋರಧಿಕಂ ಶಿವಶಾಸನತ:" ಹೀಗೆಂದು ಶಿವನೇ ಪಾರ್ವತಿದೇವಿಗೆ ಮೂರು ಮೂರು ಸಲ ಒತ್ತೊತ್ತಿ ಹೇಳಿರುವಾಗ, ಈ ಪ್ರಪಂಚದಲ್ಲಿ ಗುರುವಿಗಿಂತ ದೊಡ್ಡ ದೈವ ಮತ್ತೊಂದಿಲ್ಲ.

ಒಮ್ಮೆ ಕಬೀರರನ್ನು ಯಾರೋ ಒಬ್ಬರು ಕೇಳಿದ್ದರಂತೆ. "ಗುರು ಮತ್ತು ಗೋವಿಂದ ಈರ್ವರೂ ನಿಮ್ಮ ಎದುರಿಗೆ ಒಂದೇ ಕಾಲಕ್ಕೆ ಪ್ರತ್ಯಕ್ಷರಾಗಿ ನಿಂತರೆ ಮೊದಲು ಯಾರ ಬಳಿಗೆ ಹೋಗುತ್ತೀರಿ" ಎಂತೆಂದು.

ಅದಕ್ಕುತ್ತರವಾಗಿ ಕಬೀರರು ಹೀಗೆ ಹೇಳುತ್ತಾರೆ.

"ಗುರುಗೋವಿಂದ ದೋವು ಖಡೇ ಕಾಕೇಲಾಗೌಪಾಯ್ ।
ಬಲಿಹಾರಿ ಗುರು ಅಪನೇ ಗೋವಿಂದ ದಿಯೋ ಬತಾಯ್ ॥

"ಗುರು ಗೋವಿಂದ ಈರ್ವರೂ ಒಂದೇ ಕ್ಷಣದಲ್ಲಿ ಎದುರಿಗೆ ಬಂದು ನಿಂತರೆ! ಈ ಇಳೆಯ ಸಾಕಾರ ಸ್ವರೂಪನಾದ ಗುರುವಿನ ಪಾದಕ್ಕೆ ಮೊದಲು ಶಿರಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸುತ್ತೇವೆ. ಆ ನಂತರ ಇವನೇ ನಿಜವಾದ ಗೋವಿಂದ. ಅವನಲ್ಲಿಗೆ ಹೋಗು ಎಂದರೆ ಹೋಗುತ್ತೇನೆ. ಬೇಡವೆಂದರೆ ಬಿಡುತ್ತೇನೆ. ಯಾಕೆಂದರೆ ಈ ಪ್ರಪಂಚಕ್ಕೊಬ್ಬ ದೇವರಿದ್ದಾನೆ ಎಂದು ತಿಳಿಹೇಳಿರುವುದು ಮೊದಲು ಆ ನನ್ನ ಗುರು. ಆ ಗೋವಿಂದನ ಬಗ್ಗೆ ಅವನು ಹೇಳದಿದ್ದರೆ ನನಗೆ ಆ ಗೋವಿಂದನಿರುವನೆಂಬುದು ಗೊತ್ತಿರುತ್ತಿರಲಿಲ್ಲ" ಎಂದು ಹೇಳಿದ್ದ.

ಎಲ್ಲದಕ್ಕೂ ಪೂರ್ವಾರ್ಜಿತ ಪುಣ್ಯವಿರಬೇಕು. ಅದಕ್ಕಾಗಿ ನಿಜಗುಣ ಶಿವಯೋಗಿಗಳು **"ಹರಪೂಜೆ ಗುರುಸೇವೆ ವರಪುಣ್ಯವಿಲ್ಲದೆ ಬರಿದೆ ದೊರಕುವುದುಂಟೇ ಆತ್ಮಾ!"** ಎಂದು ಹೇಳಿರುವುದು. ಆದರೆ ಪುಣ್ಯ ಮಾಡಿ ಬಂದವರೆಲ್ಲರೂ ಈ ಜನ್ಮದಲ್ಲಿ ಪುಣ್ಯವನ್ನೇ ಮಾಡಲೇ ಬೇಕೆಂಬ ಕಡ್ಡಾಯಗಳಿಲ್ಲ. ಹಾಗೆ ಪಾಪಿಗಳಾದರೂ ತಾವು ಮತ್ತೆ ಈ ಜನ್ಮದಲ್ಲಿ ಪಾಪಗಳನ್ನೇ ಮಾಡಬೇಕೆಂದು ಎಲ್ಲೂ ಹೇಳಿಲ್ಲ. ಅದು ಅವರವರ ಸ್ವಂತ ಇಚ್ಛೆ. ಪುಣ್ಯವಂತರು ಮತ್ತು ಪಾಪವಂತರು ಪುಣ್ಯ ಮತ್ತು ಪಾಪಗಳೆರಡರಲ್ಲಿ ಯಾವುದನ್ನು ಬೇಕಾದರೂ ಮಾಡಬಹುದು. ಅದು ಮುಂದಿನ ಜನ್ಮಕ್ಕೆ ಕಟ್ಟಿಟ್ಟ ಬುತ್ತಿ. ಬಹುಶ: ಆಡಂಬರದ ಶಿಷ್ಯರನ್ನು ಕಂಡೇ ಸ್ವಾಮಿ ವಿವೇಕಾನಂದರು ಈ ಕಥೆಯನ್ನು ಹೇಳಿರುವುದು.

ಒಬ್ಬ ಮನುಷ್ಯ ಸತ್ತ. ಆನಂತರ ಆತನನ್ನು ಯಮದೂತರು ಯಮಲೋಕಕ್ಕೆ ಎಳೆದುಕೊಂಡು ಹೋದರು. ಯಮನ ಮುಂದೆ ಆತನನ್ನು ನಿಲ್ಲಿಸಿದರು. ಚಿತ್ರಗುಪ್ತ ಆ ವ್ಯಕ್ತಿಯ ಪಾಪಗಳ ಪಟ್ಟಿಯನ್ನು ಯಮನ ಮುಂದೆ ಓದಿ ಹೇಳಿದ. ಆ ಪಟ್ಟಿಯಲ್ಲಿ ಅವನು ತನ್ನ ಹೆಂಡತಿಯನ್ನು ಪ್ರತಿನಿತ್ಯವೂ ಹೊಡೆದು ಬಡಿದು ಹಿಂಸಿಸುತ್ತಿದ್ದ. ಇದನ್ನರಿತ ಯಮಧರ್ಮನು "ಇವನಿಗೆ ಗುರುಗಳಾರೂ ಇರಲಿಲ್ಲವೇ?" ಎಂದು ಪ್ರಶ್ನಿಸಿದ. "ಇಲ್ಲ ಪ್ರಭು ಇವನು ಯಾರನ್ನೂ ಗುರುಗಳಾಗಿ ಸ್ವೀಕರಿಸಿಲ್ಲ" ಎಂದು ಚಿತ್ರಗುಪ್ತ ಹೇಳಿದ. ಆಗ ಯಮಧರ್ಮನು "ಹಾಗಾದರೆ ಇವನಿಗೆ ಪ್ರತಿನಿತ್ಯ ನಲವತ್ತು ಛಡಿಯೇಟುಗಳನ್ನು ಕೊಡಿ ಅದರ ಜೊತೆಗೆ ಇನ್ನುಳಿದ ಪಾಪಗಳಿಗೂ ಶಿಕ್ಷೆಯನ್ನಿತ್ತು ಕಳುಹಿಸಿದ.

ಮತ್ತೊಬ್ಬ ಪಾಪಿಯ ವಿಚಾರಣೆ ಪ್ರಾರಂಭವಾಯಿತು. ಅವನ ಪಾಪ ಪಟ್ಟಿಯಲ್ಲಿ ಹೀಗಿತ್ತು. ಅವನು ಪ್ರತಿನಿತ್ಯ ವೃದ್ಧರಾದ ತಂದೆತಾಯಿಗಳನ್ನು ನಿಂದಿಸುತ್ತಿದ್ದ ಎಂತೆಂದು. ಅದಕ್ಕೆ ಯಮ ಮತ್ತೆ ಕೇಳಿದ. "ಇವನಿಗೆ ಗುರುಗಳಾರೂ ಇರಲಿಲ್ಲವೇ" ಎಂತೆಂದು. ಅದಕ್ಕೆ ಚಿತ್ರಗುಪ್ತ, "ಇದ್ದಾನೆ ಪ್ರಭು, ಅವನಾಗಲೇ ಈ ಯಮಲೋಕದಲ್ಲಿ ಬಂದು ಸೇರಿಕೊಂಡಿದ್ದಾನೆ" ಎಂದು ಹೇಳಿದ. ಯಮನು ಅದಕ್ಕೆ "ಇವನಿಗೂ ಈ ತಪ್ಪಿಗಾಗಿ ಪ್ರತಿದಿನ ನಲವತ್ತು ಛಡಿ ಕೊಡಿರಿ. ಆದರೆ ಇವನಿಗೆ ಗುರುವೊಬ್ಬನಿರುವುದರಿಂದ ನಲವತ್ತರಲ್ಲಿ ಇಪ್ಪತ್ತು ಛಡಿಯೇಟು ಇವನಿಗೆ, ಇನ್ನಿಪ್ಪತ್ತು ಛಡಿಯೇಟು ಗುರುವಿಗೆ ಕೊಡಿರಿ" ಎಂದು ಆಜ್ಞಾಪಿಸಿದನಂತೆ.

ಗುರುವೆನಿಸಿದವನು ಶಿಷ್ಯರಿಗೆ ಸರಿಯಾದ ಮಾರ್ಗದರ್ಶನ ಕೊಡದಿದ್ದರೆ ಶಿಷ್ಯನು ಮಾಡಿದ ತಪ್ಪಿಗೆ ಗುರುವೂ ಸಹ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂಬ ಸಂಗತಿ ಮೇಲಿನ

ದೃಷ್ಟಾಂತದಲ್ಲಿ ಕಾಣಬರುವುದು. ಸನ್ನಿವೇಶಕ್ಕೆ ತಕ್ಕಂತೆ ಈ ದೃಷ್ಟಾಂತ ಕೊಡುತ್ತಾ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಿದ್ದರಂತೆ. "ಗುರುಗಳಾದವರು ಧರ್ಮೋಪದೇಶ ನೀಡುವುದರಲ್ಲಿ ದೊಡ್ಡ ಅನಾಹುತವೇ ಕಾದಿರುವುದು. ನಾನಂತೂ ಈ ಲೋಕವನ್ನೆಲ್ಲಾ ಸಂಚರಿಸುತ್ತಾ ಉಪದೇಶ ನೀಡುತ್ತಲೇ ಬಂದಿದ್ದೇನೆ. ಹಾಗೆ ನನಗಂತೂ ಶಿಷ್ಯರ ಬಳಗ ಗಣಿತಕ್ಕೂ ಮೀರಿ ಬೆಳೆದು ನಿಂತಿದೆ. ಅದರಲ್ಲಿ ಧರ್ಮೋಪದೇಶ ಕ್ಷೇಳಿಯೂ ಸಹ ತಪ್ಪು ಮಾಡುವವರ ಸಂಖ್ಯೆ ಅದೆಷ್ಟಿದೆಯೋ ಗೊತ್ತಿಲ್ಲ. ಆ ಒಬ್ಬೊಬ್ಬರ ಇಪ್ಪತ್ತು ಇಪ್ಪತು ಛಡಿ ಏಟುಗಳು ಅವೆಷ್ಟಾಗುವುವೋ ಅವುಗಳನ್ನೆಲ್ಲ ನಾನು ತಿನ್ನಬೇಕಲ್ಲಾ" ಎಂದು ನಗೆಯ ಅಲೆಯನ್ನೇ ಎಬ್ಬಿಸುತ್ತಿದ್ದರಂತೆ.

ಈ ಕಥೆಯಿಂದ ನಮಗೆ ತಿಳಿದುಬರುವುದೇನೆಂದರೆ ಗುರುವಿನ ಯೋಗ್ಯತೆ ಏನು? ಶಿಷ್ಯನ ಪಾತ್ರವೇನು? ಎಂಬುದೇ ಸ್ವಾಮಿ ವಿವೇಕಾನಂದರ ಅಭಿಪ್ರಾಯ. ಶಂಕರಾಚಾರ್ಯರೂ ಸಹ. ಗುರುವೆಂದರೆ ಎಂಥವನು? ಅವನಿಂದ ಈ ಲೋಕದ ಜನರಿಗೆ ದೊರೆಯುವ ಲಾಭಗಳಾವುವು ಈ ಬಗ್ಗೆ ಹೀಗೆ ಹೇಳುತ್ತಾರೆ, **"ತಾಪರಹಿತ ಪದಂ ಗುರುಪದಂ"** ಎಂದು.

ತಾಪಗಳಿಲ್ಲದ ತಾಣವೇ ಗುರುವಿನ ತಾಣವು. ಅಥವಾ ಗುರುವಿನ ಸಂಗವು. ತಾಪಗಳು ಅನಂತ. ಆದರೂ ನಮ್ಮ ದಾರ್ಶನಿಕರು ಮೂರು ವಿಧಗಳಾಗಿ ಹೇಳಿದ್ದಾರೆ. ಆಧ್ಯಾತ್ಮಿಕ ತಾಪ (ದು:ಖ), ಆಧಿಭೌತಿಕ ತಾಪ, ಆಧಿದೈವಿಕ ತಾಪ. ಇವುಗಳನ್ನೇ ನಮ್ಮ ಗ್ರಾಮೀಣ ಭಾಷೆಯಲ್ಲಿ ತಾಪತ್ರಯಗಳೆಂದು ಕರೆದಿರುವುದು.

ವಾತ-ಪಿತ್ತ-ಕಫಗಳೆಂಬ ತ್ರಿದೋಷಾದಿಗಳಿಂದಲೂ ಮತ್ತು ರಾಗ ದ್ವೇಷಾದಿ ಗಳಿಂದಲೂ ಉತ್ಪನ್ನವಾಗಬಹುದಾದಂತಹ ಸಂತಾಪಾದಿಗಳೇ ಆಧ್ಯಾತ್ಮಿಕ ದು:ಖವು. ಕಳ್ಳ, ರಾಜ, ಪ್ರಾಣಿ, ಸರ್ಪ ಇತ್ಯಾದಿ ಮೂಲಗಳಿಂದ ಉಂಟಾಗಬಹುದಾದಂತಹ ಸಂತಾಪಗಳೇ ಆಧಿಭೌತಿಕ ದು:ಖವು. ಗುಡುಗು, ಸಿಡಿಲು, ಮಿಂಚು, ಜಲಪ್ರಳಯ, ಸುನಾಮಿ, ಭೂಕಂಪ, ಜ್ವಾಲಾಮುಖಿ ಇತ್ಯಾದಿ ಪ್ರಾಕೃತಿಕ ವಿಕೋಪದಿಂದ ಉಂಟಾಗಬಹುದಾದಂತಹ ಸಂತಾಪಗಳೇ ಆಧಿದೈವಿಕ ದು:ಖಗಳು, ಜೀವಾತ್ಮರಿಗೆ ಒದಗಿ ಬರುವಂತಹ ಈ ದು:ಖಾದಿಗಳನ್ನು ಬರದಂತೆ ಮಾಡುವ ಶಕ್ತಿ ಗುರುವಿನಲ್ಲಿದೆ.

ವಿದ್ವಾಂಸರಾದವರು ಶಂಕರಾಚಾರ್ಯರ ಮೇಲಿನ ಆ ಶ್ಲೋಕದಲ್ಲಿರುವ ಒಂದೊಂದು ಅಕ್ಷರಗಳನ್ನು ಕಡಿಮೆ ಮಾಡುತ್ತಾ, ಮಾಡುತ್ತಾ ಹೀಗೆ ವಿಶ್ಲೇಷಿಸುತ್ತಾರೆ. 'ತಾ' ಎಂಬ ಅಕ್ಷರವನ್ನು ತೆಗೆದು ಹಾಕಿದಾಗ "ಪರಹಿತ ಪದಂ ಗುರುಪದಂ" ಎಂದಾಗುವುದು. ಗುರುವಿಗೆ ನಾನು ನನ್ನವು ಎಂಬ ಅಹಂಕಾರ ಮಮಕಾರಗಳ ಬಂಧನವಿರುವುದಿಲ್ಲ. ಆತ ಸ್ವಾರ್ಥಿಯಲ್ಲ, ಪಾರಮಾರ್ಥಿ. ಆದ್ದರಿಂದ **"ಪರೋಪಕಾರಾರ್ಥಮಿದಂ ಶರೀರಂ"** ಎಂಬ ಉಕ್ತಿಗೆ ಅನುಸರಿಸಿ ಆ ಗುರು ಪರಿಪೂರ್ಣ ತನ್ನ ಜೀವನವನ್ನೇ ಲೋಕಕಲ್ಯಾಣಾರ್ಥಕ್ಕಾಗಿ ಮುಡಿಪಿಟ್ಟಿರುತ್ತಾನೆ. ಸ್ವಾರ್ಥ ಬಿಟ್ಟು ಪಾರಮಾರ್ಥ ಸೇವೆ ಮಾಡುವುದೇ ಗುರುಧರ್ಮವು.

ಮತ್ತೆ ಮತ್ತೊಂದು ಅಕ್ಷರವನ್ನು ತೆಗೆದು ನೋಡಿದಾಗ 'ರಹಿತ ಪದಂ ಗುರು ಪದಂ' ಎಂತಾಗುವುದು. ಇಲ್ಲದಿರುವವು ಯಾವುವು? ದಾರೇಷಣ, ಪುತ್ರೇಷಣ, ವಿತ್ತೇಷಣ

ಎಂಬ ಈ ಕ್ಷಣ ತ್ರಯಗಳು ಇಲ್ಲದಿರುವುದು. ರಾಗದ್ವೇಷಾದಿಗಳು ಇಲ್ಲದಿರುವುದು. ಅದು ಗುರುಪದವು.

ಇನ್ನೊಂದು ಅಕ್ಷರ ತೆಗೆದಾಗ **'ಹಿತ ಪದಂ ಗುರುಪದಂ'** ಎಂದಾಗುವುದು. ಅಂದರೆ **'ಬಹುಜನ ಹಿತಾಯ ಬಹುಜನ ಸುಖಾಯ'** ಎಂಬಂತೆ. ತನ್ನ ಮೇಲೆ ಅಹಿತಕರವಾದ ಘಟನೆಗಳು ನಡೆದಾಗ್ಯೂ ಸದಾ ಲೋಕದ ಹಿತವನ್ನೇ ಚಿಂತನೆ ಮಾಡುವಂಥದ್ದು ಗುರುಪದವು.

ಪುನಃ ಮತ್ತೊಂದು ಅಕ್ಷರವನ್ನು ತೆಗೆದಾಗ **'ತಪದಂ ಗುರು ಪದಂ'** ಎಂದಾಗುವುದು. 'ತಪದಂ' ಎಂದರೆ ತಪಸ್ಸು. ಗಡ್ಡ ಬಿಟ್ಟು, ಗುಡ್ಡ ಸೇರಿ ಗಡ್ಡೆಗೆಣಸುಗಳನ್ನು ತಿನ್ನುತ್ತ ಕಾಡಿನಲ್ಲಿ ಮರಧ ಕೆಳಗೆ ಕುಳಿತುಕೊಳ್ಳುವುದಲ್ಲ ತಪಸ್ಸು. ಮಾನವರನ್ನು ಶುದ್ಧೀಕರಿಸುವಂತಹ ಸಾಧನೆಯೇ ತಪಸ್ಸು. ದೇಹ ಮನಸ್ಸುಗಳೆರಡಕ್ಕೂ ಒದಗಿ ಬರಬಹುದಾದಂತಹ ತಾಪಗಳನ್ನು ತಡೆಯಬಹುದಾದಂತಹದ್ದೇ ತಪಸ್ಸು. ಭರ್ತೃಹರಿ ಹೇಳುತ್ತಾನೆ!

**ಭೋಗಾ ನ ಭುಕ್ತಾ ವಯಮೇವ ಭುಕ್ತಾ**
**ಸ್ತಪೋ ನ ತಪ್ತಂ ವಯಮೇವ ತಪ್ತಾಃ**
**ಕಾಲೋ ನ ಯಾತೋ ವಯಮೇವ ಯಾತಾ**
**ಸ್ತೃಷ್ಣಾ ನ ಜೀರ್ಣಾ ವಯಮೇವ ಜೀರ್ಣಾಃ (ವೈರಾಗ್ಯಶತಕ ೭)**

ವನಿತಾದಿ ಸುಖಭೋಗಗಳನ್ನು ನಾವು ಅನುಭವಿಸಲಿಲ್ಲ. ನಾವೇ ಭುಕ್ತರಾಗಿ ಬಿಟ್ಟವೆ. (ಚಿಂತೆಗಳೇ ನಮ್ಮನ್ನು ತಿಂದು ಬಿಟ್ಟವು) ನಾವು ತಪಸ್ಸನ್ನು ಆಚರಿಸಲಿಲ್ಲ. ಬದಲಾಗಿ ದುಃಖಾದಿಗಳಿಗೆ ಗುರಿಯಾಗಿಬಿಟ್ಟೆವು. ಕಾಲವು ತಾನೇ ಸರಿದು ಹೋಗಲಿಲ್ಲ. ನಾವೇ ಕಾಲದಲ್ಲಿ ಕಳೆದು ಹೋದೆವು. ನಮ್ಮ ದುರಾಸೆಗಳಾವು ಜೀರ್ಣವಾಗಿ ಮುಗಿದು ಹೋಗಲಿಲ್ಲ: ನಾವೇ ಜೀರ್ಣರಾಗಿ ಒಂದು ದಿನ ಹೋಗಿಬಿಟ್ಟೆವು. ಭರ್ತೃಹರಿಯು ಹೇಳಿರುವಂತೆ ದುಃಖಾದಿಗಳನ್ನು ಶಮನ ಮಾಡಿಕೊಳ್ಳುವುದೇ ತಪಸ್ಸು.

ಕೊನೆಯದಾಗಿ ಮತ್ತೊಂದು ಅಕ್ಷರವನ್ನು ತೆಗೆದಾಗ **'ಪದಂ ಗುರು ಪದಂ'** ಎಂದಾಗುವುದು. ಗುರುವಿನಲ್ಲಿಗೆ ಅತ್ಯಂತ ವಿನಯ, ಭಕ್ತಿಯಿಂದ ಶರಣಾಗಿ ಬಂದಂತವನಿಗೆ ತನ್ನ ಪದವಿಯನ್ನೇ ಕೊಡುವಂಥವನು ನಿಜವಾದ ಗುರುವು. ಮುಂದೊಮ್ಮೆ ಶಿಷ್ಯನೇ ಗುರುವಾಗಿ ಬಿಡುವುದು.

ಲೌಕಿಕದ ಯಾವುದೋ ಒಂದು ವಿದ್ಯೆಯನ್ನು ಯಾರೊಬ್ಬರು ಕಲಿಯುವಾಗ ಅವರು ವಿದ್ಯಾರ್ಥಿ ಎನಿಸಿಕೊಳ್ಳುತ್ತಾರೆ. ಮುಂದೆ ಅವರ್‍ಯಾರೋ ಶಿಕ್ಷಕ ವೃತ್ತಿಯನ್ನು ಮಾಡುವಾಗ 'ಗುರು' ಎನಿಸಿಕೊಳ್ಳುತ್ತಾರೆ. ಆದ್ದರಿಂದ ಗುರುವೊಬ್ಬನೇ ಮಾತ್ರ ತನ್ನ ಪದವಿಯನ್ನು ಕೊಡುವಂಥವನಾಗಿದ್ದಾನೆ.

ಒಬ್ಬ ಝೆನ್ ಗುರುವಿದ್ದ. ಒಂದು ದಿನ ಅವರಲ್ಲಿಗೆ ಓರ್ವ ಸುಂದರ ಬುದ್ಧಿವಂತ ತರುಣನು ಬಂದು, "ಗುರುಗಳೇ ನಾನು ಸರ್ವಸ್ವವನ್ನೂ ತ್ಯಾಗ ಮಾಡಿ ಬಂದಿದ್ದೇನೆ. ನನಗೆ

ಆತ್ಮತತ್ವದ ಬೋಧೆ ಅನುಗ್ರಹಿಸಿರಿ" ಎಂದು ಬೇಡಿಕೊಂಡ. ಗುರುಗಳು ಆ ತರುಣನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕಾರ ಮಾಡಿಕೊಂಡರು. ನಿರ್ವಾಣ ತತ್ವದ ಉಪದೇಶಗೈದರು. ಮುಂದೊಮ್ಮೆ ಆತ ಎರಡನೇ ಬುದ್ಧ ಎನಿಸಿಕೊಂಡ. ಬಹಳ ಶಿಷ್ಯರು ಹಳೆಯ ಗುರುಗಳನ್ನು ಬಿಟ್ಟು ಇವನ ಶಿಷ್ಯರಾಗಿಬಿಟ್ಟರು. ಶಿಷ್ಯ ಸಂಪತ್ತು ಅಪಾರವಾಯಿತು. ಒಮ್ಮೆ ಆ ತರುಣ ಅಂತರಂಗದಲ್ಲಿ "ನಾನು ಎರಡನೆಯ ಬುದ್ಧನಾಗಿಬಿಟ್ಟೆನೇ?" ಎಂಬ ಪ್ರಶ್ನೆ ಮೂಡಿಬಂತು.

ಒಂದು ದಿನ ಗುರುಗಳ ಹತ್ತಿರ ಬಂದು ಆ ತರುಣ "ಗುರುಗಳೇ ನಾನು ನಿಮ್ಮ ಹತ್ತಿರ ಬಂದಾಗ ಶಿಷ್ಯನೆನಿಸುತ್ತೇನೆ. ಶಿಷ್ಯರ ಹತ್ತಿರವಿದ್ದಾಗ ಗುರುವೆನಿಸಿಕೊಳ್ಳುತ್ತೇನೆ. ಸತ್ಯವಾಗಿ ಹೇಳಿರಿ, ನಾನಾರೆಂದು?" ಕೇಳಿದ.

"ಸತ್ಯವಾಗಿ ನೀನು ಎರಡೂ ಅಲ್ಲ! ಹಾಗೇ ಎರಡೂ ಹೌದು" ಎಂದರು.

"ಹಾಗೆಂದರೇನು? ಗುರುಗಳೇ"

"ನಿನ್ನಷ್ಟಕ್ಕೆ ನೀನಿರುವಾಗ ಅಂದರೆ ಆತ್ಮನಲ್ಲಿ ಲೀನಗೊಂಡಾಗ ನೀನು ಗುರುವೂ ಅಲ್ಲ, ಶಿಷ್ಯನೂ ಅಲ್ಲ. ಆದರೆ ನನ್ನ ಸಂಬಂಧದಲ್ಲಿ ಬಂದಾಗ ನೀನು ನನ್ನ ಶಿಷ್ಯ. ನೀನು ನಿನ್ನ ಶಿಷ್ಯರ ಸಂಬಂಧ ಪಡೆದಾಗ ನೀನವರ ಗುರು. ಈ ಎಲ್ಲಾ ಸಂಬಂಧಗಳನ್ನು ಕಳೆದುಕೊಂಡಾಗ ನೀನಾವುದೂ ಅಲ್ಲ, ಆಗ ನೀನು ನೀನೇ! ಇದೇ ನಿರ್ವಾಣ.

"ಕುರ್ಯಾದ್ದಂಡ ನಮಸ್ಕಾರ ನಿರ್ಲಜ್ಜೋ ಗುರುಸನ್ನಿಧೌ" ಎಂದಿರುವಂತೆ ಶಿಷ್ಯನಾದವನು ಎಳ್ಳಷ್ಟೂ ನಾಚಿಕೆಪಟ್ಟುಕೊಳ್ಳದೆ ಶ್ರೀ ಗುರುವಿನ ಪಾದಕಮಲಗಳಿಗೆ ದೀರ್ಘದಂಡ ಪ್ರಣಾಮಗಳನ್ನು ಸಮರ್ಪಿಸಬೇಕು. ಬೌದ್ಧ ಧರ್ಮೀಯರೂ ಸಹ ಸದ್ಗುರುವನ್ನು ಸ್ವೀಕಾರ ಮಾಡಲಿಚ್ಛಿಸಿದಾಗ ಅವರ ಬಳಿ ಬಂದು ಶರಣಾಗತರಾಗಿ ಹೀಗೆ ಹೇಳುವರು. "ಬುದ್ಧ ಶರಣಂ ಗಚ್ಛಾಮಿ, ಧಮ್ಮಂ ಶರಣಂ ಗಚ್ಛಾಮಿ ಸಂಘ ಶರಣಂ ಗಚ್ಛಾಮಿ" ಎಂದು. ಆಮೇಲೆ ಅವರನ್ನು ಶಿಷ್ಯರನ್ನಾಗಿ ಸ್ವೀಕಾರ ಮಾಡಿಕೊಳ್ಳುವುದು. ಎಳ್ಳಷ್ಟೂ ಸ್ವಾಭಿಮಾನವಿಲ್ಲದೆ ಸದ್ಗುರುವಿಗೆ ತನ್ನನ್ನೇ ಅರ್ಪಿಸಿಕೊಂಡತಹ ಶಿಷ್ಯ ಹೇಗಾಗುತ್ತಾನೆ ಎನ್ನುವುದಕ್ಕೆ ಈ ಶ್ಲೋಕ ಹೇಳುತ್ತದೆ.

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂಯೇನ ತಸ್ಮೈಶ್ರೀ ಗುರುವೇ ನಮಃ ॥

ಅಜ್ಞಾನವೆಂಬ ಈ ಕಣ್ಣ ಕಾಯಿಲೆಗೆ ಜ್ಞಾನವೆಂಬ ಅಂಜನದ ಕಡ್ಡಿಯಿಂದ ತಿದ್ದಿತೀಡಿ ಅದನ್ನು ಗುಣಪಡಿಸಿ ಜ್ಞಾನದ ಕಣ್ಣು ತೆರೆಯುವಂತೆ ಮಾಡಿ ಶಿಷ್ಯನ ಕೀರ್ತಿಯನ್ನು ಜಗದಗಲ ಯುಗದಗಲ ಹರಡುವಂತೆ ಮಾಡಿದ ಸದ್ಗುರುವೇ ನಿನಗೆ ಶರಣಾರ್ಥಿ । ಶರಣು ಶರಣಾರ್ಥಿ ॥

# ಶಿರೋವ್ರತ

ಮಾನವ ಜನ್ಮದ ಗುರಿ ಆನಾರೆಂದರಿವುದು. ಅಂದರೆ ಮುಕ್ತಿ (ಮೋಕ್ಷ) ಅಥವಾ ನಿರ್ವಾಣ ಹೊಂದುವುದು. ಈ ಗುರಿ ತಲುಪಬೇಕೆಂಬ ಉತ್ಕಟ ಬಯಕೆಯುಳ್ಳ ಜೀವಾತ್ಮನು. ಯೋಗ್ಯ ಗುರುವೊಬ್ಬನಿಗೆ ಶರಣಾಗುತ್ತಾನೆ. ಆದರೆ ಆ ಗುರುವು ಶಿಷ್ಯನಿಗೆ ಮೊದಲು ಅನಂತ ಪರೀಕ್ಷೆಗಳನ್ನೊಡ್ಡುತ್ತಾನೆ. ಆ ಪರೀಕ್ಷೆಗಳಲ್ಲಿ ಯಶಸ್ವಿಯಾದ ಶಿಷ್ಯರಿಗೆ ಮಾತ್ರ ದೀಕ್ಷೆಯನ್ನು ಅನುಗ್ರಹಿಸುತ್ತಾನೆ. ಆ ಸದ್ಗುರುವು ನೀಡಿದ ದೀಕ್ಷೆಯ ಆಚರಣೆಯೇ ಶಿರೋವ್ರತ ಪರಿಪಾಲನೆಯು.

ವೀರಶೈವ ಧರ್ಮ ಪರಂಪರೆಯಲ್ಲಿ ಬಹಳ ವರ್ಷಗಳ ಹಿಂದೆ ಸಾರ್ವಾಡೇಶ್ವರರು ಎಂಬ ಮಹಾನ್ ಯೋಗಿಗಳಿದ್ದರು. ಅವರ ಬಗ್ಗೆ ಇತಿಹಾಸ ಹೀಗೆ ಹೇಳುತ್ತದೆ. ಅವರು ಉತ್ತರ ಭಾರತದಿಂದ ಬಂದು ಪಾವಗಡದ ಸುತ್ತಮುತ್ತ ಧರ್ಮಜಾಗೃತಿಗೊಳಿಸಿದರು ಎಂದು.

ಅವರ ವಾಸ ಅಡವಿಯಲ್ಲಿರುವ ಒಂದು ದೇವಸ್ಥಾನದಲ್ಲಿ. ಅಲ್ಲಿ ಪ್ರತಿದಿನ ಬಂದ ಭಕ್ತರಿಗೆ ವೀರಶೈವ ಧರ್ಮದ ಉಪನ್ಯಾಸವನ್ನು ನೀಡುತ್ತಿದ್ದರು. ಪ್ರತಿದಿನ ದನ ಕಾಯಲೆಂದು ಆ ಅಡವಿಗೆ ಬರುತ್ತಿದ್ದ ಗೊಲ್ಲ ಬಾಲಕನೊಬ್ಬ ಅವರ ಪ್ರವಚನ ಮನಸ್ಸಿಟ್ಟು ಕೇಳುತ್ತಿದ್ದ: ಅವನ ಹೆಸರು ಬೊಪ್ಪಣ್ಣ. ಆ ಬೊಪ್ಪಣ್ಣನೊಂದು ದಿನ ಸಾರ್ವಾಡೇಶ್ವರರಲ್ಲಿ "ಗುರುವೇ ನನಗೂ ದೀಕ್ಷೆಯನ್ನು ಅನುಗ್ರಹಿಸಿ, ನನ್ನ ಜನ್ಮ ಪಾವನಗೊಳಿಸಿ" ಎಂದು ಶ್ರೀಗಳ ಚರಣಕ್ಕೆರಗಿ ಬೇಡಿಕೊಂಡ.

ಶ್ರೀಗಳು "ಏಳು ಕಂದ, ಏಳು ನಿನಗೂ ದೀಕ್ಷೆ ಕೊಡುವೆನು. ಆದರೆ ನೀನು ಇಪ್ಪತ್ತೊಂದು ದಿನಗಳ ಪರ್ಯಂತರ ಮೊದಲೊಂದು ವ್ರತವನ್ನು ಆಚರಿಸಬೇಕು. ಆ ವ್ರತದಲ್ಲಿ ನೀನು ಯಶಸ್ವಿಯಾದರೆ ನಿನಗೆ ದೀಕ್ಷೆಯನ್ನು ಅನುಗ್ರಹಿಸುವೆನು. ಅದೇನೆಂದರೆ, ನೀನು ಇಪ್ಪತ್ತೊಂದು ದಿನಗಳ ಪರ್ಯಂತರ ನಿಮ್ಮ ಮನೆಯಿಂದ ನನಗೆ ಹಾಲು ತಂದು ಕೊಡಬೇಕು. ಆದರೆ ನೀನು ನಿಮ್ಮ ಮನೆಯಲ್ಲಿ ಕೈಯಲ್ಲಿ ಹಾಲಿನ ಬಟ್ಟಲು ಹಿಡಿದಾಗಿನಿಂದ ಹಿಡಿದು ನನಗೆ ಆ ಹಾಲು ತಂದು ಮುಟ್ಟಿಸುವ ಪರ್ಯಂತರ ನೀನು ಯಾರೊಬ್ಬರೊಂದಿಗೂ ಮಾತನಾಡಕೂಡದು. ಹಾಗೂ ಹಿಂತಿರುಗಿ ನೋಡಬಾರದು. ಹೀಗೆ ಇಪ್ಪತ್ತೊಂದು ದಿನ ನೀನು ನಡೆದುದ್ದೇ ಆದರೆ ನಿನಗೆ ದೀಕ್ಷೆ ಖಂಡಿತವಾಗಿಯೂ ಕೊಡುವೆನು" ಎಂದು ಹೇಳಿದರು.

ಬೊಪ್ಪಣ್ಣ "ಆಗಲಿ ಗುರುಗಳೇ, ನಿಮ್ಮ ಅಪ್ಪಣೆಯಂತೆ ನಡೆದುಕೊಳ್ಳುವೆ" ಎಂದು ನಮಸ್ಕರಿಸಿ ಹೊರಹೊರಟ. ಗುರು ಹೇಳಿದಂತೆ ಇಪ್ಪತ್ತು ದಿನಗಳ ಪರ್ಯಂತರ ಚಾಚೂತಪ್ಪದೆ ಆಚರಿಸಿಕೊಂಡು ಬಂದ. ಇನ್ನೊಂದು ದಿನ ಮಾತ್ರ ಬಾಕಿ ಉಳಿದಿತ್ತು. ಆದರೆ ಸಾರ್ವಾಡೇಶ್ವರ ಗುರುಗಳೇ ಬೊಪ್ಪಣ್ಣನ ವ್ರತ ಭಂಗ ಮಾಡಲೆಂದೇ ಓರ್ವ ಭಕ್ತನನ್ನು ಆತನು ಬರುವ ದಾರಿಗೆದುರಾಗಿ ಕಳುಹಿಸಿದ್ದರು. ಆ ವ್ಯಕ್ತಿ ಬೊಪ್ಪಣ್ಣನಿಗೆ ಎದುರಾಗಿ ಹೋಗಿ ಬಲವಂತವಾಗಿ ಮಾತನಾಡಿಸಿದ. ಆತನೆಷ್ಟೇ ಪ್ರಯತ್ನಿಸಿದರೂ ಬೊಪ್ಪಣ್ಣ ಮಾತನಾಡಲಿಲ್ಲ. ಬದಲಿಗೆ ಮೌನದಿಂದಲೇ ವೇಗದ ಹೆಜ್ಜೆಗಳನ್ನಿಟ್ಟ. ಆದರೂ ಆ ವ್ಯಕ್ತಿ ಬೊಪ್ಪಣ್ಣನ ಕೈ ಹಿಡಿದು ಎಳೆದ. ಹಿಂದಿರುಗಿಸಲು ಬಲತ್ಕಾರ ಮಾಡಿದ. ಬೊಪ್ಪಣ್ಣ ಇದಾವುದಕ್ಕೂ ಜಗ್ಗದೆ, ಅವನಿಂದ

ಕೊಸರಿಕೊಂಡು ಗುರುಗಳತ್ತ ಓಡೋಡಿ ಬಂದು ಹಾಲಿನ ಬಟ್ಟಲು ಅವರ ಮುಂದಿಟ್ಟು ಶ್ರೀಗಳ ಪಾದಕ್ಕೊಂದಿಸಿ ಮೌನದಿಂದ ತಲೆ ತಗ್ಗಿಸಿ ನಿಂತುಕೊಂಡ. ಬೊಪ್ಪಣ್ಣನ ಬೆನ್ನ ಹಿಂದೆಯೇ ಆ ವ್ಯಕ್ತಿ ಬಂದು ನಿಂತಿದ್ದ.

ವ್ರತ ಭಂಗ ಮಾಡಲು ಹೋಗಿದ್ದ ವ್ಯಕ್ತಿ ಗುರುಗಳನ್ನು ಕೇಳಿದ್ದ. "ಪೂಜ್ಯರೇ, ಬೊಪ್ಪಣ್ಣನಿಗೇಕೆ ಇಷ್ಟೆಲ್ಲ ಪರೀಕ್ಷೆ ಮಾಡಿದಿರಿ. ಇದರ ಉದ್ದೇಶವೇನು?" ಎಂದ.

ಗುರುಗಳು "ಬೊಪ್ಪಣ್ಣ ನನ್ನಲ್ಲಿ ಕೇಳಿದ್ದು ಶಿರೋವ್ರತ ಪಾರಿಪಾಲನೆಯ ದೀಕ್ಷೆಯನ್ನು. ಆ ದೀಕ್ಷೆ ಸಣ್ಣದಲ್ಲ. ಆ ದೀಕ್ಷೆಯನ್ನು ನಾನು ಅನುಗ್ರಹಿಸಿದ ದಿನದಿಂದ ಸಾಯುವ ಪರ್ಯಂತರ ಚಾಚೂತಪ್ಪದೆ ಆಚರಿಸಿಕೊಂಡು ಹೋಗಬೇಕು. ಶಿರೋವ್ರತವೆಂದರೆ ಗುರುವಾಕ್ಯ ಪರಿಪಾಲನೆ. ಈ ವ್ರತವನ್ನಾಚರಿಸುಲು ಸದ್ಭಕ್ತರಲ್ಲಿ ಬೇಕಾದದ್ದು ಶ್ರದ್ಧೆ ಮತ್ತು ಸದ್ಭಕ್ತಿ. ಅದು ಬೊಪ್ಪಣ್ಣನಲ್ಲಿದೆಯೋ ಇಲ್ಲವೋ ಎಂಬುದು ನಮಗೆ ಗೊತ್ತಾಗಬೇಕಿತ್ತು. ಅದಕ್ಕಾಗಿ ನಾವೊಂದು ಸಣ್ಣ ಪರೀಕ್ಷೆ ನಡೆಸಿದೆವು. ಬೊಪ್ಪಣ್ಣ ಅದರಲ್ಲಿ ಯಶಸ್ವಿಯಾದ. ಇನ್ನು ಮೇಲೆ ಆತನನ್ನು ನಾನು ನಮ್ಮ ಶಿಷ್ಯನೆಂದು ಒಪ್ಪಿಕೊಳ್ಳುತ್ತೇವೆ" ಎಂದು ಹೇಳಿ ಬೊಪ್ಪಣ್ಣನಿಗೆ ವೀರಶೈವ ಧರ್ಮದ ಇಷ್ಟಲಿಂಗ ದೀಕ್ಷೆಯನ್ನು ಅನುಗ್ರಹಿಸಿದರು.

**ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು?**
**ಹಸಿವು ಹೋಹುದೇ? ಅಂಗದ ಮೇಲೆ ಲಿಂಗ ಸ್ವಾಯುತವಾದರೇನು?**
**ಭಕ್ತನಾಗಬಲ್ಲನೇ? ಇಟ್ಟ ಕಲ್ಲು ಮಳೆಯ ಮೇಲೆ ಸಿಕ್ಕಡೆ**
**ಆ ಕಲ್ಲು ಲಿಂಗವೇ? ಆ ಮಳೆ ಭಕ್ತನೇ? ಇಟ್ಟಾತ ಗುರುವೇ?**
**ಇಂತಪ್ಪವರ ಕಂಡಡೆ ನಾಚುವೆನಯ್ಯಾ ಗುಹೇಶ್ವರಾ ॥**

ಹೊಟ್ಟೆಯ ಮೇಲೆ ಬುತ್ತಿಯ ಗಂಟಿದ್ದರೆ ಹಸಿವು ಹೋಗುವುದೇ? ಇಲ್ಲ! ಹಾಗೆ ಬರಿಯ ಮೈಯ ಮೇಲೆ ಲಿಂಗ ಅಥವಾ ಜನಿವಾರಗಳಿದ್ದಾಕ್ಷಣ ಆತ ನಿಜಭಕ್ತನಾಗಬಲ್ಲನೇ? ಇಲ್ಲ. ಅದು ಹೇಗೆಂಬುದಕ್ಕೊಂದು ಉದಾಹರಣೆ ಕೊಟ್ಟಿದ್ದಾನೆ. ಯಾರೋ ಒಬ್ಬರು ಒಂದು ಕಲ್ಲಿಟ್ಟಿರುತ್ತಾರೆ. ಅದರ ಮೇಲೆ ಮಳೆ ಸುರಿಯುತ್ತದೆ. ಆಗ ಆ ಇಟ್ಟ ಕಲ್ಲು ಲಿಂಗವೆನಿಸಿಕೊಳ್ಳಲಾರದು. ಅದರ ಮೇಲೆ ಸುರಿದ ಮಳೆಯ ನೀರು ಭಕ್ತನೆನಿಸಿಕೊಳ್ಳಬಹುದೇ? ಇಲ್ಲ, ಹಾಗೆ ಆ ಕಲ್ಲಿಟ್ಟವನೂ ಸಹ ಗುರುವಾಗಲಾರನು. ಇಂಥವರನ್ನು ಕಂಡರೆ ಆ ಭಗವಂತನೇ ನಾಚಿಕೊಳ್ಳುವನು. ಹೀಗೆ ಪ್ರಭುದೇವರು ವೇಷಧಾರಿ ಗುರುಶಿಷ್ಯರ ಸಂಬಂಧವನ್ನು ಹೀಗೆ ಹೀಯ್ಯಾಳಿಸಿದ್ದಾನೆ. ಹಾಗೆ ಶಿರೋವ್ರತಾಚರಣೆಯು ಹೇಗಿರಬೇಕೆಂಬುದರ ಬಗ್ಗೆ ರೇಣುಕ ಭಗವತ್ಪಾದರು ಶ್ರೀ ಸಿದ್ಧಾಂತ ಶಿಖಾಮಣಿಯ ಲಿಂಗನಿಷ್ಠಾಸ್ಥಲದಲ್ಲಿ ಹೀಗೆ ಹೇಳಿದ್ದಾರೆ.

**ಅಪಗಚ್ಛತು ಸರ್ವಸ್ವಂ ಶಿರಸ್ಛೇದನಮಸ್ತು ವಾ ।**
**ಮಹೇಶ್ವರೋ ನ ಮುಂಚೇತ್ತು ಲಿಂಗಪೂಜಾ ಮಹಾವ್ರತಂ ॥**

ತನ್ನ ಸಂಪತ್ತೆಲ್ಲ ಹೋಗಲಿ ಅಥವಾ ಶಿರಚ್ಛೇದನವೇ ಆಗಲಿ, ಮಾಹೇಶ್ವರನು (ವೀರಶೈವನಾದವನು) ಲಿಂಗಪೂಜಾ ಮಹಾವ್ರತವನ್ನು (ಶಿರೋವ್ರತವನ್ನು) ಆಚರಿಸದೆ

ಕೈಬಿಡಬಾರದು ಎಂದು.

ವ್ಯಾಸಮಹರ್ಷಿ ಹದಿನೆಂಟು ಪುರಾಣಗಳನ್ನೂ ಮಹಾಭಾರತವನ್ನೂ ಬರೆದಿರುವನು. ಅವುಗಳಲ್ಲಿ ವೀರಶೈವ ಧರ್ಮದವರ ಶಿರೋವ್ರತದ ಬಗ್ಗೆ ಹೀಗೆ ಆಶ್ಚರ್ಯ ವ್ಯಕ್ತಪಡಿಸಿದ್ದಾನೆ. ಸ್ಕಂದಪುರಾಣದ ಕೇದಾರ ಖಂಡದಲ್ಲಿನ ಒಂದು ಶ್ಲೋಕ ಹೀಗಿದೆ.

**ಶೈಲಾದೇನ ಮಹಾಭಾಗಂ ವಿಚಿತ್ರ ಲಿಂಗಧಾರಕಾ: ।**
**ಶವಸ್ಯೋಪರಿ ಲಿಂಗ ಚ ಧ್ರೀಯತೇ ಚ ಪುರಾತನ್ಯೆ ॥**
**ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವನಂ ।**

ಲಿಂಗಧಾರಿಗಳಾಗಿಯೇ ಜನಿಸಿ (ಅಂದರೆ ಜನನಪೂರ್ವ ಮಾತೃ ಗರ್ಭದಲ್ಲಿರುವಾಗಲೇ ಎಂಟನೆಯ ತಿಂಗಳಲ್ಲಿ ಗರ್ಭಕ್ಕೆ ಲಿಂಗಧಾರಣೆ ಮಾಡುವವರು. ಶಿಶು ಜನಿಸಿದ ನಂತರ ಪುನ: ಅದೇ ಲಿಂಗವನ್ನು ಶಿಶುವಿಗೆ ಧಾರಣೆ ಮಾಡುವರು) ಲಿಂಗಧಾರಿಗಳಾಗಿಯೇ ಜನಿಸಿ ಲಿಂಗಧಾರಿಗಳಾಗಿಯೇ ಐಕ್ಯರಾಗುವರು. ಇವರ ಈ ಆಚಾರ ಬಹಳ ವಿಚಿತ್ರವಾದದ್ದು. ಈ ಲಿಂಗವ್ರತವು ಜನಸಾಮಾನ್ಯರಿಗೆ ಆಚ್ಚರಿಯನ್ನುಂಟು ಮಾಡುವುದಾಗಿದೆ. ಹೀಗೆ ಪ್ರತಿಪಾದಿಸಿದ್ದಾರೆ. ಪುನ: ಅದೇ ಸ್ಕಂದ ಪುರಾಣದ ಮತ್ತೊಂದು ಶ್ಲೋಕದಲ್ಲಿ ಹೇಳುತ್ತಾರೆ.

**ಯೋ ಹಸ್ತಪೀಠೆ ನಿಜಮಿಷ್ಟಲಿಂಗಂ ವಿನ್ಯಸ್ಯ ತಲ್ಲೀನಮನ: ಪ್ರಚಾರ:**
**ಬಾಹ್ಯಕ್ರಿಯಾಸಂಕುಲ ನಿಷ್ಪೃಹಾತ್ಮಾ ಸಂಪೂಜಯತ್ಯಂಗ ಸ ವೀರಶೈವ: ॥**

ಸದಾ ಇಷ್ಟಲಿಂಗವನ್ನು ದೇಹದ ಮೇಲೆ ಧರಿಸಿಕೊಂಡು ಪ್ರತಿನಿತ್ಯ ಅದನ್ನು ಅನನ್ಯ ಭಕ್ತಿಯಿಂದ ಪೂಜಿಸುವವನೇ ನಿಜವಾದ ವೀರಶೈವನು. ಇವನ ಅಂತರಂಗ ಸಾಧನೆ ಹಾಗೂ ಬಹಿರಂಗ ಪೂಜೆಗೆ 'ಇಷ್ಟಲಿಂಗ'ವೇ ಹುಗ್ಗುರುತು. ಹೀಗೆ ಹೇಳಿರುವ ವ್ಯಾಸರು ಇಂತಹ ವೀರವ್ರತ (ಶಿರೋವ್ರತ)ವನ್ನು ಯಾರ‍್ಯಾರು ಮಾಡಿದರು ಎಂತೆಬುದರ ಬಗ್ಗೆ ಲಿಂಗಪುರಾಣದಲ್ಲಿ ಅವರೇ ಹೀಗೆ ಹೇಳಿದ್ದಾರೆ.

**ಕಶ್ಯಪಾತ್ರಿ ಭಾರದ್ವಾಜ ಗೌತಮಾದ್ಯ ಮಹರ್ಷಯ: ।**
**ಧಾರಯಂತಿ ಸದಾಲಿಂಗಮುತ್ತಮಾಂಗೇ ವಿಶೇಷಿತ: ॥**

ಕಶ್ಯಪ ಅತ್ರಿ ಭಾರದ್ವಾಜ ಗೌತಮ ಇತ್ಯಾದಿ ಮಹರ್ಷಿಗಳೆಲ್ಲರೂ ಇಷ್ಟಲಿಂಗವನ್ನು ಸದಾ ಉತ್ತಮಾಂಗ (ಶಿರ)ದಲ್ಲಿ ಧರಿಸುತ್ತಿದ್ದರು. ಅಂತೆಯೇ ಇದಕ್ಕೆ ಶಿರೋವ್ರತ ಎಂದು ಕರೆದಿರುವುದು. ಅಲ್ಲದೆ ಈ ವ್ರತಕ್ಕೆ ಮಹಾವ್ರತ, ಪಾಶುಪತ ವ್ರತ, ಶಿರೋವ್ರತ ಅತ್ಯಾಶ್ರಮವ್ರತ, ಶಾಂಭವವ್ರತ ಎಂಬಿತ್ಯಾದಿ ಪರ್ಯಾಯ ನಾಮಗಳಿರುವುವು.

ಗುರುವಿನಿಂದ ದೀಕ್ಷೆ ಪಡೆದಾಗ ಈ ನಮ್ಮ ಅಂಗದ ಮೇಲೆ ಲಿಂಗ ಸ್ಥಾಪನೆಯಾಗುವುದು. ಆಗ ಈ ನಮ್ಮ ಶರೀರ ಮಹಾಕ್ಷೇತ್ರವೆನಿಸಿಕೊಳ್ಳುವುದು. ಉಜ್ಜೈನಿ, ಕಾಶಿ, ಶ್ರೀಶೈಲ, ಗೋಕರ್ಣ ಇತ್ಯಾದಿ ಸ್ಥಾನಗಳು ಮಹಾಕ್ಷೇತ್ರವೆನಿಸಿಕೊಂಡಿದ್ದು ಅಲ್ಲಿ ಲಿಂಗ (ದೇವರು) ಸ್ಥಾಪಿತವಾಗಿರುವುದರಿಂದ. ಹಾಗೆ ನಮ್ಮ ಶರೀರವೂ ಸಹ. ಇದನ್ನೇ ಬಸವಣ್ಣ ಹೀಗೆ ಹೇಳಿರುವುದು. "ಉಳ್ಳವರು ಶಿವಾಲಯ ಮಾಡುವುರು, ನಾನೇನು ಮಾಡುವೆ?

ಬಡವನಯ್ಯಾ ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರ ಹೊನ್ನ ಕಳಸವಯ್ಯಾ..." ಎಂದು. ಪ್ರಭುದೇವರೂ ಸಹ "ದೇಹದೊಳಗೆ ದೇವಾಲಯುವಿದ್ದು, ಮತ್ತೆ ಬೇರೆ ದೇವಾಲಯವೇಕೆ?" ಎಂದು ಹೇಳಿದ್ದಾನೆ. ಮತ್ತೆ ಚೆನ್ನಬಸವಣ್ಣ ಹೀಗೆ ಹೇಳುತ್ತಾನೆ. "ಅಂಗವೇ ಲಿಂಗ, ಲಿಂಗವೇ ಅಂಗವೆಂದರಿದ ನಮ್ಮ ಕೂಡಲ ಚೆನ್ನಸಂಗಮದೇವರು ಅಲ್ಲಿ ಹೆರಹಿಂಗದಿರ್ಪ ಕಾಣಿರೋ" ಎಂದು.

ಸ್ವತ: ವ್ಯಾಸ ಮಹರ್ಷಿಯೇ ಮಹಾಭಾರತದ ಅನುಪರ್ವದಲ್ಲಿ ಈ ಶಿರೋವ್ರತಗಳ ಬಗ್ಗೆ ಧರ್ಮರಾಯ ಮತ್ತು ಭೀಷ್ಮ ಪಿತಾಮಹರ ಬಾಯಿಯಿಂದ ಹೀಗೆ ಹೇಳಿದ್ದಾನೆ.

ಕಿಮಾಹು ಭರತ ಶ್ರೇಷ್ಠ ಪಾತ್ರಂ ವಿಪ್ರಾ: ಸನಾತನ: ।
ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣಂ ವ್ಯಾsಪ್ಯಲಿಂಗಿನಂ ॥
ಸ್ವವೃತ್ತಿಮಭಿಪನ್ನಾಯ ಲಿಂಗಿನೇಚೇತರಾಯ ಚ
ದೇಹಮಾಹುರ್ಮಹಾರಾಜ ಉಭಾವೇತೌ ತಪಸ್ವಿನೌ ॥

(ಮ.ಭಾ. ಅನುಪರ್ವ ಅಧ್ಯಾಯ ೨೨)

"ಎಲೈ ಭರತ ಶ್ರೇಷ್ಟನಾದ ಭೀಷ್ಮನೇ, ಲಿಂಗಿ ಬ್ರಾಹ್ಮಣ (ವೀರಮಾಹೇಶ್ವರರು ಅಥವಾ ಜಂಗಮರು) ಮತ್ತು ಬ್ರಾಹ್ಮಣ (ವರ್ಣ ಪದ್ಧತಿಯಲ್ಲಿ ಬರುವ ಬ್ರಾಹ್ಮಣರು) ಇವರಲ್ಲಿ ದಾನ ತೆಗೆದುಕೊಳ್ಳಲು ಯಾರು ಶ್ರೇಷ್ಟರು?" ಎಂದು ಧರ್ಮರಾಜನು ಪ್ರಶ್ನೆ ಮಾಡುತ್ತಾನೆ.

ಭೀಷ್ಮರು ಅದಕ್ಕುತ್ತರವಾಗಿ "ಎಲೈ ಧರ್ಮರಾಜನೇ, ಧರ್ಮಾಚಾರಗಳಲ್ಲಿ ನಿಷ್ಠೆಯುಳ್ಳ ಲಿಂಗಿ ಬ್ರಾಹ್ಮಣರೇ ಇರಬಹುದು. ಅಲಿಂಗಿ (ಲಿಂಗವಿಲ್ಲದ) ಬ್ರಾಹ್ಮಣರೇ ಇರಬಹುದು. ಅವರಿಬ್ಬರೂ ತಪಸ್ವಿಗಳೇ ಆಗಿರುತ್ತಾರೆ. ಆದ್ದರಿಂದ ಆ ಇಬ್ಬರಿಗೂ ದಾನ ಮಾಡಬಹುದು" ಎಂದು ಹೇಳುವರು. ಬ್ರಾಹ್ಮಣನು ಯಜ್ಞೋಪವೀತ (ಜನಿವಾರ) ಹಾಕಿಕೊಳ್ಳುವನು. ಆದರೆ ಲಿಂಗಿ ಬ್ರಾಹ್ಮಣನು ಅಂದರೆ ವೀರಶೈವನು ಲಿಂಗಯಜ್ಞೋಪವೀತ (ಲಿಂಗ ಸಹಿತದ ಜನಿವಾರ) ಹಾಕಿಕೊಂಡಿರುತ್ತಾನೆ. ಇಬ್ಬರೂ ದೀಕ್ಷಾಬದ್ಧರೇ.

ಮಹಾಭಾರತದಲ್ಲಿ ಅಷ್ಟೇ ಅಲ್ಲ. ರಾಮಾಯಣದಲ್ಲೂ ಒಂದು ಸಂದರ್ಭ ಹೀಗೆ ಬಂದಿರುವುದುಂಟು. ಭಕ್ತ ಮಾರುತಿ (ಆಂಜನೇಯ) ಶ್ರೀ ರುದ್ರದೇವನ ದರ್ಶನಾನುಗ್ರಹಕ್ಕಾಗಿ ಶಿವನ ವಾಹನನಾದಂತಹ ಶ್ರೀ ನಂದೀಶ್ವರನ ಮಾರ್ಗದರ್ಶನದಂತೆ ಶ್ರೀ ವೀರಭದ್ರದೇವನಿಂದ ಲಿಂಗದೀಕ್ಷೆ ಪಡೆದನೆಂಬುದಾಗಿ ಸ್ಕಂದಪುರಾಣಗಳಲ್ಲಿ ಉಲ್ಲೇಖವಿದೆ. ಆದರೆ ಈ ಪ್ರಸಂಗವನ್ನು ವೀರಭದ್ರದೇವರ ಒಡಪು ಪುಸ್ತಕಗಳಲ್ಲಿ ಈ ಕೆಳಗಿನಂತೆ ವರ್ಣಿಸಲಾಗಿದೆ.

ಶಿವಪಾರ್ವತಿಯರು ಕೈಲಾಸದಲ್ಲಿ ಕುಳಿತಿರಲೊಮ್ಮೆ ನಾರದರು ಅಲ್ಲಿಗೆ ಬಂದು ಶಿವನಿಗೆ ಮಾತ್ರ ನಮಸ್ಕರಿಸಿ ಕುಳಿತುಕೊಳ್ಳುತ್ತಾರೆ. ಆಗ ಪಾರ್ವತಿದೇವಿಯು "ಎಲೈ ನಾರದನೇ, ಶಿವನಿಗೊಬ್ಬನಿಗೆ ವಂದಿಸಿ ನನಗೆ ವಂದಿಸದೇ ಕುಳಿತ ಕಾರಣವೇನು?" ಎಂದು ಕೇಳುವಳು. ಅದಕ್ಕೆ ನಾರದರು ಎದ್ದುನಿಂತು ಪಾರ್ವತಿಗೂ ವಂದಿಸಿ "ಅಮ್ಮಾ ತಪ್ಪಾಯಿತು ನನ್ನನ್ನು

ಕ್ಷಮಿಸಿಬಿಡು" ಎಂದು ಕೇಳಿಕೊಳ್ಳುವನು. ಆಗ ಪಾರ್ವತಿದೇವಿಯು, "ಎಲೈ ನಾರದನೇ ನೀ ಮಾಡಿದ ತಪ್ಪಿಗೆ ಶಿಕ್ಷೆ ಆಗಲೇಬೇಕಾಗಿದೆ. ಆದ್ದರಿಂದ ನೀನು ಭೂಲೋಕದಲ್ಲಿ 'ಹರ ಮುನಿದರೆ ಗುರು ಕಾಯ್ವನು, ಗುರು ಮುನಿದರೆ ಹರ ಕಾಯನು' ಎಂಬುದನ್ನು ಸಾದರಪಡಿಸಿ ಬರಬೇಕು" ಎಂದು ಹೇಳುವಳು. ನಾರದನು ಆದಿಶಕ್ತಿಯ ಮಾತಿಗೆ ಒಪ್ಪಿ ಭೂಲೋಕದತ್ತ ಪ್ರಯಾಣ ಬೆಳೆಸುವನು.

ಅಯೋಧ್ಯೆಯಲ್ಲಿ ಶ್ರೀ ರಾಮಚಂದ್ರ ಸೀತೆಯನ್ನು ಗೆದ್ದು ತಂದ ಸಂತೋಷಕ್ಕಾಗಿ ಒಮ್ಮೆ ಆನಂದಕೂಟವನ್ನೇರ್ಪಡಿಸಿದ್ದನು. ಅಲ್ಲಿ ತನ್ನ ಭಕ್ತರಾದ ಕಪಿವೀರರಿಗೆ ಬೇಡಿದ್ದನ್ನೆಲ್ಲ ಕೊಟ್ಟು ಅವರ ಇಷ್ಟಾರ್ಥಗಳನ್ನು ಈಡೇರಿಸಿ ಕಳಿಸಿಕೊಡುತ್ತಿದ್ದನು. ಆ ಸಮಾರಂಭಕ್ಕೆ ಮಾರುತಿಯೂ ಬರುತ್ತಿರುವಾಗ ನಾರದರು ಆತನಿಗೆ ಎದುರಾದರು. ಆಗ ನಾರದರು, "ಮಾರುತಿ ಅತಿ ಶೀಘ್ರವಾಗಿ ಹೊರಟಿರುವುದೆಲ್ಲಿಗೆ?" ಎಂದು ಪ್ರಶ್ನಿಸಿದರು.

ಆಗ ಮಾರುತಿ, "ಶ್ರೀ ರಾಮಚಂದ್ರನಿಂದು ಸಂತೋಷಕೂಟವೊಂದನ್ನು ಏರ್ಪಡಿಸಿದ್ದಾನೆ. ಅಲ್ಲಿ ಬೇಡಿದವರಿಗೆ ಬೇಡಿದ್ದನ್ನು ಕೊಡುತ್ತಿರುವನು. ಆದ್ದರಿಂದ ನಾನಲ್ಲಿಗೆ ಹೋಗುತ್ತಿದ್ದೇನೆ" ಎಂದು ಹೇಳಿದ. ಮತ್ತೆ ನಾರದರು "ಹಾಗಾದರೆ ನೀನು ನಿನ್ನ ರಾಮನಲ್ಲಿ ಏನನ್ನು ಕೇಳುವೆ?" ಎಂದು ಕೇಳಿದರು. ಅದಕ್ಕುತ್ತರವಾಗಿ ಮಾರುತಿಯು "ನಾನೇನನ್ನು ಬೇಡುವುದಿಲ್ಲ, ಬೇಡಲಾರೆ. ಸದಾ ಆತನ ಕೃಪಾಕಟಾಕ್ಷ ನನ್ನ ಮೇಲಿದ್ದರೆ ಸಾಕು" ಎಂದು ಹೇಳಿ ಸುಮ್ಮನಾದ. ನಾರದರು ನಕ್ಕು, "ನೀನೆಂತಹ ಹುಚ್ಚ ಮಾರುತಿ, ನೀನು ಭೌತಿಕ ಸಂಪತ್ತಿಗೆ ಆಸೆಪಡುವವನಲ್ಲ ಎಂಬುದೂ ನನಗೆ ಗೊತ್ತು. ಆದರೆ ಬೇಡುವುದೊಂದಿದೆ. ಅದು ನಿತ್ಯಾನಂದದ ಮುಕ್ತಿಮಾರ್ಗ. ಇದನ್ನು ನೀನು ಸರ್ವತಾ ನಿನ್ನ ರಾಮಚಂದ್ರನಲ್ಲಿ ಕೇಳಲೇಬೇಕು. ಕೇಳಿಕೋ, ಹಾಗೆ ಕೇಳುತ್ತೇನೆಂದು ಸಹ ನನಗೆ ವಚನ ಕೊಡು" ಎಂದು ಕೈ ಮುಂದೆ ಚಾಚಿದನು. ಮಾರುತಿ ನಾರದರ ಮಾತಿಗೊಪ್ಪಿ ಭಾಷೆ ಕೊಟ್ಟು ಮುನ್ನಡೆದನು. ಮಾರುತಿ-ಶ್ರೀರಾಮಚಂದ್ರನಲ್ಲಿಗೆ ಬಂದು ನಮಸ್ಕರಿಸುವನು.

ಶ್ರೀ ರಾಮಚಂದ್ರನು "ಭಕ್ತಾ ಮಾರುತಿ, ನಿನಗೇನು ಬೇಕು ಕೇಳಿಕೋ" ಎಂದು ಪ್ರಸನ್ನಭಾವದಿಂದ ಹೇಳುವನು.

ಮಾರುತಿಯು, "ಪ್ರಭೂ ನನಗಾವ ಭೌತಿಕ ಸಂಪತ್ತು ಬೇಕಾಗಿಲ್ಲ. ಅದರ ಅವಶ್ಯಕತೆ ನನಗಿಲ್ಲ. ಆದರೆ ನನಗೆ ಬೇಕಾಗಿರುವುದು ನಿತ್ಯಾನಂದದ ಮುಕ್ತಿಮಾರ್ಗ. ಅದನ್ನು ನೀನು ಅನುಗ್ರಹಿಸಿದರೆ ಸಾಕು" ಎಂದು ಹೇಳಿ ಮೌನವಹಿಸುವನು.

ಶ್ರೀ ರಾಮಚಂದ್ರನು "ಭಕ್ತಾ ಮಾರುತಿ, ಈಗ ನಾನು ನಿರುತ್ವದಲ್ಲಿರುವುದರಿಂದ (ಅಂದರೆ ಕ್ಷತ್ರಿಯನಾಗಿ ಜನಿಸಿರುವ ಕಾರಣ ಗುರುವೆನಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಅರ್ಥವು) ಈಗದು ನನ್ನಿಂದ ಸಾಧ್ಯವಿಲ್ಲ. ಅದನ್ನು ನೀನು ನಮ್ಮ ಕುಲಗುರುಗಳಾದಂತಹ ವಶಿಷ್ಠರಲ್ಲಿಯೇ ಪಡೆಯುವುದು ಸೂಕ್ತ. ಆದ್ದರಿಂದ ನೀನೀಗ ಅವರಲ್ಲಿಗೇ ಹೋಗಿ ಕೇಳು" ಎಂದು ಹೇಳಿ ಕಳುಹಿಸಿದ.

ಮಾರುತಿ ವಶಿಷ್ಠರಲ್ಲಿಗೆ ಬಂದು ನಮಸ್ಕರಿಸಿ ತನಗೆ ದೀಕ್ಷೆಯನ್ನು ಅನುಗ್ರಹಿಸುವಂತೆ ಕೇಳಿದ್ದಕ್ಕೆ ವಶಿಷ್ಠರು, "ಎಲೈ ವಾಯುಪುತ್ರನೇ ನಿನಗೆ ನಾನು ದೀಕ್ಷೆಯನ್ನು ಅನುಗ್ರಹಿಸಬಲ್ಲೆ. ಆದರೆ ನಾನು ನಿನಗೆ ನನಗಿಂತಲೂ ಶ್ರೇಷ್ಠರೊಬ್ಬರನ್ನು ತಿಳಿಸುವೆ. ಆತ ಬೇರಾರೂ ಅಲ್ಲ ಶ್ರೀ ವೀರಭದ್ರದೇವನು. ನೀನು ಆತನನ್ನು ಗುರುವನ್ನಾಗಿ ಪಡೆಯಬೇಕೆಂದರೆ ತಕ್ಷಣ ನೀನು ಪಂಪಾಕ್ಷೇತ್ರಕ್ಕೆ ಹೋಗಿ, ತುಂಗಭದ್ರೆಯಲ್ಲಿ ಸ್ನಾನ ಮಾಡಿ ನಾರುಮಡಿಯುಟ್ಟು, ಹೇಮಕೂಟದಲ್ಲಿ ಕುಳಿತು ತಪಸ್ಸನ್ನಾಚರಿಸು. ಆತನೊಲಿದು ಬಂದು ನಂತರ ನಿನಗೆ ದೀಕ್ಷೆ ಕೊಡುವನು" ಎಂದು ಹೇಳಿ ಕಳಿಸಿದರು. ಮಾರುತಿಯಾದರೂ ವಶಿಷ್ಠರು ಹೇಳಿದಂತೆ ಬಹಳಷ್ಟು ದಿನಗಳ ಪರ್ಯಂತರ ಘೋರ ತಪಸ್ಸನ್ನಾಚರಿಸಿದ. ಭಕ್ತ ಮಾರುತಿಯ ತಪಸ್ಸಿಗೆ ಒಲಿದು ಶ್ರೀ ವೀರಭದ್ರದೇವರು ಮಾರುತಿಯ ಮುಂದೆ ಪ್ರತ್ಯಕ್ಷನಾಗಿ, "ಭಕ್ತಾ ಮಾರುತಿ ನಿನ್ನ ತಪಸ್ಸಿಗೆ ಮೆಚ್ಚಿ ಬಂದಿರುವೆನು. ನಿನ್ನ ಇಚ್ಛೆ ಏನೆಂಬುದನ್ನು ತಿಳಿಪಡಿಸು, ಅನುಗ್ರಹಿಸುವೆನು" ಎಂದು ಹೇಳಿ ಇಷ್ಟಲಿಂಗ ದೀಕ್ಷೆಯನ್ನು ಮಾರುತಿಗೆ ಅನುಗ್ರಹಿಸಿ ನಂತರ ಅದರ ಆಚರಣೆಯ ಬಗ್ಗೆ ಉಪದೇಶ ಕೊಡುತ್ತಾನೆ. "ಎಲೈ ಮಾರುತಿ, ನಾನು ಕೊಟ್ಟಿರುವಂತಹ ಈ ಲಿಂಗವನ್ನು ಸದಾ ನಿನ್ನ ಮೈಮೇಲೆ ಧರಿಸಿಕೊಂಡಿರಬೇಕು. ಕ್ಷಣಮಾತ್ರವೂ ಈ ಲಿಂಗವನ್ನು ಬಿಟ್ಟು ಇರಬಾರದು. (ಕೆಲವರಂತೂ ಕಟ್ಟೆ ಗೂಟಗಳಲ್ಲಿಟ್ಟಿರುತ್ತಾರೆ. ಅಂಥವರಿಗೆ ಎಚ್ಚರಿಕೆಯ ಸಂದೇಶವಿದು) ಒಂದೇ ಒಂದು ಕ್ಷಣ ಬಿಟ್ಟಿದ್ದುದಾರೆ ನಿನಗೆ ನರಕ ತಪ್ಪದು. ಶಿರೋವ್ರತಿಗಳೆನಿಸಿಕೊಂಡವರು ಮೊದಲು ಇದನ್ನು ಕಟ್ಟುನಿಟ್ಟಾಗಿ ಪರಿಪಾಲಿಸಬೇಕು. ನಂತರ ಪ್ರತಿದಿನವೂ ತ್ರೈಕಾಲ (ಮೂರು ಹೊತ್ತು) ಪೂಜೆಯನ್ನಾಚರಿಸಿಕೊಂಡು ಬರಬೇಕು. ಆಗ ನೀನು ಶಾಂಭವೀ ಮುದ್ರೆಯಿಂದ ಶಿವಯೋಗ ಮಾಡಬೇಕು. ಶಿವಯೋಗವೆಂದರೆ ದ್ವೈತಭಾವದಿಂದ ಅದ್ವೈತ ಸ್ಥಿತಿಗೆ ತಲುಪುವುದು. (ಈ ಶಿವಯೋಗದ ಸಂಪೂರ್ಣ ವಿವರವನ್ನು ಮುಂದೆ ಬರುವ 'ಶಿವಯೋಗ' ಎಂಬ ಅಂಕಣದಲ್ಲಿ ವಿಸ್ತರಿಸುತ್ತೇವೆ.) ಆ ಸಂದರ್ಭದಲ್ಲಿ ನಾನು ಬೋಧಿಸಿರುವಂತಹ ಪ್ರಣವ ಪಂಚಾಕ್ಷರಿ ಮಹಾಮಂತ್ರವು ಮನಸ್ಸಿನಲ್ಲಿ ನುಡಿಯುತ್ತಿರಬೇಕು. ಹೀಗೆ ಪ್ರತಿದಿನ ನಡೆಯುತ್ತಿರಬೇಕು. ನಿನ್ನ ಶ್ರದ್ಧೆ ಮತ್ತು ಭಕ್ತಿ ಬಲಿತಾಗ ನಿನ್ನಾತ್ಮದಲ್ಲಿ ನೀನು ನಿಂತು ಆತ್ಮಾನಂದ ಅನುಭವಿಸುವೆ. ಇದೇ ಜೀವನ್ಮುಕ್ತಿಯ ಮಾರ್ಗವು. ಹೀಗೆ ಗುರುವಿನ ಮಾತನ್ನು ಚಾಚೂತಪ್ಪದೆ ನಡೆಸಿಕೊಂಡು ಹೋಗುವುದೇ ಶಿರೋವ್ರತವೆನಿಸಿಕೊಂಡಿದೆ" ಹೀಗೆ ವೀರಭದ್ರದೇವರು ಮಾರುತಿಗೆ ಹೇಳಿದ. ಮುಂದೆ ಮಾರುತಿಯು ಸದ್ಗುರುವಿನ ಜ್ಞಾನಾನುಸಾರವಾಗಿ ಇಷ್ಟಲಿಂಗವನ್ನು ತ್ರಿಕಾಲವೂ ಪೂಜಿಸುತ್ತಾ ಶಿವಯೋಗವನ್ನು ಮಾಡುತ್ತ ನಡೆದಿದ್ದ.

ಒಂದು ದಿನ ಗೌತಮಮುನಿ ತನ್ನ ಇಷ್ಟಲಿಂಗವನ್ನು ಕಳೆದುಕೊಂಡಿದ್ದ. ಅದೆಷ್ಟು ಹುಡುಕಿದರೂ ಸಿಕ್ಕಿರಲಿಲ್ಲ. ಅದಕ್ಕಾಗಿ ಗಂಡುಗತ್ತರಿಗೆ ತನ್ನ ಕತ್ತು ಕೊಟ್ಟು ಪ್ರಾಣ ಕಳೆದುಕೊಳ್ಳಲು ಸಿದ್ಧನಾಗಿದ್ದ. ತತ್‌ಕ್ಷಣದಲ್ಲಿ ಪರಮಾತ್ಮನೇ ಪ್ರತ್ಯಕ್ಷನಾಗಿ ಪುನಃ ಗೌತಮ ಮಹರ್ಷಿಗೆ ಇಷ್ಟಲಿಂಗವನ್ನು ದಯಪಾಲಿಸಿದ. ಆ ಸಂದರ್ಭದಲ್ಲಿ ಮಾರುತಿಯೂ ಸಹ ಅಲ್ಲಿಗೆ ಬಂದಿದ್ದ. ಇದನ್ನು ಕಂಡ ಮಾರುತಿಯು ಅತ್ಯಾನಂದದಿಂದ ಶಿವಪಾರ್ವತಿಯರ ಮುಂದೆ ಗಾಯನ ಮಾಡಿದ. ಶಿವನು ಆನಂದಭರಿತನಾಗಿ ಮಾರತಿಗೆ ಹೇಳಿದ. "ಎಲೈ ವಾಯುಪುತ್ರನೇ, ಹೀಗೆಯೇ ಗಾಯನ

ಮಾಡುತ್ತ ನಮ್ಮಿಬ್ಬರನ್ನು ಕೈಲಾಸಕ್ಕೆ ಕರೆದುಕೊಂಡು ಹೋಗು" ಎಂತೆನ್ನಲು. ಕೂಡಲೆ ಮಾರುತಿಯು ಅವರಿಬ್ಬರನ್ನೂ ತನ್ನ ಹೆಗಲ ಮೇಲೆ ಕೂಡಿಸಿಕೊಂಡು ಕೈಲಾಸದ ಮಾರ್ಗವಾಗಿ ಹೊರಟ. ಆಗ ಲಿಂಗಪೂಜೆಗೆ ವೇಳೆಯಾಗಿತ್ತು. ಆ ಕೂಡಲೇ ಶಿವಪಾರ್ವತಿಯರನ್ನು ಕೆಳಗಿಳಿಸಿ, "ಹೇ ಸ್ವಾಮಿ ದಯಾನಿಧಿ, ಈಗ ನನ್ನ ಗುರುವಿನಾಜ್ಞೆಯಂತೆ ಇಷ್ಟಲಿಂಗಪೂಜೆಯ ಸಮಯವಾಗಿದೆ. ಅದನ್ನು ನಾನು ತಪ್ಪಿಸುವಂತಿಲ್ಲ. ಬೇಗ ಪೂಜೆ ಮುಗಿಸಿಕೊಂಡು ಬರುತ್ತೇನೆ. ಬರುವವರೆಗೂ ಇಲ್ಲಿಯೇ ಇರಿ" ಎಂದು ಹೇಳಿದ. ಅದಕ್ಕೆ ಶಿವನು, "ಹೇ ಮಾರುತಿ, ನೀನು ಪೂಜೆ ಮಾಡುವ ಆ ಲಿಂಗವೇ ನಾನಾಗಿರುವೆ, ಅಲ್ಲದೆ ಆ ನಿನ್ನ ಗುರುವಿನ ತಂದೆಯೂ ಸಹ ನಾನಾಗಿರುವೆ. ಹೀಗಿರಲು ಆ ಪೂಜೆ ಅನಾವಶ್ಯಕ. ಬಾ ಹೋಗೋಣ" ಎಂದು ಹೇಳಲು, ಮಾರುತಿಯು "ಇಲ್ಲ ನಾನು ಗುರುವಿನಾಜ್ಞೆ ಮೀರುವುದಿಲ್ಲ. ಆದ್ದರಿಂದ ನಾನು ಲಿಂಗಪೂಜೆಗೆ ಹೋಗುತ್ತೇನೆ" ಎಂದು ಹೇಳಿ ಲಿಂಗಪೂಜೆಗೆ ಹೊರಟುಹೋದ.

ಇದರಿಂದ ಕೋಪಗೊಂಡ ಪರಶಿವನು ಮಾರುತಿಯ ಇಷ್ಟಲಿಂಗವನ್ನು ಅವನಿಗೆ ಗೊತ್ತಾಗದಂತೆ ತನ್ನಲ್ಲಿಗೆ ಸೆಳೆದುಕೊಂಡ. ಮಾರುತಿಯು ತುಂಗಭದ್ರೆಯಲ್ಲಿ ಸ್ನಾನಮಾಡಿ ನಾರುಮುಡಿಯುಟ್ಟು, ಹೇಮಕೂಟದಲ್ಲಿ ಲಿಂಗಪೂಜೆಗೆ ಕುಳಿತುಕೊಂಡು, ಕರಡಿಗೆ ಬಿಚ್ಚಿನೋಡಿದ. ಅದರೊಳಗೆ ಇಷ್ಟಲಿಂಗವಿರಲಿಲ್ಲ. ಕೂಡಲೇ ತುಂಗಭದ್ರೆಯ ನೀರನ್ನೆಲ್ಲ ಚೆಲ್ಲಾಪಿಲ್ಲಿಯಾಗಿಸಿದ. ಹೇಮಕೂಟವನ್ನು ಸಹ ಕುಟ್ಟಿ ಕುಟ್ಟಿ ನೋಡಿದ. ಲಿಂಗ ಸಿಗಲಿಲ್ಲ. ನಿರುಪಯನಾಗಿ ತನ್ನ ಗುರುವಾದ ಶ್ರೀ ವೀರಭದ್ರನನ್ನು ಧ್ಯಾನಿಸಿದ. ಘೋರ ತಪಸ್ಸನ್ನೂ ಮಾಡಿದ. ಕೊನೆಗೆ ವೀರಭದ್ರದೇವನು ಭಕ್ತ ಮಾರುತಿಯ ಮುಂದೆ ಬಂದು ನಿಂತು, "ಹೇ ಭಕ್ತನಾದ ಮಾರುತಿಯೇ ಪುನಃ ನನ್ನನ್ನು ನೆನೆದ ಕಾರಣವೇನು?" ಎಂದು ಕೇಳಿದಾಗ, "ಪ್ರಭು ನೀನು ಅನುಗ್ರಹಿಸಿದ ಇಷ್ಟಲಿಂಗವು ಕಾಣಿಸುತ್ತಿಲ್ಲ. ದಯಮಾಡಿ ಪುನಃ ಅದನ್ನು ನನಗೆ ಸಿಗುವಂತೆ ಮಾಡಿ ನನ್ನನ್ನುದ್ಧರಿಸು" ಎಂದು ಪ್ರಾರ್ಥಿಸಿಕೊಂಡ.

ವೀರಭದ್ರನಾಗ, "ಭಕ್ತಾ ನೀನಳುಕಬೇಡ, ಇದೋ ನಿನ್ನ ಆ ಲಿಂಗವನ್ನು ಮುಕ್ಕಾಲು ಮೂರು ಘಳಿಗೆಯಲ್ಲಿ ತಂದುಕೊಡುತ್ತೇನೆ" ಎಂದು ಶಪಥ ಮಾಡಿ ವೀರಭದ್ರನು ತನ್ನ ಅಗ್ನಿ ನೇತ್ರವನ್ನು ಕರೆದು, ಆ ಲಿಂಗವನ್ನು ಹುಡುಕಿ ತರಲು ಹೇಳಿ ಕಳುಹಿಸಿದ. ಆ ಉರಿನೇತ್ರದ ಜ್ವಾಲೆಗಳು ನೇರ ಶಿವನ ಕಡೆಗೆ ಹೋಗ ಹತ್ತಿದವು. ಇದನ್ನು ಕಂಡ ಶಿವನು ಮತ್ತಷ್ಟು ಕೋಪ ತಾಳಿ, ತಾನೂ ತನ್ನ ಉರಿನೇತ್ರವನ್ನು ತೆರೆದು, ಅದಕ್ಕೆ ಪ್ರತಿಯಾಗಿ ಬಿಡಲೆತ್ನಿಸಿದ. ಕೂಡಲೇ ಜಗನ್ಮಾತೆಯಾದ ಆದಿಶಕ್ತಿಯು ಶಿವನನ್ನು ತಡೆದು, "ಹೇ ಶಂಕರ, ಕರುಣಾಕರ, ನೀನೇನು ಮಾಡುತ್ತಿರುವೆ. ಬ್ರಹ್ಮಾಂಡವನ್ನೇ ಸುಡಲು ಹೊರಟಿರುವೆಯಲ್ಲಾ? ಇದು ನಿನಗೆ ಸರಿ ಎನಿಸುವುದೇ? ಈ ಹಿಂದೊಮ್ಮೆ ನೀನು ನನಗೆ ಹೇಳಿರಲಿಲ್ಲವೇ? "ನಗುರೋರಧಿಕಂ" ಎಂದು. ಅದನ್ನು ಮರೆತು ತ್ರೈಜಗಗಳನ್ನೇ ಭಸ್ಮ ಮಾಡಲು ಹೊರಟಿರುವೆಯಲ್ಲಾ. ಅವು ನಾಶವಾಗಿ ಹೋದ ಮೇಲೆ ನಾನು ನೀನು ಇದ್ದಾದರೂ ಪ್ರಯೋಜನವೇನು? ದಯಮಾಡಿ ಗುರುವಾಕ್ಯ ಪರಿಪಾಲಕನಾದಂತಹ ಮಾರುತಿಯ ಭಕ್ತಿಗೆ ಮೆಚ್ಚಿ ಅವನ ಇಷ್ಟಲಿಂಗವನ್ನು ಕಳಿಸಿಬಿಡು" ಎಂದು ಪಾರ್ವತಿದೇವಿಯು ಹೇಳಿದ ನಂತರ ಪರಶಿವಮೂರ್ತಿಯು ಶಾಂತನಾಗಿ ವೀರಭದ್ರನ

ಉರಿನೇತ್ರದೊಂದಿಗೆ ಆ ಇಷ್ಟಲಿಂಗವನ್ನು ಕಳಿಸಿಕೊಟ್ಟನು. ಆಗ ವೀರಭದ್ರನು ಬಿಟ್ಟಂತಹ ಉರಿನೇತ್ರವು ಆ ಲಿಂಗದೊಂದಿಗೆ ಹಿಂದೆ ಹಿಂದೆ ಸರಿಯುತ್ತಾ ವೀರಭದ್ರನಲ್ಲಿಗೆ ಬಂದಿತು. ಆಗ ವೀರಭದ್ರದೇವನು ಆ ಲಿಂಗವನ್ನು ತೆಗೆದುಕೊಂಡು ಪುನ: ಮಾರುತಿಯ ಕರದಲ್ಲಿರಿಸಿದನು. ಭಕ್ತ ಮಾರುತಿಯು ತನ್ನ ಉತ್ತಮಾಂಗ (ಶಿರ)ದಲ್ಲಿ ಧರಿಸಿಕೊಂಡನು.

ಆ ಕೂಡಲೇ ಶಿವ ಪಾರ್ವತಿಯರು ವೀರಭದ್ರ ಮತ್ತು ಮಾರುತಿ ಇರುವಲ್ಲಿಗೆ ಬಂದು! ಶಿವ ಕೇಳಿದ, "ಹೇ ಮಾರುತಿ, ಇದೇನು ನಮ್ಮಿಬ್ಬರನ್ನು ಅಲ್ಲಿಯೇ ಬಿಟ್ಟು ಬಂದು ಇಲ್ಲಿರುವೆಯಲ್ಲಾ? ನಮ್ಮ ನೆನಪಾಗಲಿಲ್ಲವೇ ನಿನಗೆ?" ಎಂದು ಪ್ರಶ್ನಿಸಿದಾಗ ಮಾರುತಿ ನಡೆದುದನ್ನೆಲ್ಲ ಸವಿಸ್ತಾರವಾಗಿ ವಿವರಿಸಿದ. ಆಗ ಮತ್ತೆ ಶಿವ ಕೇಳಿದ, "ಎಲ್ಲಿದೆಯಪ್ಪಾ ಆ ನಿನ್ನ ಇಷ್ಟಲಿಂಗ! ಅದರ ಮುಖವನ್ನಾದರೂ ನನಗೆ ಸ್ವಲ್ಪ ತೋರಿಸು" ಎಂದು.

ಮಾರುತಿಯು "ಇಲ್ಲ ತೋರಿಸುವುದಿಲ್ಲ. ಅದು ನನ್ನ ಗುರುವಿನ ಆಜ್ಞೆಯು ಸಹ. ಆತನ ಅಪ್ಪಣೆಯಾಗದ ಹೊರತಾಗಿ ಆ ಲಿಂಗವನ್ನು ಯಾರಿಗೂ ತೋರಿಸುವುದಿಲ್ಲ" ಎಂದು ಕಡ್ಡಿ ತುಂಡಾಗಿಸುವಂತೆ ಹೇಳಿಬಿಟ್ಟ.

ಶಿವನು ವೀರಭದ್ರನಿಗೆ ತೋರಿಸಲು ಹೇಳು ಎಂಬಂತೆ ಕಣ್ಣ ಸನ್ನೆ ಮಾಡಿ ತೋರಿಸಿದ. ಆಗ ವೀರಭದ್ರನು ಮಾರುತಿಗೆ, "ಭಕ್ತಾ ಆಂಜನೇಯಾ ನಿನ್ನ ಗುರುಭಕ್ತಿ, ಲಿಂಗಭಕ್ತಿ ಅಪಾರವಾದದ್ದು. ಅದನ್ನಿಂದು ಸಾಬೀತುಪಡಿಸುವ ಕಾಲ ಹತ್ತಿರವಾಗಿದೆ. ಯಾಕೆಂದರೆ ಆ ನಿನ್ನ ಅಚಲವಾದ ಭಕ್ತಿಗೆ ನಿನ್ನ ಒಂದೊಂದು ರೋಮದಲ್ಲೂ ಒಂದೊಂದು ಕೋಟಿ ಲಿಂಗಗಳಿವೆ. ಅದು ಜಗತ್ತಿಗೆ ಗೊತ್ತಾಗಬೇಕಿದೆ. ಈಗ ನಿನ್ನ ಮೈಮೇಲಿನ ಒಂದೇ ಒಂದು ರೋಮವನ್ನು ಕಿತ್ತು ಈ ಭುವಿಯ ಮೇಲೆ ಹಾಕು. ಅಂತಹ ಕೋಟಿ ಇಷ್ಟಲಿಂಗಗಳು ಇಲ್ಲಿ ಉದ್ಭವವಾಗುವುವು" ಎಂದು ಹೇಳಿದ.

ತಕ್ಷಣ ಮಾರುತಿಯು ಶ್ರೀ ಗುರು ವೀರಭದ್ರನ ಪಾದಕ್ಕೆರಗಿ ತನ್ನ ಮೈಮೇಲಿನ ಒಂದು ರೋಮವನ್ನು ಕಿತ್ತು ಭುವಿಯ ಮೇಲೆ ಹಾಕಿದ. ಆ ಕೂಡಲೇ ಕೋಟಿ ಲಿಂಗಗಳು ಉದ್ಭವವಾದವು. ಇದೇ ಶಿರೋವ್ರತದ ಮಹಿಮೆ. ಇಂತಹ ಮಹಾಮಹಿಮರನ್ನು ಕಂಡೇ ಪ್ರಪ್ರಥಮ ಸೂಳ್ನುಡಿಕಾರ ದಾಸಿಮಯ್ಯನವರು ತಮ್ಮ ವಚನದಲ್ಲಿ ಹೀಗೆ ಹೇಳಿರುವುದು.

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ
ಆ ತೃಣವ ಕೆಂಡ ನುಂಗಿದಂತೆ!
ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ
ಆತನ ಸರ್ವಾಂಗವೆಲ್ಲಾ ಲಿಂಗವು ಕಾಣಾ ರಾಮನಾಥ ॥

ಇದನ್ನಲ್ಲವೇ "ಹರ ಮುನಿದರೆ ಗುರು ಕಾಯ್ವನು, ಗುರು ಮುನಿದರೆ ಹರ ಕಾಯನು" ಎಂದು ಆದಿಶಕ್ತಿ ನಾರದರಿಗೆ ಸಾದರಪಡಿಸಲು ಹೇಳಿಕಳುಹಿಸಿದ್ದು.

ಇಂತಹ ಅದ್ಭುತ ಭಕ್ತಿಗೆ ವೀರಶೈವ ಸಿದ್ಧಾಂತದಲ್ಲಿ 'ಅಂಗ ಸತಿ, ಲಿಂಗ ಪತಿ'

ಎಂದು ಕರೆದಿರುವರು. ಮತ್ತೆ ಹೀಗೂ ಹೇಳುವರು. 'ಶರಣ ಸತಿ, ಲಿಂಗ ಪತಿ' ಎಂದು. ಅಂದರೆ ಲಿಂಗಾಂಗ ಸಾಮರಸ್ಯ. ಪತಿಯಾದ ಲಿಂಗದೊಡನೆ ಸತಿಯಾದ ಶರಣನು ಸಮರಸ (ಐಕ್ಯ) ಹೊಂದುವುದು. ಇದನ್ನು ಚೆನ್ನ ಬಸವಣ್ಣ ಹೀಗೆ ಹೇಳುತ್ತಾನೆ. "ಬಯಸಿ ಬಂದುದು ಅಂಗಭೋಗ, ಬಯಸದೆ ಬಂದದು ಲಿಂಗಭೋಗ. ಅಂಗಭೋಗವನರ್ಪಿತ ಲಿಂಗಭೋಗ ಪ್ರಸಾದವಯ್ಯಾ..." ಈ ಲಿಂಗಾಂಗ ಸಾಮರಸ್ಯದ ವರ್ಣಣೆಯನ್ನು ಅಕ್ಕಮ್ಮ ಹೇಳುತ್ತಾಳೆ,

ಅಂಗವ ಲಿಂಗ ಮುಖಕ್ಕೆ ಅರ್ಪಿಸಿ, ಅಂಗ ಅನಂಗವಾಯತ್ತು.
ಮನವ ಅರಿವಿಂಗರ್ಪಿಸಿ, ಮನ ಲಯವಾಯಿತ್ತು.
ಭವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು.
ಅಂಗ ಮನ ಭವಗಳಿಂದ ಕಾರಣ, ಕಾಯ ಅಕಾಯವಾಯಿತ್ತು.
ನನ್ನ ಆ ಕಾಯದ ಸುಖವ ಲಿಂಗ ಭೋಗಿಸುವನಾಗಿ
ಶರಣ ಸತಿ ಲಿಂಗ ಪತಿ ಆದೆನು ಇದು ಕಾರಣ
ಚೆನ್ನಮಲ್ಲಿಕಾರ್ಜುನಯ್ಯನೆಂಬ ಗಂಡನ ಒಳಹೊಕ್ಕು ಬೆರೆಸಿದೆನು ॥

'ಶರಣ ಸತಿ, ಲಿಂಗ ಪತಿ' ಸಿದ್ಧಾಂತವನ್ನಳವಡಿಸಿಕೊಂಡ ವೈರಾಗ್ಯನಿಧಿ ಅಕ್ಕಮ್ಮ ಶಿವಮೊಗ್ಗ ಜಿಲ್ಲೆಯ 'ಉಡುತಡಿ ಎಂಬ ಹಳ್ಳಿಯಲ್ಲಿ ಹುಟ್ಟಿದ್ದಳು. ತಂದೆ ನಿರ್ಮಲಶೆಟ್ಟಿ, ತಾಯಿ ಸುಮತಿ. ತಂದೆತಾಯಿಯರೂ ಸಹ ಶಿವಭಕ್ತಸಂಪನ್ನರು. ಅಕ್ಕಮಹಾದೇವಿ ಅಸಾಧಾರಣ ಸೌಂದರ್ಯವತಿ. ಆಕೆಯ ಸೌಂದರ್ಯಕ್ಕೆ ಆ ನಾಡಿನ ಅರಸ ಕೌಶಿಕ ಮಾರುಹೋದ. ಅವಳು ತನ್ನ ಜೀವನ ಸಂಗಾತಿ (ಮಡದಿ) ಆಗದಿದ್ದರೆ ತನ್ನ ಜೀವನವೇ ಶೂನ್ಯವೆಂದು ಭಾವಿಸಿ ಅವಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ನಿರ್ಮಲ ಶೆಟ್ಟಿಗೆ ಒತ್ತಾಯ ಹೇರಿದ. ತಂದೆಯ ಮನೋವೇದನೆಯನ್ನು ಮನವರಿಕೆ ಮಾಡಿಕೊಂಡ ಮಹಾದೇವಿ ಕೆಲವು ಷರತ್ತುಗಳೊಂದಿಗೆ ಮದುವೆ ಆಗಲು ಒಪ್ಪಿಗೆ ಕೊಟ್ಟಳು. ಅದು ಗುರುಸೇವೆ, ಲಿಂಗಪೂಜೆ, ಜಂಗಮ ದಾಸೋಹ ಇವುಗಳಿಗೆಂದು ಆತನಿಂದ ಭಂಗವುಂಟಾಗುವುದೋ ಅಂದೇ ನನ್ನ ಆತನ ಸಂಬಂಧಕ್ಕೆ ಕೊನೆಯಾಗುವುದು. ಇದಕ್ಕೊಪ್ಪಿದರೆ ಆತ ನನ್ನನ್ನು ಮದುವೆಯಾಗಲಿ ಎಂಬ ಕರಾರು ಹಾಕಿದಳು. ಆ ಕರಾರುಗಳಿಗೆ ಒಪ್ಪಿ ಕೌಶಿಕ ಮಹಾದೇವಿಯನ್ನು ಮದುವೆಯಾದ. ಮಹಾದೇವಿಯೂ ಅರಮನೆ ಸೇರಿಕೊಂಡಳು.

ಆದರೆ ನಂತರ ನಡೆದದ್ದೇ ಬೇರೆ. ವಿವಾಹವಾಗಿ ಅರಮನೆ ಸೇರಿಕೊಂಡಂತಹ ಮಹಾದೇವಿಯು ಸಂಸಾರ ಬಂಧನಕ್ಕೊಳಗಾಗದೆ, ನಿರಂತರವೂ ಗುರುಸೇವೆ, ಲಿಂಗಪೂಜೆ, ಜಂಗಮದಾಸೋದಿಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಳು. ಕಾಮಾತುರನಾದ ಕೌಶಿಕನ ಆ ಮೂರು ಕಾರ್ಯಾಚರಣೆಗಳಿಗೂ ಭಂಗ ತಂದ. ಆ ಕೂಡಲೇ ಅಕ್ಕಮ್ಮನು ಉಟ್ಟ ಬಟ್ಟೆಗಳನ್ನು ಬಿಟ್ಟು, ದಿಗಂಬರಳಾಗಿ, ತನ್ನ ಮೈತುಂಬ ಕೇಶರಾಶಿಗಳನ್ನೇ ಇಳಿಬಿಟ್ಟುಕೊಂಡು ಚನ್ನ ಮಲ್ಲಿಕಾರ್ಜುನನನೇ ತನ್ನ ಪತಿಯೆಂದು ಭಾವಿಸಿ, ಕನ್ಯೆಯಾಗಿಯೇ ಉಳಿದುಕೊಂಡ ಅಕ್ಕಮ್ಮ ಅರಮನೆ ಬಿಟ್ಟು ಹೊರನಡೆದಳು.

ಬಹುಶ: ಆಗ ಅಕ್ಕಮ್ಮನನ್ನು ಯಾರಾದರೂ ಹೀಗೆ ಕೇಳಿರಬೇಕು. "ಅಮ್ಮಾ ನೀನೆಲ್ಲಿಗೆ ಹೋಗುವೆ? ಊಟ ನಿದ್ರೆ, ನೀರಡಿಕೆಗಳಿಗೇನು ಮಾಡುವೆ?" ಎಂದು. ಅದಕ್ಕೆ ವೈರಾಗ್ಯನಿಧಿ ಅಕ್ಕಮ್ಮ ಹೀಗೆ ಹೇಳಿರಬೇಕೆನಿಸುತ್ತದೆ.

ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದರೆ ಕೆರೆಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯಾ ಆತ್ಮ ಸಂಗಾತಕ್ಕೆ ನೀನೆನಗುಂಟು ॥

ಅಲ್ಲಿಂದ ಮುಂದೆ ಚೆನ್ನಮಲ್ಲಿಕಾಜುನಯ್ಯನನ್ನು ಕಾಣುವ ಹಂಬಲದಿಂದಲೂ ಗುರು ಶೋಧನೆಗಾಗಿಯೂ ಕಾಡುಮೇಡು ನದಿಸರೋವರಗಳನ್ನು ದಾಟುತ್ತಾ ಮನ ಹೇಳಿದ ಕಡೆಗೆ ಹೆಜ್ಜೆ ಇಟ್ಟಳು. ಅದಕ್ಕೊಂದು ಸಾಕ್ಷಿ ಆಕೆಯ ಈ ಕೆಳಗಿನ ವಚನವು.

ಅಳಿಸುಂಕಲವೇ ಮಾಮರವೇ ಬೆಳದಿಂಗಳೇ ಕೋಗಿಲೆಯೇ
ನಿಮ್ಮೆಲ್ಲರನೂ ಒಂದು ಬೇಡುವೆನು
ಎನ್ನೊಡೆಯ ಚೆನ್ನಮಲ್ಲಿಕಾರ್ಜುನದೇವನ ಕಂಡಡೆ
ಕರೆದು ತೋರಿರೆ ॥

ಹೀಗೆ ಅಕ್ಕಮಹಾದೇವಿಯು ನಿಸರ್ಗದ ಗಿಡಮರಗಳಲ್ಲಿಯೂ, ಪ್ರಾಣಿ ಪಕ್ಷಿಗಳಲ್ಲಿಯೂ ತನ್ನ ಅಪೇಕ್ಷೆಯನ್ನು ನಿವೇದಿಸಿಕೊಂಡಿರುವಳು. ಹೀಗೆ ಕೆಲ ದಿನಗಳು ಕಳೆದ ನಂತರ ಕಲ್ಯಾಣಕ್ಕೆ ಬರುತ್ತಾಳೆ.

'ಅನುಭವ ಮಂಟಪ' ಕಲ್ಯಾಣದಲ್ಲಿ ಅಂದು ಪ್ರಖ್ಯಾತಿ ಪಡೆದಿತ್ತು. ಅಲ್ಲಿಗೆ ಅಕ್ಕಮ್ಮ ಬಂದಿದ್ದಾಳೆ. ಅಲ್ಲಮಪ್ರಭುದೇವರು ಶೂನ್ಯ ಸಿಂಹಾಸನವನ್ನು ಅಲಂಕರಿಸಿದ್ದಾನೆ. ಸಭೆಯಲ್ಲಿ ಬಸವಾದಿ ಶಿವಶರಣರು ಕುಳಿತುಕೊಂಡಿದ್ದಾರೆ. ಅಲ್ಲಿ ಅವರವರು ಅವರವರ ಅನುಭಾವಗಳನ್ನು ವ್ಯಾಖ್ಯಾನಿಸುತ್ತಲ್ಲಿದ್ದಾರೆ. ಆ ಸಂದರ್ಭದಲ್ಲಿ ದಿಗಂಬರಳಾಗಿ ತನ್ನ ಕೇಶರಾಶಿಗಳಿಂದ ಯೌವನಭರಿತವಾದ ದೇಹವನ್ನು ಮರೆಮಾಡಿಕೊಂಡು ಅನುಭವ ಮಂಟಪಕ್ಕೆ ಅಕ್ಕಮ್ಮ ಕಾಲಿಡುತ್ತಾಳೆ!

ಆ ತಕ್ಷಣವೇ ಅಲ್ಲಮಪ್ರಭು ದೇವರು ಆಕೆಯನ್ನು ಹೀಗೆ ಪ್ರಶ್ನಿಸುತ್ತಾನೆ. "ಯೌವ್ವನದ ಸತಿ ನೀನು ಇತ್ತೇಕೆ ಬಂದೆಯವ್ವ? ಸತಿಯಿಂದರೆ ಮುನಿದರು ಶರಣರು, ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು ತಾಯಿ, ಇಲ್ಲದಿದ್ದರೆ ತೊಲಗು ಮಾಯೆ" ಎಂತೆಂಬ ಕಠಿಣ ಮಾತುಗಳಿಂದ ಕೇಳಿದನು.

ಅಕ್ಕಮ್ಮ ಅದಕುತ್ತರವಾಗಿ "ಹರನೆ ಎನಗೆ ಗಂಡನಾಗಬೇಕೆಂದು ಬಹಳ ಕಾಲ ತಪಸ್ಸನ್ನಾಚರಿಸಿದೆ. ಚೆನ್ನಮಲ್ಲಿಕಾರ್ಜುನನೆಂಬ ಗಂಡನಿಗೆ ಎನ್ನ ಕೊಟ್ಟು ಮದುವೆ ಮಾಡಿದರು. ಲೋಕದ ಗಂಡರೆನಗೆ ಸಂಬಂಧವಿಲ್ಲ. ಅದು ಇದೆಯೆಂದು ಯಾರಾದರೂ ಹೇಳಿದರೆ ಅಂಥವರ ಕೊಂಡೊಯ್ದು ಒಲೆಯೊಳಗ್ಹಾಕಿರಯ್ಯಾ" ಎಂದು ಹೇಳಿದಾಗ, ಪ್ರಭುದೇವ ಬಸವಣ್ಣಾದಿ

ಸಮಸ್ತ ಶಿವಶರಣರು ಆಕೆಯ ವಚನ ರಚನಾ ಶಕ್ತಿಗೆ ತಲೆದೂಗಿ ಎಲ್ಲರೂ ಒಕ್ಕೊರಲಿನಿಂದ ಶರಣ ಸತಿ ಅಂಗ ಪತಿ ಸಿದ್ಧಾಂತಿ ಅಕ್ಕಮ್ಮನಿಗೆ 'ಉಘೇ ಉಘೇ' ಎಂಬ ಘೋಷಣೆ ಕೂಗಿದರು.

ಮುಕ್ತಿ, ಮೋಕ್ಷ ಅಥವಾ ನಿರ್ವಾಣ ಹೊಂದುವುದಕ್ಕೆ ಶಾಸ್ತ್ರಗಳಲ್ಲಿ ಸಾರೂಪ್ಯ, ಸಾಲೋಕ್ಯ, ಸಾನಿಧ್ಯ ಮತ್ತು ಸಾಯುಜ್ಯ ಎಂಬ ಪದ ಬಳಕೆಗಳನ್ನು ಬಳಸುವುದುಂಟು. ಆದರೆ ವೀರಶೈವ ಸಿದ್ಧಾಂತ ಈ ನಾಲ್ಕನ್ನು ಅಪ್ಪಿಕೊಳ್ಳದೆ ಸಾಮರಸ್ಯವನ್ನು ಒಪ್ಪಿಕೊಂಡಿದೆ.

'ಸ್ವಾರೂಪ್ಯ' ಎಂದರೆ ಭಗವಂತನ ರೂಪ ಪಡೆಯುವುದು. 'ಸ್ವಾಲೋಕ್ಯ' ಎಂದರೆ ಭಗವಂತನ ಲೋಕದಲ್ಲಿ ವಾಸಿಸುವುದು. 'ಸಾನಿಧ್ಯ' ಎಂದರೆ ಭಗವಂತನ ಹತ್ತಿರದಲ್ಲಿರುವುದು. 'ಸಾಯುಜ್ಯ' (ಸಾಐಕ್ಯ) ಎಂದರೆ ಭಗವಂತನನ್ನು ಸೇರುವುದು. 'ಸಾಮರಸ್ಯ' ಎಂದರೆ ಸತಿಪತಿಗಳು ಸಮರಸ ಹೊಂದುವಂತೆ ಶರಣನೆಂಬ ಸತಿಯು ಹರನೆಂಬ ಪತಿಯೊಂದಿಗೆ ಸಮರಸ ಹೊಂದುವುದು. ಅಂತಹ ಕಲೆಯನ್ನೇ ಸದ್ಗುರುವು ಶಿಷ್ಯನಿಗೆ ಕಲಿಸಿಕೊಡುತ್ತಾನೆ.

ಇದು ಶೈವ ಪರಂಪರೆಯಲ್ಲಿ ಅಷ್ಟೇ ಅಲ್ಲ! ವೈಷ್ಣವ ಪರಂಪರೆಯಲ್ಲಿಯೂ ಸಹ ಅನುಕರಣೆ ಮಾಡಿರುವಂತಹ ಒಂದು ಕಥೆ ಹೀಗೆ ಕಾಣಬರುವುದು! ಮಹಾನ್ ಸಂತಾಗ್ರಣಿ ಮೀರಾಬಾಯಿ ಮೊದಲವಳು ರಾಜಕುವರಿ. ಆಕೆ ಇನ್ನೂ ಚಿಕ್ಕವಳಾಗಿದ್ದಾಗ ರಾತ್ರಿಯೊಂದು ದಿನ ಮದುವೆಯ ಮೆರವಣಿಗೆ ಬೀದಿಯಲ್ಲಿ ಬಂತು. ಅರಮನೆಯ ಮಾಳಿಗೆಯ ಮೇಲೆ ನಿಂತು ನೋಡುತ್ತಿದ್ದ ಮೀರಾಬಾಯಿ ತಾಯಿಯನ್ನು "ಅಮ್ಮಾ ಅದೇನು?" ಎಂದು ಕೇಳಿದಳು.

ಅಮ್ಮ! "ಮದುವೆಯ ಮೆರವಣಿಗೆ" ಎಂದಳು.

ಮೀರಾ! "ಅಮ್ಮ ಹಾಗಾದರೆ ನನ್ನ ಮದುವೆ ಯಾವಾಗ?"

ಅಮ್ಮ! "ನೀನಿನ್ನು ಚಿಕ್ಕ ಮಗು. ದೊಡ್ಡವಳಾದ ಮೇಲೆ ಅದೆಲ್ಲ. ಯಾಕೆಂದರೆ ನಿನಗಿನ್ನು ಪ್ರೀತಿ-ಪ್ರೇಮ ಎನ್ನುವುದೇ ಗೊತ್ತಿಲ್ಲ".

ಮೀರಾ! "ಇಲ್ಲಮ್ಮ ನನಗೆಲ್ಲ ಗೊತ್ತು. ನಾನಾಗಲೇ ಒಬ್ಬರನ್ನು ಪ್ರೀತಿಸುತ್ತಿರುವೆ!"

ತಾಯಿ ಮೀರಾಳ ಮಾತಿಗೆ ಆಶ್ಚರ್ಯಕ್ಕೊಳಗಾಗಿ "ನೀನಿನ್ನು ಚಿಕ್ಕವಳು ಹಾಗೆಲ್ಲ ಮಾತಾಡಬಾರದು ನಡಿ" ಎಂದಳು.

ಆದರೆ ಮೀರಾಬಾಯಿ ತಾಯಿಯನ್ನು ತನ್ನ ಕೋಣೆಗೆ ಕರೆದೊಯ್ದು ತನ್ನ ಕೋಣೆಯೊಳಗಿದ್ದ ಶ್ರೀಕೃಷ್ಣನ ಗೊಂಬೆಯೊಂದನ್ನು ತೋರಿಸಿ, "ಅಮ್ಮ ನಾನಿವನನ್ನು ಪ್ರೀತಿಸುತ್ತಿರುವುದು" ಎಂದು ಹೇಳಿದಳು.

ತಾಯಿಯು "ನಿನಗೆಲ್ಲೊ ತಲೆ ಕೆಟ್ಟಿದೆ" ಎಂದು ಹೇಳಿ ಒಳನಡೆದಳು.

ಮೀರಾ ಮುಂದೆ ದೊಡ್ಡವಳಾಗಿ ಮದುವೆಯ ವಯಸ್ಸಿಗೆ ಬಂದಳು. ಒಳ್ಳೆಯ ರಾಜಕುಮಾರನಿಗೆ ಕೊಟ್ಟು ಮದುವೆ ಮಾಡಿದರು. ಅಂದು ಮಧುಚಂದ್ರದ ಮೊದಲ ರಾತ್ರಿ.

ಮೀರಾಬಾಯಿ ತಾ ಮಲಗುವ ಕೋಣೆಗೆ ಒಬ್ಬಳೆ ಹೋಗಿ! ಶ್ರೀಕೃಷ್ಣನ ಗೊಂಬೆಯನ್ನು ಕೈಯಲ್ಲಿ ಹಿಡಿದುಕೊಂಡು "ಕೃಷ್ಣಾ, ಕೊನೆಗೂ ನೀನು ನನ್ನನ್ನು ಮದುವೆ ಮಾಡಿಕೊಂಡುಬಿಟ್ಟೆ. ಇಂದು ನಮ್ಮಿಬ್ಬರ ಮೊದಲ ರಾತ್ರಿ" ಎನ್ನುತ್ತಾ ಸಂತೋಷದಿಂದ ಕುಣಿದಾಡುತ್ತಿದ್ದಳು. ಮೀರಾಳನ್ನು ಮದುವೆಯಾಗಿದ್ದ ರಾಜಕುಮಾರ ಇದನ್ನೆಲ್ಲ ಕೋಣೆಯ ಹೊರಗಿದ್ದುಕೊಂಡೇ ಕಿಟಕಿಯಿಂದ ವೀಕ್ಷಿಸುತ್ತಿದ್ದ. ಅವನು ಜ್ಞಾನಿಯಾದ್ದರಿಂದ ಮೀರಾಳ ಪಾರಮಾರ್ಥದ ಉತ್ಕಟ ಬಯಕೆಗೆ ಭಂಗ ತರಲೆತ್ನಿಸಲಿಲ್ಲ. ಹೆಂಡತಿ ಇದ್ದರೂ ಇಲ್ಲದವನಂತೆ ಜೀವನ ಕಳೆದಿದ್ದ. ಮೀರಾಬಾಯಿ ಅಕ್ಕಮಹಾದೇವಿಯಂತೆ ಕನ್ಯೆಯಾಗಿಯೇ ಉಳಿದುಬಿಟ್ಟಳು. ಆದರೊಮ್ಮೆ ರಾಜಕುಮಾರನಿಗೆ ವೈರಿ ರಾಜರೊಂದಿಗೆ ಯುದ್ಧ ಮಾಡುವಂತಹ ಸನ್ನಿವೇಷ ಒದಗಿಬಂತು. ಯುದ್ಧದಲ್ಲಿ ಜಯವಂತೂ ಸಿಕ್ಕಿತು. ಆದರೆ ರಾಜಕುಮಾರ ಮಾತ್ರ ವೀರಮರಣವನ್ನಪ್ಪಿದ್ದ. ಈ ಸುದ್ದಿ ಅರಮನೆ ಸೇರಿತು. ದೂತನೊಬ್ಬ ಬಂದು ಮೀರಾಬಾಯಿಗೆ "ನಿಮ್ಮ ಪತಿದೇವ ಮರಣವನ್ನಪ್ಪಿದರೆಂದು ಹೇಳಿದ್ದಕ್ಕೆ", "ಇಲ್ಲ ನನ್ನ ಗಂಡ ಸಾವಿಲ್ಲದವನು. ಅವನು ಅವಿನಾಶಿ, ಅಮರ" ಎನ್ನುತ್ತಾ, ಶ್ರೀಕೃಷ್ಣನ ಗೊಂಬೆಯನ್ನು ಕೈಯಲ್ಲಿ ಹಿಡಿದುಕೊಂಡು ಕೃಷ್ಣನ ಜನ್ಮಸ್ಥಾನವಾದ ಮಥುರಾ ನಗರ ಯಾತ್ರೆ ಬೆಳೆಸಿದಳು.

ಬಹುಶ: ಅಕ್ಕಮಹಾದೇವಿಯೂ ಸಹ ನನ್ನ ಗಂಡ ಸಾವಿಲ್ಲದವನು ಎಂಬುದರ ಬಗ್ಗೆ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾಳೆ.

ಸಾವಿಲ್ಲದ ಕೇಡಿಲ್ಲದ ಚಲುವಂಗಾನೊಲಿದೆನವ್ವ
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ
ಚಲುವಂಗಾನೊಲಿದೆನವ್ವ
ಭವವಿಲ್ಲದ ಭಯವಿಲ್ಲದ ಚಲುವಂಗಾನೊಲಿದೆ
ಕುಲಸೀಮೆಯಿಲ್ಲದ ನಿಸ್ಸೀಮ ಚಲುವಂಗಾನೊಲಿದೆ
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವಗಂಡನೆನಗೆ
ಈ ಸಾವ ಕೆಡವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ!

ಇಂತಹ ಸಿದ್ಧಾಂತ ಪರಿಪಾಲಕಳಾದ ಮೀರಾಬಾಯಿ, ಶ್ರೀಕೃಷ್ಣನ ಮೇಲೆ ಭಾವಪೂರ್ಣ ಗೀತೆಗಳನ್ನು ಹಾಡುತ್ತಾ ಮಥುರಾ ನಗರಕ್ಕೆ ಬರುತ್ತಾಳೆ. ಅಲ್ಲೊಂದು ಶ್ರೀಕೃಷ್ಣನ ದೊಡ್ಡ ದೇವಾಲಯವಿದೆ. ಆ ದೇವಾಲಯದ ಅರ್ಚಕ ನಲವತ್ತು ವರ್ಷಗಳ ಪರ್ಯಂತರ ಬ್ರಹ್ಮಚರ್ಯವನ್ನು ಪರಿಪಾಲಿಸಿಕೊಂಡು ಆ ಕೃಷ್ಣನ ಪೂಜೆ ಮಾಡುತ್ತಿದ್ದ. ಆದರೆ ಆ ಅರ್ಚಕ ನಲವತ್ತು ವರ್ಷಗಳ ಪರ್ಯಂತರ ಆ ಗುಡಿಯೊಳಗೆ ಯಾವೊಬ್ಬ ಹೆಂಗಸನ್ನೂ ಬರದಂತೆ ನೋಡಿಕೊಂಡಿದ್ದ.

ಭಾವಪರವಶಳಾದ ಮೀರಾಬಾಯಿ ಕೃಷ್ಣನ ಮೇಲೆ ಹಾಡುಗಳನ್ನು ಹಾಡುತ್ತಾ ಮಥುರೆಯ ಶ್ರೀಕೃಷ್ಣನ ದೇವಸ್ಥಾನದ ದ್ವಾರಬಾಗಿಲ ಹತ್ತಿರ ಬರುವಳು. ಅವಳ ಹಾಡು ಕೇಳುತ್ತಾ ಅಲ್ಲಿದ್ದ ದ್ವಾರಪಾಲಕರಿಬ್ಬರು ಮೈಮರೆತು ಹೋಗುವರು. ಅದು ಎಷ್ಟರಮಟ್ಟಿಗೆ ಎಂದರೆ ತಮ್ಮ

ಕರ್ತವ್ಯಪ್ರಜ್ಞೆಗೂ ಮಂಕು ಕವಿಯುವಷ್ಟು. ದ್ವಾರಪಾಲಕರಿಗೆ ಹೀಗಾದ್ದರಿಂದಲೇ ಮೀರಾಬಾಯಿ ಸರಾಗವಾಗಿ ಗರ್ಭಗುಡಿ ಪ್ರವೇಶಿಸಿ ಬಿಡುವಳು.

ದೂರದಿಂದ ಇದನ್ನೆಲ್ಲ ನೋಡಿದ್ದ ಅರ್ಚಕ ಓಡೋಡಿ ಬಂದು, "ಎಲ್ಯೆ ಭ್ರಷ್ಟ ಹೆಣ್ಣೇ ನಿನಗೆಷ್ಟು ಧೈರ್ಯ, ನಲವತ್ತು ವರ್ಷಗಳ ಪರ್ಯಂತರ ಈ ದೇವಸ್ಥಾನದ ಒಳಗೆ ಯಾವೊಬ್ಬ ಹೆಂಗಸನ್ನೂ ಬಿಡದಂತೆ ಕಾಪಾಡಿಕೊಂಡು ಬಂದಿದ್ದೆ. ಇಂದು ಆ ನನ್ನ ವ್ರತಕ್ಕೆ ಭಂಗ ತಂದೆ ನೀನು" ಎಂದು ಅವಳ ಮೇಲೆ ಹಲ್ಲು ಮಸೆದ, ಆ ಅರ್ಚಕ.

"ಸರಿ, ನಾನು ಹೆಣ್ಣು. ಆದರೆ ನೀನಾರು? ನೀನು ಹೆಣ್ಣೋ? ಗಂಡೋ?" ಎಂದು ಪ್ರಶ್ನಿಸಿದಳು ಮೀರಾ.

"ನಾ ಗಂಡು" ಎಂದುತ್ತರಿಸಿದ.

ನಗುತ್ತಲಾಗ ಮೀರಾಬಾಯಿ, "ಇಡೀ ವಿಶ್ವಕ್ಕೆ ಇರುವವನು ಒಬ್ಬನೇ ಒಬ್ಬ ಗಂಡಸು! ಅವನೇ ಆ ಪರಮಾತ್ಮ! ಆತನೊಬ್ಬನ ಹೊರತು ಮತ್ತೊಬ್ಬ ಗಂಡಸರಿಲ್ಲ ಈ ಪ್ರಪಂಚದಲ್ಲಿ. ನಾವುಗಳೆಲ್ಲ ಆತನ ಪ್ರೇಮಿಗಳು, ಪ್ರೇಯಸಿಯರು. ಅಷ್ಟಕ್ಕೂ ಈ ಪ್ರಪಂಚದಲ್ಲಿ ಆತನೊಬ್ಬನನ್ನು ಬಿಟ್ಟು ಮತ್ತೊಬ್ಬ ಗಂಡಸು ಇರುವನೆಂದರೆ ಅವನೊಬ್ಬನನ್ನು ನೋಡಬೇಕೆಂಬ ಕುತೂಹಲ ನನಗೆ. ಅಂಥವನೆಲ್ಲಿದ್ದಾನೆ? ತೋರಿಸುವೆಯಾ ನಾನೂ ನೋಡಿ ಸಂತೋಷಪಡುತ್ತೇನೆ" ಎಂದು ಕೇಳಿದಳು.

ಅವಳ ಅಲೌಕಿಕ ಪ್ರಶ್ನೆಗೆ ದಿಗ್ಭ್ರಾಂತನಾದ ಅರ್ಚಕ. ಅವಳ ಪಾದದ ಮೇಲೆ ಬಿದ್ದು, "ಹೌದು ತಾಯಿ, ನೀನು ಹೇಳುವುದೇ ಸತ್ಯ. ಈ ಜಗತ್ತಿಗಿರುವುದು ಒಬ್ಬನೇ ಒಬ್ಬ ಪುರುಷೋತ್ತಮನು. ಅವನೊಬ್ಬನಲ್ಲದೆ ಮತ್ತೊಬ್ಬ ಗಂಡಸು ಈ ಪ್ರಪಂಚದಲ್ಲಿಲ್ಲ. ಇಲ್ಲಿಯವರೆಗೆ ನನ್ನಲ್ಲಾವರಿಸಿದ ಅಜ್ಞಾನವನ್ನು ಅಳಿಸಿ ಹಾಕಿದೆ. ನನ್ನ ಜ್ಞಾನದ ಕಣ್ಣು ತೆರೆಸಿದೆ. ನೀನೇ ನನ್ನ ಗುರು. ನನ್ನ ಅಪರಾಧವನ್ನು ಕ್ಷಮಿಸು ತಾಯೇ" ಎಂದು ಬೇಡಿಕೊಂಡನು. ಇದನ್ನೇ ಹೇಳುವುದು **"ಶರಣ (ಅಂಗ) ಸತಿ, ಲಿಂಗ ಪತಿ"** ಸಿದ್ಧಾಂತವೆಂದು.

ಶಿವಶರಣರ, ಸಂತರ, ಮಹಾಂತರ ಭಾವ, ಸದಾ ಭಗವಂತನಲ್ಲಿಯೇ ನಿಶ್ಚಲಗೊಂಡಿರುತ್ತದೆ. ಅವರ ಭಾವ ಭೌತಿಕದ ಯಾವೊಂದು ಸಂಬಂಧಗಳಿಗೆ ಅಂಟಿಕೊಂಡಿರುವುದಿಲ್ಲ. ಇದನ್ನೇ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಹೇಳಲಾಗಿದೆ.

**ಭಾವೇನ ನಾಸ್ತಿ ಸಂಬಂಧ; ಕೇವಲ ಜ್ಞಾನಯೋಗಿನ: ।**
**ತಥಾಪಿ ಭಾವಂ ಕುರ್ವೀತ ಶಿವೇ ಸಂಸಾರಮೋಚಕೇ ॥**

ಜ್ಞಾನಿಯಾದ ಶಿವಯೋಗಿಗೆ ಭಾವದೊಂದಿಗೆ ಯಾವ ಸಂಬಂಧವೂ ಇರುವುದಿಲ್ಲ. ಆದರೂ ಸಹ ಸಂಸಾರದಿಂದ ಬಿಡುಗಡೆಯನ್ನುಂಟು ಮಾಡುವ ಶಿವನ ವಿಷಯಕ ಭಾವನೆಗಳನ್ನು ಮಾಡಬೇಕು ಎಂತೆಂಬುದಾಗಿ ಹೇಳಿರುವುದು.

ಸಂತ ತುಕಾರಾಮರ ಹೆಸರು ಕೇಳದವರಿರಲಿಕ್ಕಿಲ್ಲ. ಅವರು ಸದಾ ಭಗವಂತನ

ಧ್ಯಾನಾಸಕ್ತರು. ಕುಂತರು, ನಿಂತರು, ಓಡಾಡಿದರೂ ಉಂಡರೂ, ಮಲಗಿದರೂ, 'ವಿಠಲ ವಿಠಲ' ಧ್ಯಾನ. ಹೀಗಿರುವಾಗ ಇವರ ಗುಡಿಸಲ (ಕುಟೀರದ) ಪಕ್ಕದಲ್ಲಿ ಓರ್ವ ವೇಶ್ಯೆಯ ಗುಡಿಸಲಿತ್ತು. ಅವಳ ಭಾವನೆಗೂ ಇವರ ವಿಠಲನ ಧ್ಯಾನಕ್ಕೂ ಎಲ್ಲಿಲ್ಲದ ವೈರತ್ವ. ಅಂದರೆ ಆ ವಿಠಲ ನಾಮವನ್ನು ಕೇಳಿಸಿಕೊಂಡು ಸಹಿಸಿಕೊಳ್ಳುವಷ್ಟು ಶಕ್ತಿ ಅವಳಲ್ಲಿರಲಿಲ್ಲ. ಆ ನಾಮಸ್ಮರಣೆಯ ಶಬ್ದ ಅವಳ ಕಿವಿಗೆ ಬಿತ್ತೆಂದರೆ ಸಾಕು, ಅವಳ ಪಿತ್ತ ನೆತ್ತಿಗೇರುತ್ತಿತ್ತು. ಇದರಿಂದ ಅವಳೊಮ್ಮೆ ತನ್ನಲ್ಲಿಗೆ ಬಂದು ಅವಳೊಂದಿಗೆ ದೈಹಿಕ ಸುಖ ಪಡೆಯುತ್ತಿದ್ದ ಓರ್ವ ವಿಟಪುರುಷನಿಗೆ ಹೀಗೆ ಹೇಳಿದಳು. "ನನಗೆ ಪ್ರತಿನಿತ್ಯ ಆ ವಿಠಲ ವಿಠಲ ಎಂಬ ಶಬ್ದ ಕೇಳಲಾಗುತ್ತಿಲ್ಲ. ಆದ್ದರಿಂದ ನೀನು ಮೊದಲು ಅವನ ಗುಡಿಸಲಿಗೆ ಬೆಂಕಿ ಹಚ್ಚಿ ಅವನನ್ನು ಮತ್ತು ಅವನ ಗುಡಿಸಲನ್ನು ಸುಟ್ಟು ಹಾಕಿ ಆ ನಂತರ ನನ್ನಲ್ಲಿಗೆ ಬಾ' ಎಂದು ಹೇಳಿ ಅವನನ್ನು ಆ ರಾತ್ರಿ ಹೊರಕಳಿಸುವಳು.

"ಕಾಮಾತುರಾಣಾಂ ನ ಭಯಂ ನ ಲಜ್ಜಂ" ಎಂಬಂತೆ ಆ ಕಾಮಾಂಧ ಉರಿಯುತ್ತಿರುವ ಪಂಜೊಂದನ್ನು ತುಕಾರಾಮನ ಗುಡಿಸಲಿನತ್ತ ಎಸೆದ. ಆದರೆ ಆ ಬೆಂಕಿ ತುಕಾರಾಮನ ಗುಡಿಸಲನ್ನು ಸುಡಲಿಲ್ಲ. ಅದು ಆರಿಹೋಯಿತು. ಅದೇ ಕ್ಷಣದಲ್ಲಿ ಆ ವೇಶ್ಯೆಯ ಗುಡಿಲಸಿಗೆ ಬೆಂಕಿ ಹತ್ತಿಕೊಂಡು ಧಗಧಗನೆ ಉರಿಯತೊಡಗಿತು. ಇದನ್ನೆಲ್ಲ ನೋಡುತ್ತಿದ್ದ ಆ ವೇಶ್ಯೆಗೆ ತನ್ನ ತಪ್ಪಿನ ಅರಿವಾಯಿತು. ಅಳುತ್ತಾ ಓಡೋಡಿ ತುಕಾರಾಮನಲ್ಲಿಗೆ ಬಂದು "ಸಂತರೇ, ನನ್ನನ್ನು ಕ್ಷಮಿಸಿ. ನನ್ನ ಗುಡಿಸಲಿಗೆ ಬೆಂಕಿ ಹತ್ತಿ ಧಗಧಗನೆ ಉರಿಯುತ್ತಿದೆ. ನೀವೇ ನನ್ನನ್ನು ರಕ್ಷಿಸಬೇಕು" ಎಂದು ಬೇಡಿಕೊಂಡಳು.

ತುಕಾರಾಮರು ಆಗ, (ಇಲ್ಲಿ ಒಂದೆರಡು ಶಬ್ದಗಳ ಅನಿವಾರ್ಯತೆಯಿದೆ. ಸಂತರೇ ಹೇಳಿರುವುದರಿಂದ ಆ ಶಬ್ದಗಳ ಬಳಕೆಯನ್ನು ಇಲ್ಲಿ ಮಾಡಲಾಗಿದೆ. ಅಪಾರ್ಥ ಕಲ್ಪಿಸಿಕೊಳ್ಳಬಾರದು) "ಅಮ್ಮಾ ನಾನೇನು ಮಾಡಲಿ, ನಿನ್ನ ಇಟ್ಟುಕೊಂಡವ ನನ್ನ ಗುಡಿಸಲಿಗೆ ಬೆಂಕಿ ಹಚ್ಚಲು ಬಂದ. ಆದರೆ! ನನ್ನ ಕಟ್ಟಿಕೊಂಡ ಆ ಪಾಂಡುರಂಗ ವಿಠಲ ಅದನ್ನು ತಡೆದು, ನಿನ್ನ ಗುಡಿಸಲಿಗೆ ಬೆಂಕಿ ಇಟ್ಟ. ಇದರಲ್ಲಿ ನನ್ನದೇನೂ ತಪ್ಪಿಲ್ಲ ತಾಯಿ" ಎಂದಿದ್ದರಂತೆ. ಅರ್ಥಾತ್ ಶರಣರಿಗೆ, ಸಂತರಿಗೆ, ಮಹಾಂತರಿಗೆ ಆ ಪರಶಿವ ಬ್ರಹ್ಮವೇ ಪತಿಯು.

ಶಿರೋವ್ರತವೆಂದರೆ ತನ್ನನ್ನು ತಾನರಿಯಲು ತನ್ನ ಜನ್ಮ ಪರ್ಯಂತರವೂ ಪಾಲಿಸಿಕೊಂಡು ಹೋಗಲೇಬೇಕಾದಂತಹ ಒಂದು ಮಹಾವ್ರತವು. ಈ ವ್ರತವನ್ನು ಸದ್ಗುರುವೋರ್ವನಿಂದ ದೀಕ್ಷೆ ಪಡೆದುಕೊಂಡ ನಂತರವೇ ಪರಿಪಾಲಿಸಿಕೊಂಡು ಹೋಗುವಂಥದ್ದು. 'ಗುರುವಿಲ್ಲದೆಂತಪ್ಪ ಪುರುಷರ್ಗೆ ಮುಕ್ತಿ ಸಮನಿಪದು', 'ಗುರುವಿನ ಗುಲಾಮನಾಗುವನತಕ ಸಿಗದಣ್ಣ ಮುಕುತಿ', 'ಶಿವಪಥವನರಿಯಲು ಗುರುಪಥವೇ ಮೊದಲು' ಎಂಬ ಶರಣ ಸಂತ, ಮಹಾಂತರ ಸದ್ವಾಕ್ಯಗಳಂತೆ, ಇದಕ್ಕೆ ಗುರುವೇ ಮೂಲ ಪುರುಷನು. ಆದ್ದರಿಂದ ಅವರವರು, ಅವರವರ ಗುರುವಿನ ಸಂಪ್ರದಾಯದಂತೆ, ಆಯಾ ಮಾರ್ಗದಲ್ಲಿಯೇ ನಡೆಯಬೇಕಾಗುವುದು. ಮಾರ್ಗ ಯಾವುದೇ ಇರಲಿ ಅವರವರಿಗೆ ಅವರ ಗುರು ಸಂಪ್ರದಾಯವೇ ಅಂತಿಮವಾದದ್ದು. ಹಾಗೆಯೇ ನಡೆಯಬೇಕು.

ವೀರಶೈವ ಧರ್ಮದಲ್ಲಿ ಗುರುವಾದವನು ದೀಕ್ಷೆಯ ಸಂದರ್ಭದಲ್ಲಿ ಇಷ್ಟಲಿಂಗವೊಂದನ್ನು ದಯಪಾಲಿಸುತ್ತಾನೆ. ಲಿಂಗಾಕೃತಿಯ ಜಡವಸ್ತು (ಶಿಲೆ)ವೊಂದಕ್ಕೆ ಸಂಸ್ಕಾರವನ್ನು ಕೊಟ್ಟಾಗ ಅದು ಇಷ್ಟಲಿಂಗವಾಗುವುದು. ಚೇತನದಿಂದ ಜಡ ಅಭಿವ್ಯಕ್ತಿಗೊಳ್ಳುವಂತೆ ಜಡದಿಂದ ಚೇತನವೂ ಅಭಿವ್ಯಕ್ತಿಯಾಗುವುದು.

'ಅನ್ನಾತ್ ಪುರುಷಃ' ಎಂಬಂತೆ ಅಕ್ಕಿ, ಜೋಳ, ಗೋದಿ, ರಾಗಿ ಇತ್ಯಾದಿ ತಯಾಗಿಸಿದಂತಹ ಅನ್ನವನ್ನು ನಾವು ಊಟ ಮಾಡುವೆವು. ಆ ಅನ್ನ ಸಂಸ್ಕಾರ ಪಡೆಯುತ್ತಾ ಏಳೇಳು ದಿನಗಳೊಮ್ಮೆ ಒಂದೊಂದು ಧಾತುವಾಗಿ ಪರಿವರ್ತನೆ ಹೊಂದುವುದು. ಅನ್ನದಿಂದ ಪರಿವರ್ತನೆಗೊಳ್ಳುವ ಸಪ್ತಧಾತುಗಳು ಹೀಗಿವೆ; ರಸ, ರಕ್ತ, ಮಾಂಸ, ಮಜ್ಜೆ, ಮೇದಸ್ಸು, ಅಸ್ತಿ ಕೊನೆಯದಾಗಿ ಶುಕ್ರ ಅಥವಾ ಶೋಣಿತಗಳೆಂದೆನಿಸಿ ಅಂದರೆ ಗಂಡಿನಲ್ಲಿ ಶುಕ್ರವೆನಿಸಿಕೊಂಡರೆ ಹೆಣ್ಣಿನಲ್ಲಿ ಶೋಣಿತವೆನಿಸಿಕೊಳ್ಳುವುದು. ಈ ಗಂಡು ಹೆಣ್ಣಿನ ಶುಕ್ರ (ವೀರ್ಯ) ಶೋಣಿಗಳೆರಡರ ಸಂಯೋಜನೆಯಿಂದಲೇ ಜೀವಾತ್ಮ ಹುಟ್ಟಿಬರುವುದು. ಹೀಗೆ ಗುರುವೂ ಸಹ ಆ ಲಿಂಗಾಕೃತಿಯ ಶಿಲೆಗೆ ತನ್ನ ಪುರುಷ ಹಸ್ತದ ಸ್ಪರ್ಶದಿಂದಲೂ, ಮಂತ್ರಗಳಿಂದಲೂ ಹಲವು ಕ್ರಿಯೆಗಳಿಂದಲೂ ಸಂಸ್ಕಾರ ಕೊಟ್ಟು ಇಷ್ಟಲಿಂಗವನ್ನಾಗಿ ಪರಿವರ್ತಿಸುವನು. ನಿವೃತ್ತಿಕಲಾ, ಪ್ರತಿಷ್ಟಾಕಲಾ, ಶಾಂತಿಕಲಾ, ಶಾಂತಾತೀತಕಲಾಗಳೆಂತೆಂಬ ಇತ್ಯಾದಿ ಕಲೆಗಳನ್ನು ಆ ಶಿಲೆಯಲ್ಲಿ ಸಂಯೋಜನೆಗೊಳಿಸಿ, ಮತ್ತೆ ಅದರಲ್ಲಿ ಶಿವ ಮತ್ತು ಜೀವಕಳೆಗಳೆರಡನ್ನು ತುಂಬಿಕೊಡುವನು. ಇದನ್ನೇ ಸಿದ್ಧರಾಮೇಶ್ವರರು ತಮ್ಮೊಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

ಸಂತೆಯೊಳಗಿದ್ದ ಕಲ್ಲುಗಳೆಲ್ಲ ಲಿಂಗವೇನೋ ಅಯ್ಯಾ?
ಪರ್ವತ ವಾರಣಾಸಿ ಬದರಿಕಾ ಕ್ಷೇತ್ರಂಗಳಲ್ಲಿದ್ದ
ಕಲ್ಲುಗಳೆಲ್ಲ ಲಿಂಗವೇನೋ ಅಯ್ಯಾ?
ಅಂತಕಾಂತಕ ಶ್ರೀಗುರುಮೂರ್ತಿ ತನ್ನರುವಿನ ರೂಪವಿಂತೆಂದು
ತೋರಿದ ನಿಜಕಲ್ಲೇ ನಿಜಲಿಂಗ ನೋಡಾ
ಕಪಿಲ ಸಿದ್ಧ ಮಲ್ಲಿಕಾರ್ಜುನಾ ॥

ಕಲ್ಲು ಲಿಂಗವಲ್ಲ! ಲಿಂಗವೂ ಕಲ್ಲಲ್ಲ. ಕಲ್ಲಿನಲ್ಲಡಗಿರುವಂತ ಪರಮಾತ್ಮನ ಕಳೆಯೇ (ಶಿವ ಚೈತನ್ಯವೇ) ಲಿಂಗವಾಗಿರುವುದು. ತತ್ವಜ್ಞಾನಿಗಳಾದಂತಹ ಪ್ಲೋಟೋ ಮತ್ತು ಅರಿಸ್ಟಾಟಲ್‌ರು ಹೇಳುತ್ತಾರೆ, ಕಾಂತ ಶಿಲೆಗಳಲ್ಲಿ ಪರಮಾತ್ಮನ ಕಳೆ ಇರುತ್ತದೆಯೆಂದು.

ಈ ಪ್ರಕೃತಿಯಲ್ಲಿ ಏನೆಲ್ಲಾ ನಡೆಯುತ್ತಿರುವವೆಂದು ಭಾವಿಸಿರುವೆವೋ ಅವೆಲ್ಲವೂ ನಡೆಯುವುದಿಲ್ಲ. ಹಾಗೆ ಏನೆಲ್ಲವನ್ನು ನಡೆಯುವುದಿಲ್ಲವೆಂದು ವಾದಿಸುವೆವೋ ಅವೆಲ್ಲವೂ ನಡೆದಿರಲು ಸಾಧ್ಯವೂ ಇದೆ. ಅರ್ಥಾತ್ ಪ್ರಕೃತಿ ತನ್ನ ಗುಟ್ಟನ್ನು ಅಷ್ಟು ಸುಲಭವಾಗಿ ಬಿಟ್ಟುಕೊಟ್ಟಿಲ್ಲ. ಅಂದರೆ ಕೇವಲ ವೈಜ್ಞಾನಿಕ ಬುದ್ಧಿಭಾವನೆಗಳಿಗಷ್ಟೇ ನಿಲುಕುವಂಥದಲ್ಲ. ವಿಜ್ಞಾನಕ್ಕೂ ಅತೀತವಾದ ಜ್ಞಾನ ಸಂಪಾದನೆವುಳ್ಳವರಿಗೆ ಮಾತ್ರ ಅದರ ಗುಟ್ಟು ತಿಳಿದಿರಲು ಸಾಧ್ಯ. ಇದನ್ನೇ ಶಾಸ್ತ್ರಗಳು 'ಏಕವಿಜ್ಞಾನೇನ ಸರ್ವ ವಿಜ್ಞಾನಂ' ಎಂದು. ಹಾಗೇ ಇದೇ ಅರ್ಥ ಕೊಡುವುದು.

ಜೈನ ಸಿದ್ಧಾಂತದಲ್ಲಿಯೂ ಸಹ. 'ಜೋ ಏಗಂ ಜಾಣೇಯೊ ಸೇ ಸವ್ವಂ ಜಾಣೇಯೇ' ಎಂದು ಹೇಳಿರುವುದು. ಅಂದರೆ ಏನೊಂದನ್ನು ತಿಳಿದುಕೊಂಡರೆ ಇಡೀ ಸರ್ವವನ್ನು ತಿಳಿದುಕೊಂಡಂತಾಗಿರಬೇಕು. ಅಂತಹ ಪರಮಜ್ಞಾನ, 'ಆತ್ಮಜ್ಞಾನ'.

ಐನ್‌ಸ್ಟೇನರ ಒಂದು ಸೂತ್ರವಿದೆ. $E=Mc^2$ ಎಂದು. ಇದು ವಸ್ತುವನ್ನು ಶಕ್ತಿಯನ್ನಾಗಿ ಮಾಡಿ ಬಾಂಬ್ ಒಂದನ್ನು ತಯಾರಿಸಲು ಬಳಸುವಂತಹ ಸೂತ್ರವಿದು. E=Energy (ಎನರ್ಜಿ) ಅಂದರೆ ಚೈತನ್ಯಶಕ್ತಿ, M=Mass (ಮಾಸ್) ಅಧಿಕ ಸಂಖ್ಯೆಯ ಗುಂಪು. C=Constant (ಕಾನ್‌ಸ್ಟಂಟ್) ನಿರಂತರ, ನಿಶ್ಚಲ ಅಥವಾ ದೃಢವೆಂತೆಂಬುದಾಗಿರುವುದು.

ವಸ್ತುವಿನ ಅಣುಗಳನ್ನು ವಿಭಜಿಸಿ, ಶಕ್ತಿಯಾಗಿ ಪರಿವರ್ತನೆಗೊಳಿಸಿ ಬಳಸುವಿಕೆಯೊಂದು ವಿಜ್ಞಾನದ ಅತಿಸಾಮಾನ್ಯ ಅವಿಷ್ಕಾರವು. ಹಾಗೆ ಯೋಗಿಯೊಬ್ಬನು ತನ್ನ ಸರಿಯಾದ ಜ್ಞಾನದ ತಳಹದಿಯಲ್ಲಿ 'ಶಿವೋಹಂ' ಎಂಬ ಮಾನಸಿಕ ಸ್ಥಿತಿಯನ್ನು ಹೊಂದಿ, ಇಡೀ ವಿಶ್ವದ ಶಕ್ತಿಯನ್ನೇ ಮಾನಸಿಕವಾಗಿ ಕೇಂದ್ರೀಕರಿಸಿ, ಅದನ್ನು ಬಳಸಿಕೊಂಡು ಹೊಸದಾದ ಸೃಷ್ಟಿಯೊಂದನ್ನು ಮಾಡಬಲ್ಲಂತಹ ಮಹಾಮಹಿಮರು ನಮ್ಮಲ್ಲಿ ಇಂದಿಗೂ ಇದ್ದಾರೆ. ಆದರೆ ಅಂಥವರನ್ನು ಗುರುತಿಸುವಷ್ಟು ತಾಳ್ಮೆ ನಮ್ಮಗಳಲ್ಲಿಲ್ಲ. ಅದಕ್ಕೆಲ್ಲ ಸೂಕ್ಷ್ಮಾತಿಸೂಕ್ಷ್ಮ ಜ್ಞಾನವಿರಬೇಕಾಗುವುದು.

ವೀರಶೈವರ ಇಷ್ಟಲಿಂಗದ ಮೇಲೆ ಇರಿಸಿರುವಂತಹ ಕಂಥೆ ವೈಜ್ಞಾನಿಕ ಕ್ರಿಯೆಗಳಿಂದ ಕೂಡಿದ್ದ, ಆ ಕಂಥೆಯಲ್ಲಿ ಅರಗು, ರಾಳ, ಇಂಗಳೀಕ, ಶಿಲಾರಸ, ರುಮಾಮಸ್ತಕ ಸಾವಿರಾಂಜನ, ಸ್ರೋತೋ ಅಂಜನ, ನೀಲಾಂಜನ, ಪುಷ್ಪಾಂಜನ, ರಸಾಂಜನ, ಗೇರು ಎಣ್ಣೆ ಮತ್ತು ತುಪ್ಪದ ಕಾಡಿಗೆ. ಇವೆಲ್ಲ ಕಾರ್ಬನ್‌ಯುಕ್ತವಾದವು. ಹಾಗೂ ಕ್ಷಾರೀಯ ವಸ್ತುಗಳು. ಕಾರ್ಬನ್ ಕಣದಲ್ಲಿ ಹೆಚ್ಚು ಶಕ್ತಿಯನ್ನು ಸಂಗ್ರಹ ಮಾಡಿಕೊಳ್ಳುವಂತಹ ಶಕ್ತಿಯಿದೆ. ಆ ವಸ್ತುಗಳೆಲ್ಲವೂ ಚೈತನ್ಯಮಯವಾದವುಗಳು. ಅವುಗಳಲ್ಲಿನ ಅಂಜನಗಳು ಕಣ್ಣಿಗೆ ಕಾಂತಿಯನ್ನು ಅಂದರೆ ಚೈತನ್ಯವನ್ನು ನೀಡಿ ತಂಪನ್ನು ಕೊಡುವವುಗಳಾಗಿವೆ. ಅಲ್ಲದೆ ಆ ವಸ್ತುಗಳು ಭಯಾನಕ ರೋಗಗಳನ್ನು ನಿವಾರಿಸುವಂತಹ ಶಕ್ತಿಯುಳ್ಳವುಗಳಾಗಿವೆ. ಅವುಗಳು ಆಯುರ್ವೇದ ಸಿದ್ಧಾಂತದ ಔಷಧೀಯ ಗುಣಗಳನ್ನು ಹೊಂದಿರುವವು.

ಈ ಇಷ್ಟಲಿಂಗದ ಹಾಗೂ ಇಷ್ಟಲಿಂಗ ಪೂಜೆಯ ಬಗ್ಗೆ ಶಿವಶರಣ ವೈದ್ಯ ಸಂಗಣ್ಣ ತಮ್ಮ ವಚವೊಂದರಲ್ಲಿ ಹೀಗೆ ಹೇಳುತ್ತಾನೆ.

ನಾನಾರೋಗಂಗಳು ಬಂದು ದೇಹವ ಹಿಡಿದಲ್ಲಿ
ಶಿವಾರ್ಚನೆಯ ಬೆರಕೊಳ್ಳಿ
ಸಕಲ ಪುಷ್ಪಂಗಳಿಂದ ಶಿವಾರ್ಚನೆಯ ಮಾಡಿಕೊಳ್ಳಿ
ಇದರಿಂದ ರುಜೆ ದರ್ಪಂಗೆಡಗು
ಮರುಳ ಶಂಕರಪ್ರಿಯ ಸಿದ್ಧರಾಮೇಶ್ವರಲಿಂಗ ಸಾಕ್ಷಿಯಾಗಿ ॥

ಮತ್ತೊಬ್ಬ ಶಿವಶರಣ ಸಂಗಮೇಶ್ವರ ಅಪ್ಪಣ್ಣಗಳ ವಚನವೊಂದು ಹೀಗೆ ಹೇಳುತ್ತಿದೆ.

ಭವರೋಗ ಮೊದಲಾದ ಎಲ್ಲಾ ರೋಗಂಗಳಿಗೆಯೂ
ಶಿವಲಿಂಗ ಪ್ರಸಾದವಲ್ಲದೆ ಮತ್ತೇನು ಇಲ್ಲವೆಂಬುದು ವೇದ
ದ್ವಿಪಾದಿಗಳು ಚತು:ಪಾದಿಗಳು ಮೊದಲಾದ ಸಕಲ ಪ್ರಾಣಿಗಳೆಲ್ಲವಕ್ಕೆ
ಇದೇ ಔಷಧಿ ಎಂಬುದು ಯಜುರ್ವೇದ
'ಗಾಮೇಶ್ವಾಯ ಪುರುಹಾಯ ಭೇಷಜಂ ಅಥೋಲಿಸ್ಮಭ್ಯಂ

..................................................................

ಎಂದುದು ಶ್ರುತಿ ಬಸವಪ್ರಿಯ ಕೂಡಲಚನ್ನಸಂಗಾ ॥

ಪ್ರಕೃತಿಯಲ್ಲಿ ಕಾಣಬರುವ ಹಲವಾರು ಶಕ್ತಿಗಳನ್ನು ದೇವತೆಗಳ ರೂಪದಲ್ಲಿ ಪೂಜಿಸುವರು ಕೆಲವರು. ಅಲ್ಲದೆ ಕಾಲ್ಪನಿಕ ಪ್ರಾಣಿ ಪಕ್ಷಿಗಳನ್ನೂ ದೈವವೆಂದು ಪೂಜಿಸುವವರೂ ಹಲವರಿದ್ದಾರೆ. ಆದರೆ ವೀರಶೈವ ಧರ್ಮವು ಮಾತ್ರ ವಿಶ್ವದ ಅಖಂಡ ಶಕ್ತಿಯನ್ನೇ ಶಿವಲಿಂಗ ರೂಪದಲ್ಲಿ ಪೂಜಿಸುವವರಾಗಿದ್ದಾರೆ. ಈ ವೀರಶೈವ ಸಿದ್ಧಾಂತ ಲೌಕಿಕ ಅಲೌಕಿಕಗಳೆರಡರ ಸಮತೋಲನತೆಯಿಂದ ಕೂಡಿದ್ದು ಅದಕ್ಕೊಂದು ವಚನ ಹೀಗಿದೆ. "ಕೇಳಿರಯ್ಯಾ ನವಖಂಡ ಪೃಥ್ವಿಯೊಳಗೆ ಒಂದುಂಟು ಆ ಹುತ್ತಿನೊಳಗೊಂದು ಹಾವುಂಟು. ಹುತ್ತನು ಕೆಡಿಸದೆ, ಹಾವನ್ನು ಸಾಯ್ಸದೆ ರತ್ನವನ್ನು ವಶಪಡಿಸಿಕೊಂಡಾತನೇ ನಿಜ ವೀರಶೈವ" ಎಂತೆಂದು.

ನವದ್ವಾರಗಳಿಂದ ಕೂಡಿರುವ ಈ ಶರೀರವೇ ಒಂದು ಹುತ್ತ. ಈ ಹುತ್ತಿನೊಳಗೊಂದು ಹಾವುಂಟು. ಅಂದರೆ ಹಾವಿನಂತೆ ಚಲಿಸಬಹುದಂತಹ ಮನಸ್ಸು. ಅದು ಸದಾ ವಿಷಯಾದಿಗಳ ಕಡೆಗೆ ಚಲಿಸಿ ದು:ಖಕ್ಕೆ ಕಾರಣೀಭೂತವಾಗಿದೆ. ಆದರೆ ಜೀವಾತ್ಮನ ಗುರಿಸಾಧನೆಗೆ ಶರೀರವೂ ಬೇಕು, ಮನಸ್ಸೂ ಬೇಕು. ಇವೆರಡು ಉಳಿದುಕೊಂಡಿರಲು ವಿಷಯಾದಿಗಳ ಸಂಬಂಧವೂ ಇದ್ದಿರಬೇಕು. ಆದ್ದರಿಂದ ಸಾಧಕನಾದವನು ಹಠಕ್ಕೆ ಬಿದ್ದು, ಶರೀರ ಮತ್ತು ಮನಸ್ಸುಗಳನ್ನು ಕೆಡಿಸಿಕೊಳ್ಳುವುದಿಲ್ಲ. ಹಾಗೆ ಕೆಡಿಸಿಕೊಂಡರೆ ಸಾಧನೆಗೆ ಅವಕಾಶಗಳೇ ಇರುವುದಿಲ್ಲ. ಯಾಕೆಂದರೆ ಸಾಧನೆಯ ಪೂರ್ವ ಸಾವೇ ಸಂಭವಿಸುವುದು. ಇದನ್ನರಿತು ಲೌಕಿಕ ಅಲೌಕಿಕಗಳೆರಡನ್ನೂ ಸಮತೋಲನತೆಯಿಂದ ನಡೆಸಿಕೊಂಡು ಹೋಗುವವನೇ ನಿಜವಾದ ವೀರಶೈವನು.

ಬುದ್ಧ ರಾಜ್ಯ, ದೇಶ ಕೋಶಗಳನ್ನೆಲ್ಲ ಬಿಟ್ಟುಕೊಟ್ಟು ಬಂದು ಅಡವಿ ಸೇರಿದ. ಅದೆಷ್ಟೋ ವರ್ಷಗಳ ಪರ್ಯಂತರ ದೇಹದಂಡಿಸಿ ತಪಸ್ಸು ಮಾಡಿದ. ಆದರೆ ಶರೀರ ಸೊರಗಿತ್ತು. ಮನ ಬಳಲಿತ್ತೇ ಹೊರತು ತಪ:ಸಿದ್ಧಿಯಾಗಲಿಲ್ಲ, ಸತ್ಯದರ್ಶನ ಪಡೆಯಲಿಲ್ಲ.

ಅದೊಂದು ದಿನ ಬೆಳದಿಂಗಳೇ ತುಂಬಿರುವ ಪ್ರಶಾಂತವಾದ ವಾತಾವರಣ. ಆ ವನದಲ್ಲಿ ಆವರಿಸಿತ್ತು ಘನ ಮೌನ. ಆಗ ನಡೆದಿತ್ತು ಬಲತ್ಕಾರದ ಧ್ಯಾನ. ಆಗ ಆ ಸುಂದರ ಬೆಳದಿಂಗಳಿನಲ್ಲಿ ಕೆಲ ಹೆಣ್ಣು ಮಕ್ಕಳು ಹೊರಟಿದ್ದರು. ಆಗವರೆಲ್ಲ ಹೀಗೆ ಹಾಡುತ್ತಿದ್ದರು. (ಅವರು ಹಾಡುತ್ತಿದ್ದದು ಪಾಲಿ ಭಾಷೆಯಲ್ಲಿ) "ಎಲೈ ಮನುಷ್ಯರೇ ಈ ವೀಣೆಯ ತಂತಿಯನ್ನು

ಅತಿಯಾಗಿ ಬಿಗಿಯಬೇಡಿರಿ. ಬಿಗಿದರೆ ಆ ತಂತಿ ಹರಿದೀತು, ಹಾಗೇ ಆ ತಂತಿಯನ್ನು ಅತಿಯಾಗಿ ಸಡಿಲಿಸಬೇಡಿರಿ. ಅದರಿಂದ ಸಂಗೀತದ ಸುನಾದ ಹೊರಡದೆ ಹೋದೀತು" ಎಂತೆಂದು.

ಬುದ್ಧನಲ್ಲಿ ಅಂದಿನಿಂದ ಸತ್ಯದ ಬೆಳಕು ಮೂಡಿತು, ಧ್ಯಾನದ ಮಾರ್ಗ ಅರ್ಥವಾಯಿತು. ಅಂದಿನಿಂದ ನಿರ್ವಾಣದ ಕಟ್ಟಡಕ್ಕೆ ಸದ್ಭುನಾದಿ ಸ್ಥಾಪಿತಗೊಂಡಿತು.

ಅಂದಿನಿಂದ ಬುದ್ಧ ದೇಹ-ಮನಗಳೆರಡನ್ನು ಹಿತಮಿತವಾಗಿ ಶ್ರುತಿಗೊಳಿಸಿದ್ದ. ಅಂದರೆ ವಿಷಯಾದಿಗಳ ಮೇಲೆ ಮನಸ್ಸೆಂಬ ತಂತಿಯನ್ನು ಅತಿಯಾಗಿ ಬಿಟ್ಟುಕೊಡದೆ, ಹಾಗೆ ಅವುಗಳನ್ನು ಪರಿಪೂರ್ಣವಾಗಿ ತ್ಯಜಿಸದೆ ಸಮತೋಲನತೆಯಿಂದ ಧ್ಯಾನ ಮಾರ್ಗವನ್ನು ಪಾಲಿಸಿದ. ನಿರ್ವಾಣ ಸ್ಥಿತಿ ಹೊಂದಿದ.

ಮೂರ್ತಿಪೂಜೆಯನ್ನು ವಿರೋಧಿಸುವಂತಹ ಬೌದ್ಧ ಧರ್ಮದಲ್ಲಿಯೂ ಸಹ ಸದ್ಗುರುವಿನಿಂದ ದೀಕ್ಷೆ ಪಡೆಯಬೇಕೆಂಬ ಕಡ್ಡಾಯವಿದೆ. ಹಾಗೆ ದೀಕ್ಷೆ ಪಡೆದಂತಹ ವ್ಯಕ್ತಿಯು ನಿರಂತರವೂ (ಮರಣ ಪರ್ಯಂತರವೂ) ಗುರುಧರ್ಮ ಪರಿಪಾಲಿಸಬೇಕಾಗಿದೆ. ಹೀಗೆ ವೀರಶೈವರು ಗುರು ಕೊಟ್ಟ ಲಿಂಗವನ್ನು ಕ್ಷಣಕಾಲವೂ ಬಿಟ್ಟಿರಬಾರದು. ಪ್ರತಿದಿನ ಆ ಲಿಂಗ ಪೂಜೆಯನ್ನು ತ್ರಿಕಾಲವಲ್ಲದಿದ್ದರೂ ಏಕಕಾಲವಾದರೂ ಮಾಡಬೇಕಾಗುವುದು. ಜನನಾದಿ ಮರಣ ಪರ್ಯಂತರ ಇಷ್ಟಲಿಂಗವನ್ನು ಬಿಟ್ಟಿರದಂತೆ ಸದಾ ದೇಹದ ಮೇಲೆ ಹೊತ್ತು ತಿರುಗುವುದೇ ಒಂದು ಮಹಾವ್ರತ. ಅಂದರೆ ಶಿರ ಇರುವ ಪರ್ಯಂತರ ಶರೀರದ ಮೇಲೆ ಲಿಂಗಧಾರಿಯಾಗಿರುವುದರಿಂದ ಈ ವ್ರತವನ್ನು ಶಿರೋವ್ರತವೆಂದು ಕರೆದಿರುವರು. ಈ ವ್ರತವನ್ನು ಚಾಚುತಪ್ಪದೆ ಪರಿಪಾಲಿಸುವವನೇ ಶಿರೋವ್ರತಿಯು.

# ಸಂಸ್ಕಾರತ್ ದ್ವಿಜಮುಚ್ಯತೇ

ಪ್ರಕೃತಿ ಮತ್ತು ಪ್ರಪಂಚ ಎರಡೂ ಒಂದೇ ಅರ್ಥದ ಪದಗಳು. ಆದರೂ ಮಾನವರು ನಡೆಸಿಕೊಂಡು ಹೋಗುವ ಸಂಸಾರಕ್ಕೆ 'ಪ್ರಪಂಚ' ಎಂದು ಕರೆಯುವುದುಂಟು. ಆದರೆ ಪ್ರಕೃತಿಯೆಂಬ ಪದ ಇಲ್ಲಿ ಹೊಂದಿಕೊಳ್ಳುವುದಿಲ್ಲ. ಆದ್ದರಿಂದ ನಾವಿಲ್ಲಿ ಈ ಎರಡು ಪದಗಳು ಒಂದೇ ಅರ್ಥದಿಂದ ಕೂಡಿರದಿದ್ದರೂ ಮೇಲೆ ತಿಳಿಸಿರುವ ಆಧಾರದ ಮೇಲೆ ಬೇರೆ ಬೇರೆಯಾಗಿಯೇ ನೋಡಬೇಕಾಗುವುದು.

ಪ್ರಕೃತಿಯಲ್ಲಿ ಬೀಜ ಬಿತ್ತುತ್ತೇವೆ. ಅಲ್ಲಿ ಆ ಬೀಜದ ಗುಣ ಹಾಗೂ ರೂಪಗಳುಳ್ಳ ಫಲವೇ ಬರುವುದು. ಆದರೆ ಮಾನವರು ನಡೆಸಿಕೊಂಡು ಹೋಗುವ ಪ್ರಪಂಚ (ಸಂಸಾರ)ದಲ್ಲಿ ಮಾತ್ರ ಹಾಗಾಗಲು ಸಾಧ್ಯವಿಲ್ಲ. ಅರ್ಥಾತ್ ತಂದೆಯೇ ಬೀಜ. ತಾಯಿಯೇ ಭೂಮಿ. ಆದ್ದರಿಂದ ತಂದೆಯಂತೆಯೇ ಮುಂದೆ ಮಕ್ಕಳು ಹುಟ್ಟಿಬರಲು ಸಾಧ್ಯವಿಲ್ಲ.

ಜಾರ್ಜ್ ಬರ್ನಾಡ್ ಷಾ ಎಂಬ ಫ್ರೆಂಚ್ ದೇಶದ ಮೇಧಾವಿ. ಆತನ ಬುದ್ಧಿವಂತಿಕೆಗೆ ಮರುಳಾಗಿದ್ದ ಓರ್ವ ನಟಿ, ಷಾರವರ ಬಳಿಗೊಮ್ಮೆ ಬಂದು, "ನಾನು ನಿಮ್ಮನ್ನು ಮನಸಾರೆ ಪ್ರೀತಿಸುತ್ತಿದ್ದೇನೆ. ಅದಕ್ಕೆ ನಿಮ್ಮನ್ನು ಮದುವೆಯಾಗಲು ಇಚ್ಛಿಸಿದ್ದೇನೆ" ಎಂದು ತನ್ನ ಮನದ ಬಯಕೆಯನ್ನು ಆತನಲ್ಲಿ ವ್ಯಕ್ತಪಡಿಸಿದಳು.

ಬರ್ನಾಡ್ ಷಾರವರಿಗೆ ಆಶ್ಚರ್ಯವಾಯಿತಲ್ಲದೆ ಕುತೂಹಲವೂ ಹುಟ್ಟಿಬಂತು. ಆದ್ದರಿಂದವರು "ಹೌದು ನೀನು ನನ್ನನ್ನು ಏಕೆ ಮಾದುವೆಯಾಗಲು ಬಯಸಿರುವೆ? ಅದರ ಉದ್ದೇಶವಾದರೂ ಏನು?" ಎಂದು ಕೇಳಿದರು.

ನಟಿಯಾಗ, "ನಾನೀ ನಿರ್ಧಾರಕ್ಕೆ ಬರಲು ಸರಳ ಕಾರಣವೊಂದಿದೆ. ನಾನು ಅತ್ಯಂತ ಸುಂದರಿ. ನನ್ನ ದೇಹದ ಎಲ್ಲಾ ಭಾಗಗಳು ಅಂದರೆ ಮುಖ, ಕಣ್ಣು, ಮೂಗು, ತುಟಿ ಶರೀರ ಹೀಗೆ ಎಲ್ಲವೂ ಬಹಳ ಸೌಂದರ್ಯದಿಂದಿವೆ. ಹಾಗೆ ಈ ನಾಡಿನಲ್ಲಿ ಯಾರಿಗೂ ಇರದಂತಹ ವಿಶೇಷ ಬುದ್ಧಿವಂತಿಕೆ ನಿಮ್ಮಲ್ಲಿದೆ. ಆದ್ದರಿಂದ ನಾವಿಬ್ಬರೂ ಮದುವೆಯಾದರೆ ಮುಂದೆ ನಮ್ಮಿಬ್ಬರಿಗೆ ಹುಟ್ಟಿಬರುವಂತಹ ಮಕ್ಕಳಲ್ಲಿ ನನ್ನ ಸೌಂದರ್ಯ ಹಾಗೂ ನಿಮ್ಮ ಬುದ್ಧಿಶಕ್ತಿ ತುಂಬಿ ತುಳುಕುವುದು. ಮುಂದೆ ಅವರನ್ನು ಮೀರುಸುವವರಾರೂ ಇರಲಿಕ್ಕಿಲ್ಲ. ಈ ಕಾರಣಕ್ಕಾಗಿಯೇ ನಾನು ನಿಮ್ಮನ್ನು ಮದುವೆಯಾಗಲು ಬಯಸಿರುವುದು" ಎಂದು ಹೇಳಿದಳು.

ಬರ್ನಾಡ್ ಷಾ ನಗುತ್ತಾ, "ನೀ ಹೇಳುವುದನ್ನು ಕೇಳಿದರೆ ನನಗೇಕೋ ಹೆದರಿಕೆಯಾಗುತ್ತಿದೆ. ಅದ್ಯಾಕೆಂದರೆ ನಮಗೆ ಹುಟ್ಟಿ ಬರುವಂತಹ ಮಕ್ಕಳು ಹೀಗೂ ಯಾಕಾಗಿರಬಾರದು? ನನ್ನ ಸೌಂದರ್ಯ, ನಿನ್ನ ಬುದ್ಧಿಶಕ್ತಿ ಅವರುಗಳಲ್ಲಿ ಬಂದರೆ ಆಗೇನು ಮಾಡುವುದು" ಎಂದು ಪ್ರಶ್ನಿಸಿದ್ದ. ಅದಕ್ಕವಳಲ್ಲಿ ಉತ್ತರವಿರಲಿಲ್ಲ.

ಇದಲ್ಲವೇ ಮಾನವರ ಪ್ರಪಂಚಕ್ಕೂ ಬಾಹ್ಯ ಪ್ರಕೃತಿಗೂ ಇರುವಂತಹ ವ್ಯತ್ಯಾಸವು.

ಪ್ರಕೃತಿಯಲ್ಲಿ ಹುಟ್ಟಿ ಬರುವವುಗಳಿಗೆ, ಬೆಳೆಯುವ ಪೂರ್ವ ಹೆಚ್ಚಿಚ್ಚು ಸಂಸ್ಕಾರಾದಿ ಕ್ರಿಯೆಗಳನ್ನು ಮಾಡಬೇಕಾಗುತ್ತದೆ. ಆದರೆ ಮಾನವರ ಪ್ರಪಂಚ (ಸಂಸಾರ)ದಿಂದ ಹುಟ್ಟಿ ಬಂದವರಿಗೆ ಹುಟ್ಟಿದ ನಂತರ ಹೆಚ್ಚುಚ್ಚು ಸಂಸ್ಕಾರಾದಿ ಕ್ರಿಯೆಗಳನ್ನು ಮಾಡಬೇಕಾಗುವುದು. ಇದನ್ನೇ ಶಾಸ್ತ್ರಗಳಲ್ಲಿ "ಜನ್ಮನಾ ಜಾಯತೇ ಶೂದ್ರ: ಸಂಸ್ಕಾರಾತ್ ದ್ವಿಜಮುಚ್ಯತೇ" ಎಂದಿರುವುದು. ಅಂದರೆ ಹುಟ್ಟಿನಿಂದ ಎಲ್ಲರೂ ಶೂದ್ರರೇ (ಅಂದರೆ ದು:ಖಿಗಳೇ) ಮುಂದೆ ಸಂಸ್ಕಾರಾದಿ ಕ್ರಿಯೆಗಳಿಂದ ಎರಡನೆಯ ಜನ್ಮ ಪಡೆಯುವವರು. (ಅಂದರೆ ದು:ಖಮುಕ್ತರಾಗುವರು).

"ಗುಣದಾನಂ ದೋಷಾಪಹರಣಂ ಇತಿ ಸಂಸ್ಕಾರ:" ದು:ಖಕ್ಕೆ ಕಾರಣೀಭೂತವಾದ ದೋಷಗಳನ್ನು ನಾಶಗೊಳಿಸಿ, ಆನಂದವನ್ನೇ ಪ್ರಾಪ್ತಿ ಮಾಡುವಂತಹ ಗುಣಾದಿಗಳನ್ನು ನೀಡುವಂಥದ್ದೇ ಸಂಸ್ಕಾರವು. "ಶಿವೋಽಹಂ" ಅಥವಾ "ಅಹಂ ಬ್ರಹ್ಮಾಸ್ಮಿ" ಭಾವವೇ ಆನಂದದಾಯಕವಾದದ್ದು. ಅಂದರೆ ಶಿವಜ್ಞಾನ ಅಥವಾ ಬ್ರಹ್ಮಜ್ಞಾನವನ್ನು ಪ್ರಾಪ್ತಿ ಮಾಡಿಕೊಳ್ಳುವುದು, ಇದನ್ನೇ ಬ್ರಹ್ಮೋಪನಿಷತ್ತಿನಲ್ಲಿ ಹೀಗೆ ಹೇಳಿದೆ.

ಜನ್ಮನಾ ಜಾಯೆತೇ ಶೂದ್ರಾ: ಕರ್ಮಣಾ ಜಾಯತೇ ದ್ವಿಜಾ: ।
ವೇದಪಾಠೇನ ವಿಪ್ರದ್ಯಾತ್ ಬ್ರಹ್ಮಜ್ಞಾನಾಂತು ಬ್ರಾಹ್ಮಣ: ॥

ಯಾರೊಬ್ಬರು ಹುಟ್ಟಿನಿಂದ ಶೂದ್ರರಾಗಿ ಬಂದಿರುತ್ತಾರೆ. ಮುಂದವರು ಸಂಸ್ಕಾರಾದಿ ಕರ್ಮಗಳಿಂದ ದ್ವಿಜರೆನಿಸಿಕೊಳ್ಳುವರು. (ಅಂದರೆ ಎರಡನೆಯ ಜನ್ಮವು ಅಜ್ಞಾನದ ಅಥವಾ ದು:ಖದ ಹುಟ್ಟು ಅಡಗಿ, ಜ್ಞಾನದ ಹುಟ್ಟು ಪ್ರಾಪ್ತಿಯಾಗುವುದು) ಮತ್ತೆ ವೇದಾಧ್ಯನಗಳಿಂದ ವಿಪ್ರರೆನಿಸಿಕೊಳ್ಳುವರು. (ಬ್ರಾಹ್ಮಣರಲ್ಲಿ ಮೂರು ವಿಧ. ಒಂದು ವೇಷ ಬ್ರಾಹ್ಮಣ, ಎರಡು ಕರ್ಮ ಬ್ರಾಹ್ಮಣ, ಮೂರು ಸಾತ್ವಿಕ ಬ್ರಾಹ್ಮಣ. ಇದರಲ್ಲಿ ಎರಡನೆಯ ಬ್ರಾಹ್ಮಣರೆನಿಸಿಕೊಳ್ಳುವವರು ಅರ್ಥಾತ್ ವೃತ್ತಿ ಬ್ರಾಹ್ಮಣ್ಯವು) ಕೊನೆಯದಾಗಿ ಬ್ರಹ್ಮ (ಶಿವ) ಜ್ಞಾನದಿಂದ ಮಾತ್ರವೇ ಬ್ರಾಹ್ಮಣರೆನಿಸಿಕೊಳ್ಳುವರು.

ದ್ವಿಜತ್ವಕ್ಕಿಂತ ವಿಪ್ರತ್ವ ದೊಡ್ಡದು. ವಿಪ್ರತ್ವಕ್ಕಿಂತ ಬ್ರಾಹ್ಮಣ್ಯ ದೊಡ್ಡದು. ಅರ್ಥಾತ್ ಬ್ರಾಹ್ಮಣರೆಂಬುದು ಲೌಕಿಕದ ದೃಷ್ಟಿಕೋನದಂತೆ. ಜಾತಿ ಸೂಚಕ ಪದವಲ್ಲ. ಸ್ವಪ್ರಯತ್ನದಿಂದ ಸ್ವಸಾಧನೆಗಳ ಮೂಲಕ ಸಂಪಾದಿಸಿಕೊಳ್ಳುವಂತಹ ಮಹಾನ್ ಶಕ್ತಿಯದು. ವ್ಯಕ್ತಿಯ ಹುಟ್ಟಿನ ಮೂಲದಿಂದ ಅಳೆಯುವಂತಹದ್ದಲ್ಲ. ವ್ಯಕ್ತಿಯು ಸಂಸ್ಕಾರಾದಿಗಳ ಮೂಲಕ ಸಂಪಾದಿಸಿಕೊಂಡಿರುವ ಶಕ್ತಿಯಿಂದ ತಿಳಿಯುವಂಥದ್ದು.

ಬ್ರಾಹ್ಮಣರ ಗೋತ್ರ ಪುರುಷರು (ಅಂದರೆ ಅವರ ವಂಶದ ಮೂಲ ಪುರುಷರು) ಎಂದೆನಿಸಿಕೊಳ್ಳುವ ಹಲವಾರು ಋಷಿಮುನಿಗಳು ಹುಟ್ಟಿ ಬಂದದ್ದಾದರೂ ಎಲ್ಲಿಂದ? ಯಾವ್ಯಾವ ಯೋನಿಗಳಿಂದ? ಈ ಬಗ್ಗೆ ಮನುಮಹರ್ಷಿ ಸ್ಮೃತಿಯಲ್ಲಿ ಹೀಗೆ ಹೇಳುತ್ತಾನೆ.

ಋಷ್ಯಶೃಂಗೋ ಮೃಗೋಜಾತಿ: । ಕೌಶಿಕೋ ಗಾದಿನಂದನ: ॥
ಜಂಬುಕೋ ಜಂಬುಕೋತ್ಪತ್ತಿ । ಗೌತಮೋಗೌತ ಸಂಭವ: ॥
ವಾಲ್ಮೀಕೋ ವಲ್ಮೀಕೋತ್ಪತ್ತಿ । ಅಗಸ್ತೋ ಕುಂಭ ಸಂಭವ: ॥

ವ್ಯಾಸೋ ಲಬ್ಧಕ ಸಂಭೂತೋ । ವಶಿಷ್ಟೋಪ್ವೂರ್ವಸಿ ಸುತ: ॥
ನಾರದೋ ರಜಕೀ ಪುತ್ರ: । ಕೌಂಡಿನ್ಯೋ ಮುಂಡಕೀ ಸುತ: ॥
ಮತಂಗಸ್ಯ ಮತಂಗಸ್ಯಾತ್ । ಮಾಂಡವ್ಯ ಮಂಡಕೀ ಸುತ: ॥
ಸಾಂಖ್ಯಾಸಪ್ಸರ ಸಂಭೂತೋ । ಗರ್ಗೇಯೋ ಗಾರ್ಧಪ ಸುತ: ॥
ಶುನಕೀ ಗರ್ಭ ಸಂಭೂತೋ ಶೌನಕಾದಿ ಮಹಾಋಷೇ ॥ (ಮನುಸ್ಮೃತಿ)

ವಿಶ್ವಾಮಿತ್ರನು ಕ್ಷತ್ರಿಯ ಕಾಲದಲ್ಲಿಯೂ, ಜಂಬುಕ ಮುನಿಯು ನರಿಯ ಯೋನಿಯಲ್ಲಿಯೂ, ಗೌತಮ ಮಹರ್ಷಿ ಮೊಲದ ಯೋನಿಯಲ್ಲಿಯೂ, ವಾಲ್ಮೀಕಿ ಹುತ್ತದಿಂದಲೂ, ಅಗಸ್ತ್ಯ ಕುಂಭದಿಂದಲೂ, ಬಾದರಾಯಣ (ವ್ಯಾಸ) ಅಂಬಿಗರ ಕುಲದಲ್ಲಿಯೂ, ವಶಿಷ್ಟ ದೇವಲೋಕದಲ್ಲಿನ ವೇಶ್ಯ ಓರ್ವಳ ಯೋನಿಯಿಂದಲೂ, ನಾರದನು ಮಡಿವಾಳ ಸ್ತ್ರೀಯ ಯೋನಿಯಿಂದಲೂ, ಕೌಂಡಿವ್ಯನು ಕ್ಷೌರಿಕರ ಸ್ತ್ರೀಯೋರ್ವಳ ಯೋನಿಯಿಂದಲೂ, ಮತಂಗನು ಕ್ಷೌರಿಕನೊಬ್ಬನ ಸಂಪರ್ಕ ಹೊಂದಿದ್ದ ಬ್ರಾಹ್ಮಣ ಸ್ತ್ರೀಯೋರ್ವಳ ಯೋನಿಯಿಂದಲೂ, ಮಾಂಡವ್ಯನು ಕಪ್ಪೆಯ ಯೋನಿಯಿಂದಲೂ, ಸಾಂಖ್ಯಮಹಾಮುನಿಯು ಚಾಂಡಾಲ ಸ್ತ್ರೀಯೋರ್ವಳ ಯೋನಿಯಿಂದಲೂ, ಗಾರ್ಗೇಯನು ಗಾರ್ಧಪ (ಕತ್ತೆ) ಯೋನಿಯಿಂದಲೂ, ಶೌನಕ ಮಹರ್ಷಿಗಳು ನಾಯಿಯ ಯೋನಿಯಿಂದಲೂ ಹೀಗೆ ಇವರೆಲ್ಲರೂ ಹುಟ್ಟಿ ಬಂದು ಮುಂದವರು ಬ್ರಾಹ್ಮಣ್ಯವನ್ನು ಸಂಪಾದಿಸಿಕೊಂಡರು ಎಂತೆಂಬುದಾಗಿದೆ ಮನುಸ್ಮೃತಿಯ ಸಾರವು. ಇದನ್ನೇ ಮಾದಾರ ಚನ್ನಯ್ಯ ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ.

ಸಾಂಖ್ಯಸ್ವಪಚ ಅಗಸ್ತ್ಯ ಕಬಿಲ, ದುರ್ವಾಸ ಮಚ್ಚಿಗ
ಧದೀಚ ಕೀಲಗ, ಕಸ್ಯಪ ಕಮ್ಮಾರ, ರೋಮಜ ಕಂಚುಗಾರ
ಕೌಂಡಿಲ್ಯ ನಾವಿದನೆಂಬುದಾನರಿಯ
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ
ಇಂತೀ ಸಪ್ತಋಷಿಗಳೆಲ್ಲರೂ ಸತ್ಯದಿಂದ ಮುಕ್ತರಾದುದನರಿಯರೆ.... ॥

ಸಪ್ತಋಷಿಗಳೆಲ್ಲರೂ ಮೊದಲು ಹುಟ್ಟಿ ಬಂದದ್ದು ನಾವುಗಳು ಹೇಳುತ್ತಿರುವಂತಹ ಕೀಳು ಕುಲಗಳಿಂದಲೇ. ಮುಂದವರು ಬ್ರಹ್ಮಜ್ಞಾನಿಗಳಾಗಿ ಬ್ರಾಹ್ಮಣರೆನಿಸಿಕೊಂಡಿದ್ದು.

ವಿಶ್ವಾಮಿತ್ರ ಗಾಧಿಪುತ್ರ ಕ್ಷತ್ರಿಯ. ಒಮ್ಮೆ ಈತ ತನ್ನ ಅತಿ ದೊಡ್ಡ ಸೇನೆಯೊಂದಿಗೆ ವಶಿಷ್ಠರ ಆಶ್ರಮಕ್ಕೆ ಬರುವನು. ವಶಿಷ್ಠರಲ್ಲಿ ಕಾಮಧೇನುವಿನ ಸಂತಾನವೇ ಆದಂತಹ ನಂದಿನಿಯೆಂಬ ಹಸು ಇತ್ತು. ಅದರ ಸಹಾಯದಿಂದ ತರತರಹದ ಭೋಜನಾದಿಗಳನ್ನು ಮಾಡಿಸಿ ರತ್ನಾದಿ ವಸ್ತ್ರಾಭೂಷಣಗಳನ್ನೂ ಸಹ ವಿಶ್ವಾಮಿತ್ರಾದಿ ಸಮಸ್ತ ಸೈನ್ಯಕ್ಕೆ ಕೊಟ್ಟು ಉಪಚರಿಸಿದರು.

ಇದನ್ನು ಕಂಡ ವಿಶ್ವಾಮಿತ್ರನ ಮನಸ್ಸು ನಂದಿನಿಯೆಂಬ ಹಸುವಿನ ಮೇಲೆ ಆಕರ್ಷಿತವಾಯಿತು. ವಶಿಷ್ಠರಲ್ಲಿ ಆ ಗೋವನ್ನು ತನಗೆ ಕೊಡಿರೆಂದು ಕೇಳಿಕೊಂಡನು. ಆಗದಕ್ಕೆ ವಶಿಷ್ಠರು "ನಾನು ಈ ಗೋವನ್ನು ನಾನಾ ದೇವತೆಗಳ ಮತ್ತು ಅತಿಥಿಗಳ ಸೇವೆಗಾಗಿಯೂ ಮತ್ತು ಯಜ್ಞಾದಿ ಕಾರ್ಯಗಳಿಗಾಗಿಯೂ ಮೀಸಲಿರಿಸಿಕೊಂಡಿದ್ದೇನೆ. ಆದ್ದರಿಂದ ಈ ಹಸುವನ್ನು

ಕೊಡಲಾಗುವುದಿಲ್ಲ” ಎಂದು ಹೇಳಿದರು.

ವಶಿಷ್ಠರ ಮಾತು ಕೇಳಿದ ವಿಶ್ವಾಮಿತ್ರನಿಗೆ ಸಹಿಸಿಕೊಳ್ಳಲಾಗಲಿಲ್ಲ. ತಾನು ರಾಜನೆಂಬ ದುರಹಂಕಾರ ಜೊತೆಗೆ ಸೇನಾಬಲ ಹಾಗೂ ಶಸ್ತ್ರಾಸ್ತ್ರಗಳ ಬಲದ ಗರ್ವವೂ ತಾಂಡವವಾಡಿತ್ತು. ಆದ್ದರಿಂದ ವಶಿಷ್ಠರ ಮಾತನ್ನು ಲೆಕ್ಕಿಸದೆ ಬಲತ್ಕಾರದಿಂದ ಆ ನಂದಿನಿಯನ್ನು ಎಳೆದೊಯ್ಯಲು ಸೇನೆಗೆ ಆಜ್ಞಾಪಿಸಿದನು. ಅವರುಗಳು ಬಲತ್ಕಾರದಿಂದ ಎಳೆದಾಡಿದುದರಿಂದ ದು:ಖಿಸುತ್ತಾ ನಂದಿನಿಯು ವಶಿಷ್ಠರಿಗೆ ಹೀಗೆ ಹೇಳಿತು. “ಹೇ ಭಗವಂತನ ಸ್ವರೂಪನೇ, ನಿರ್ದಯಿಗಳಾದ ಈ ವಿಶ್ವಾಮಿತ್ರನ ಸಿಪಾಯಿಗಳು ತುಂಬಾ ಕ್ರೂರಿಗಳಾಗಿ ಚಾವುಟ ದೊಣ್ಣೆಗಳಿಂದ ಹೊಡೆದು ಹಿಂಸಿಸುತ್ತಿದ್ದಾರೆ. ಇದನ್ನೆಲ್ಲಾ ನೀವು ನೋಡುತ್ತಿದ್ದರೂ ಕಂಡುಕಾಣದಂತಿದ್ದೀರಲ್ಲ? ಇದು ಸರಿಯೇ” ಎಂದು ಹೇಳಿತು. ವಶಿಷ್ಠರು ಅದಕ್ಕುತ್ತರವಾಗಿ

ಕ್ಷತ್ರಿಯಾಣಾಂ ಬಲಂ ತೇಜೋ ಬ್ರಾಹ್ಮಣಾನಾಂ ಕ್ಷಮಾಬಲಮ್ ।
ಕ್ಷಮಾ ಮಾಂ ಭಜತೇಯಸ್ಮಾದ್ಗಮ್ಯತಾಂ ಯದಿರೋಚತೇ ॥

ಅಂದರೆ “ಕ್ಷತ್ರಿಯರ ಬಲವು ತೇಜವುಳ್ಳದ್ದು, ಬ್ರಾಹ್ಮಣರ ಬಲವು ಕ್ಷಮೆಯುಳ್ಳದ್ದು. ಆದ್ದರಿಂದ ನಾನು ಕ್ಷಮೆಯನ್ನು ಬಿಡಲಾರೆ. ನಿನಗೆ ಇಚ್ಛೆ ಇದ್ದರೆ ಹೊರಟು ಹೋಗು” ಎಂದು ಹೇಳಿದರು.

ನಂದಿನಿಯು, “ಒಂದು ವೇಳೆ ನೀನು ತ್ಯಾಗ ಮಾಡಿಲ್ಲವೆಂದಾದರೆ ಯಾರೊಬ್ಬರೂ ನನ್ನನ್ನು ಬಲವಂತವಾಗಿ ಎಳೆದುಕೊಂಡು ಹೋಗಲು ಸಾಧ್ಯವಿಲ್ಲ” ಎಂದು ಹೇಳಿತು.

ಅದಕ್ಕುತ್ತರವಾಗಿ, “ನಾನು ತ್ಯಾಗ ಮಾಡಿರುವುದಿಲ್ಲ. ನೀನು ಇರುವುದಾದರೆ ಇದ್ದು ಬಿಡು” ಎಂದು ವಶಿಷ್ಠರು ಹೇಳಿದರಷ್ಟೇ. ಕೂಡಲೆ ನಂದಿನಿಯು ರೌದ್ರರೂಪವನ್ನು ತಾಳಿ ತನ್ನ ಬಾಲದಿಂದ ಬೆಂಕಿಯ ಮಳೆಯನ್ನೇ ಸುರಿಸಿತು. ಮತ್ತಲ್ಲದೆ ಅದೇ ಬಾಲದ ಮೂಲಕ ಅನೇಕ ಮ್ಲೇಂಛ (ಕೀಳು) ಜಾತಿಗಳನ್ನು ಉತ್ಪತ್ತಿ ಮಾಡಿತು. ಇದನ್ನು ಕಂಡ ವಿಶ್ವಾಮಿತ್ರನ ಸೈನ್ಯ ಚೆಲ್ಲಾಪಿಲ್ಲಿಯಾಗಿ ಓಡಿತು. ವಿಶ್ವಾಮಿತ್ರನಿಗೆ ತನ್ನನ್ನು ರಕ್ಷಿಸುವವರಾರೂ ಇಲ್ಲದ್ದು ಕಂಡು ಬಂತು. ಆಗ ತುಂಬ ಆಶ್ಚರ್ಯಚಕಿತನಾಗಿ ಹೇಳುತ್ತಾನೆ ಹೀಗೆ,

ದಿಗ್ಬಲಂ ಕ್ಷತ್ರಿಯ ಬಲಂ ಬ್ರಹ್ಮತೇಜೋ ಬಲಂ ಬಲಮ್ ।

“ಕ್ಷತ್ರಿಯರ ಈ ಬಲಕ್ಕೆ ಧಿಕ್ಕಾರವಿರಲಿ, ಬ್ರಾಹ್ಮಣ ತೇಜದ ಬಲವೇ ನಿಜವಾದ ಬಲವು” ಎಂಬುದಾಗಿ. ಇದಾದ ನಂತರ ವಶಿಷ್ಠರ ಮೇಲೆ ಹಗೆ ಸಾಧಿಸುತ್ತಾನೆ. ಮುಂದೆ ವಶಿಷ್ಠರ ಎಲ್ಲಾ ಮಕ್ಕಳನ್ನು ಕೊಂದು ಹಾಕುತ್ತಾನೆ. ಇಷ್ಟಾದರೂ ವಶಿಷ್ಠರು ವಿಶ್ವಾಮಿತ್ರರ ಮೇಲೆ ಸೇಡು ತೀರಿಸಿಕೊಳ್ಳುವ ಪ್ರಯತ್ನ ಮಾಡುವುದಿಲ್ಲ.

ವಿಶ್ವಾಮಿತ್ರನು ಮುಂದೆ ಬ್ರಹ್ಮರ್ಷಿ ಎನಿಸಿಕೊಳ್ಳಲು ಸಾವಿರಾರು ವರ್ಷ ತಪಸ್ಸು ಮಾಡುತ್ತಾನೆ. ಆ ತಪಸ್ಸಿನ ಫಲದಿಂದ ಕ್ರಮಶ: ರಾಜರ್ಷಿ, ಮಹರ್ಷಿ ಪದವಿಯನ್ನು ಪ್ರಾಪ್ತಿ ಮಾಡಿಕೊಳ್ಳುತ್ತಾನೆ. ಆದರೆ ಬ್ರಹ್ಮರ್ಷಿ ಎನಿಸಿಕೊಳ್ಳುವುದಿಲ್ಲ. ಮುಂದೊಮ್ಮೆ ದೇವಾನುದೇವತೆಗಳೂ

ವಿಶ್ವಾಮಿತ್ರರರನ್ನು ಬ್ರಹ್ಮರ್ಷಿ ಎಂದು ಒಪ್ಪಿಕೊಳ್ಳುತ್ತಾರೆ. ವಶಿಷ್ಠರು ಮಾತ್ರ ಒಪ್ಪಿಕೊಳ್ಳುವುದಿಲ್ಲ. ಮುಂದೊಮ್ಮೆ ಕ್ಷಮಾಶೀಲ ವಶಿಷ್ಠರೂ ಕೂಡಾ ವಿಶ್ವಾಮಿತ್ರರನ್ನು ಬ್ರಹ್ಮರ್ಷಿಗಳೆಂದು ಒಪ್ಪಿಕೊಳ್ಳುವರು.

ವಿಶ್ವಾಮಿತ್ರೋಽಪಿ ಧರ್ಮಾತ್ಮಾ ಲಬ್ಧ್ವಾ ಬ್ರಾಹ್ಮಣ್ಯಮುತ್ತಮಮ್ ।
ಪೂಜಯಾಮಾಸ ಬ್ರಹ್ಮರ್ಷಿ ವಶಿಷ್ಠ ಜಪತಾಂ ವರಮ್ ॥

ಎಂತೆಂಬ ಶ್ಲೋಕವೇ ಅದಕ್ಕೆ ಸಾಕ್ಷಿಯು. ಅಂದರೆ ಧರ್ಮಾತ್ಮರಾದ ವಿಶ್ವಾಮಿತ್ರರೂ ಕೂಡ ಉತ್ತಮ ಬ್ರಾಹ್ಮಣ್ಯ ಪದವನ್ನು ಪಡೆದರು. ಹಾಗೆ ಮುಂದೆ ಮಂತ್ರಜಪ ಮಾಡುವುದರಲ್ಲಿ ಶ್ರೇಷ್ಠ ಬ್ರಹ್ಮರ್ಷಿಗಳಾದ ಶ್ರೀ ವಶಿಷ್ಠರ ಪೂಜೆಯನ್ನೂ ಸಹ ಮಾಡಿದರು ಎಂತೆಂದುದಾಗಿದೆ.

ಹೀಗೆ ಬ್ರಾಹ್ಮಣ, ವೀರಶೈವ ಹಾಗೂ ಜಂಗಮ ಎಂತೆನ್ನುವವು ಜಾತಿಗೆ ಮೀಸಲಾದವುಗಳಲ್ಲ. ಅವುಗಳ ಅರ್ಹತೆ ಸಂಪಾದಿಸಿಕೊಳ್ಳಬೇಕು. ಈ ಜಗತ್ತಿನಲ್ಲಿ ಹುಟ್ಟಿಬಂದಿರುವ ಪ್ರತಿಯೊಬ್ಬರಿಗೂ ಈ ಅರ್ಹತೆ ಪಡೆಯುವ ಸ್ವಾತಂತ್ರವಿದೆ. ಇದನ್ನೇ ಶೈವ ಬ್ರಾಹ್ಮಣರಾದಂತಹ ಬಸವೇಶ್ವರರ ಅವರ ಜನಾಂಗದವರಲ್ಲಿ ಪ್ರಶ್ನೆ ಮಾಡಿದ್ದು. ತನ್ನಂತೆಯೂ ಸ್ತ್ರೀಯರಿಗೂ ದೀಕ್ಷೆಯನ್ನು ಕೊಡಿರಿ ಎಂದು ಕೇಳಿದ್ದು. ವಿವಾಹದ ಸಂದರ್ಭದಲ್ಲಿ ವರನಿಂದ ಪ್ರತಿಜ್ಞೆ ಮಾಡಿಸುವುದೇ ಒಂದು ರೀತಿ, ಮುಂದೆ ನಡೆದುಕೊಳ್ಳುವುದೇ ಬೇರೊಂದು ರೀತಿ!

ವಧುವಿನ ತಂದೆ ಕನ್ಯಾದಾನ ಮಾಡಿಕೊಡುವ ಪೂರ್ವದಲ್ಲಿ ವರನನ್ನು ಹೀಗೆ ಕೇಳುತ್ತಾನೆ. "ಧರ್ಮೇಚ, ಅರ್ಥೇಚ, ಕಾಮೇಚ, ನಾತಿಚರಿತ ವ್ಯಾತ್ವಯೇಯಂ" ಎಂದು. ಅಂದರೆ ಇನ್ನು ಮುಂದೆ ನೀನು ನನ್ನ ಮಗಳೊಂದಿಗೆ ಜೀವನ ನಡೆಸುವೆ. ಆಗ ನೀನು ಜೀವನಪೂರ್ತಿ ಧರ್ಮದ ವಿಷಯದಲ್ಲೂ, ಅರ್ಥದ (ಹಣ) ವಿಷಯದಲ್ಲಿಯೂ, ಕಾಮನೆ (ಆಸೆ)ಗಳ ವಿಷಯದಲ್ಲಿರೂ ಅವಳಿಗೆ ಮೋಸ ಮಾಡಿ (ಅತಿಕ್ರಮಿಸಿ) ನಡೆಯುವುದಿಲ್ಲವೆಂದು ಗುರುಹಿರಿಯರ ಹಾಗೂ ಸಮಸ್ತ ದೈವದ ಸಮ್ಮುಖದಲ್ಲಿ ಪ್ರತಿಜ್ಞೆಯನ್ನು ಮಾಡು ಎಂದು ಕೇಳುವನು. ಅದಕ್ಕುತ್ತರವಾಗಿ ವರನು 'ನಾತಿಚರಾಮಿ' ಎಂದು ಹೇಳುವನು. ಅಂದರೆ ಅತಿಕ್ರಮಿಸಿ ನಡೆಯುವುದಿಲ್ಲ ಎಂದು ಪ್ರತಿಜ್ಞೆ ಮಾಡುವನು.

ಧರ್ಮ-ಅರ್ಥ-ಕಾಮ-ಮೋಕ್ಷ ಈ ನಾಲ್ಕು ಮಾನವರ ಫಲಪುರುಷಾರ್ಥಗಳು. ಆದರಿಲ್ಲಿ ಮೋಕ್ಷದ ಪ್ರತಿಜ್ಞೆ ಮಾಡಿಸುವುದಿಲ್ಲ. ಯಾಕೆಂದರೆ ಮೋಕ್ಷ ಪಡೆಯುವಂಥದ್ದು, ಆಚರಿಸುವುಂತಹದ್ದಲ್ಲ. ಮೋಕ್ಷವೆಂಬುದು ದೊರೆಯಲು, ದೊರಕದಿರಲು ಆ ಧರ್ಮಾರ್ಥ ಕಾಮಗಳ ಸದ್ಬಳಕೆ ಹಾಗೂ ದುರ್ಬಳಕೆಗಳೇ ಕಾರಣವಾಗುವುವು. ಅದನ್ನೇ ಶಿವಶರಣರು "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವರ ಭಕ್ತಿ ಅಮೃತದೊಳು ವಿಷಕಾಣಾ ರಾಮನಾಥಾ" ಎಂದಿರುವುದು.

"ಅಮೃತಸ್ಯಲೋಕಂ ಸುಕೃತಸ್ಯ:" ಎಂಬಂತೆ ವೈವಾಹಿಕ ಜೀವನವನ್ನು ಪ್ರವೇಶಿಸುವಾಗ ವಧುವರರಿಬ್ಬರೂ ಅದರ ಉನ್ನತೋನ್ನತ ಮೌಲ್ಯಗಳನ್ನು ಮತ್ತದರ ಪರಿಶುದ್ಧತೆಯನ್ನರಿತು ಪ್ರವೇಶಿಸಬೇಕು. ಇದು ದೈವಿಕ ಸಂಬಂಧವಾದ ಅರಿವು. ಈ ಅರಿವಿನೊಂದಿಗೆ ಆಚಾರವೂ ಸಂಗಮವಾಗಬೇಕು.

ವೇದ ಕಾಲದಲ್ಲಿನ ಕೆಲವೊಂದು ಶ್ಲೋಕಗಳು ಹೀಗೆ ಕಂಡುಬಂದಿವೆ. "ಪುರಾಕಲ್ಪೇ ಕುಮಾರೀಣಾಂ ಮೌಂಜಿಬಂಧನಮಿಷ್ಯತೇ" ಹಾಗೂ "ಅಧ್ಯಾಪನಂಚ ವೇದಾಧ್ಯಾಯನಂಚ ಸಾವಿತ್ರೀ ವಚನಂ ತಥಾ" ಎಂತೆಂದು. ವಿದ್ಯಾರ್ಥಿನಿಯರೂ (ಬಾಲಕಿಯರೂ) ಸಹ ಗುರುಕುಲಕ್ಕೆ ಕಾಲಿಡುವ ಪೂರ್ವದಲ್ಲಿ ಉಪನಯನ ಮಾಡಿಸಿಕೊಳ್ಳಲೇ ಬೇಕಿತ್ತು.

ಉಪನಯನ ದೀಕ್ಷಿತಳಾದ ಕನ್ಯೆಯು ಗುರುಕುಲವನ್ನು ಸೇರಿದ ಮೇಲೆ ಎಲ್ಲರೊಡನೆ ಯಜ್ಞಕಾರ್ಯದಲ್ಲಿ ಭಾಗವಹಿಸುತ್ತಿದ್ದಳು. ಮಂತ್ರಪಠಣೆಯಲ್ಲಿ ಸಹ ಭಾಗಿಯಾಗುತ್ತಿದ್ದಳು ಎಂಬುದಕ್ಕೆ ಸಾಕ್ಷಿ "ಅತ್ರ ಸ್ತ್ರೀನಾಮಪಿ ಮಂತ್ರಪಾಠ:" ಹಾಗೂ "ಪುರುಷಾನಾಂ ಸ್ತ್ರೀನಾಂ ಸರ್ವೇಷಾಂ ಮಂತ್ರಪಾಠ:" ಇಲ್ಲಿ ಕಾಣಬಹುದಾಗಿದೆ. ಮತ್ತೊಂದು ವಿಚಿತ್ರ ಸಂಗತಿಯೆಂದರೆ, "ನಾರಿರ್ ಅವಿಧವಾ: ಸುಪತ್ನಿ:" ಹಾಗೂ "ನಾರೀ ನಿತ್ಯ ಸುಮಂಗಲಿ" ಎಂತೆಂಬುವು. ಹೆಣ್ಣು ವಿಧವೆಯಾಗಿದ್ದರೆ, ಸ್ವಇಚ್ಛೆಯಿಂದ ಮತ್ತೊಂದು ವಿವಾಹವಾಗಬಹುದು. ಆದ್ದರಿಂದ ಆಕೆ ನಿತ್ಯ ಸುಮಂಗಲೆಯು. ಇವು ವೇದಪಾಠಗಳಲ್ಲಿಯಷ್ಟೇ ಉಳಿದುಕೊಂಡವು. ಸಾಮಾಜಿಕ ಸುವ್ಯವಸ್ಥೆಯಲ್ಲಿ ಬಳಕೆಯಾಗಲಿಲ್ಲ.

ಮೂಲತ: ಶೈವ ಬ್ರಾಹ್ಮಣರಾದ ಬಸವಣ್ಣನವರಿಗೆ ಈ ಎಲ್ಲಾ ವಿಚಾರಗಳು ತಿಳಿದಿದ್ದವು. ಪ್ರಯುಕ್ತ ಧರ್ಮಕ್ಕೆ ವಿರುದ್ಧವಾಗಿ ನಡೆಯಲು ಅವರ ಮನಸ್ಸು ಒಪ್ಪಲಿಲ್ಲ. ಆದ್ದರಿಂದ ಅವರು ತಮ್ಮಂತೆ (ಗಂಡಸರಂತೆ) ಸ್ತ್ರೀಯರಿಗೂ ದೀಕ್ಷೆಯನ್ನು ಕೊಡಬೇಕೆಂದು ಹಠ ಹಿಡಿದರು. ಅದಕ್ಕೆ ಆ ಸಂಪ್ರದಾಯದವರಿಂದ ಮಾನ್ಯತೆ ಸಿಗಲಿಲ್ಲ. ಆದ್ದರಿಂದವರು ವೀರಶೈವ ಧರ್ಮದತ್ತ ಪ್ರಯಾಣ ಬೆಳೆಸಿದರು. ವೀರಶೈವ ಧರ್ಮದಲ್ಲಿ ಹೆಜ್ಜೆ ಇಟ್ಟ ಅವರು ಸ್ತ್ರೀ ಸಮಾನತೆಯ ಹಾಗೂ ಜಾತ್ಯಾತೀತದ ಬಗ್ಗೆ ದೊಡ್ಡ ಕ್ರಾಂತ್ರಿಯನ್ನೇ ಮಾಡಿದರು. ವೀರಶೈವ ಧರ್ಮದಲ್ಲಿ ಬಸವಾದಿ ಶಿವಶರಣ ಪೂರ್ವವೂ ಸಹ ಇಂತಹ ಕ್ರಾಂತಿಗಳು ಆಗಾಗ ನಡೆದುಕೊಂಡು ಬಂದಿವೆ. ರುದ್ರಕ್ರಾಂತಿ, ಭದ್ರಕಾಂತಿ, ರೇಣುಕಕ್ರಾಂತಿ, ನಂತರದಲ್ಲಿ ಬಸವಕ್ರಾಂತಿಗಳೆನ್ನುವವು ನಡೆದು ಬಂದಿರುವುದಾಗಿದೆ.

ದೀಕ್ಷಾಬದ್ಧ ಧರ್ಮಾಚರಣೆಗೆ ಲಿಂಗಭೇದ, ಜಾತಿಭೇದಗಳು ಇರುವುದಿಲ್ಲ. ಇಂತಹ ಭೇದಗಳನ್ನು ನಾವೇ ಹುಟ್ಟುಹಾಕಿಕೊಂಡಿರುವಂಥದ್ದು. ಆದರೆ ಆಚರಿಸುವವರು ನಾಟಕೀಯವಾಗಿ ನಡೆದುಕೊಳ್ಳಬಾರದು. ಸಾಧಕರಾಗಿರಬೇಕು. ಹೀಗೆ ನಡೆದು ತೋರಿಸದವರಿಗೇನೂ ಕಡಿಮೆಯಿಲ್ಲ. ಕಬೀರದಾಸ, ಶಿಶುನಾಳ ಷರೀಫರು, ಇಟ್ಟಗಿ ಭೀಮವ್ವ, ಸಜ್ಜಲಗುಡ್ಡದ ಶರಣಮ್ಮ ಹಾಗೂ ಬಸವಾದಿ ಶಿವಶರಣರ ಪಟ್ಟಿಯಲ್ಲಿ ಎಣಿಸಲಾರದಷ್ಟಿರುವರು.

ಹಾವಿನಾಳ ಕಲ್ಲಯ್ಯ, ಈ ಹಿಂದೆ ಆಗಿಹೋಗಿರುವಂತಹ ಒಬ್ಬ ದೊಡ್ಡ ಶಿವಶರಣ. ಈತನ ಹುಟ್ಟೂರು ಇಂಡಿ ತಾಲೂಕಿನ ಹಾವಿನಾಳು ಗ್ರಾಮ. ಇವರ ತಂದೆ ಶಿವನಯ್ಯ. ತಾಯಿ ಸೋಮವ್ವ. ಒಡವೆಗಳನ್ನು ತಯಾರು ಮಾಡುವ ಅಕ್ಕಸಾಲಿಗರಿವರು. ಕಲ್ಲಯ್ಯನಿಗೆ ಚಿಕ್ಕಂದಿನಿಂದಲೂ ಶಿವಧ್ಯಾನದ ಮೇಲೆ ಎಲ್ಲಿಲ್ಲದ ಆಸಕ್ತಿ. ಆದ್ದರಿಂದ ಆತ ಶಿವಧ್ಯಾನವೊಂದನ್ನು ಬಿಟ್ಟು ಮತ್ತೇನನ್ನೂ ಮಾಡುತ್ತಿರಲಿಲ್ಲ. ತಂದೆ ಶಿವನಯ್ಯನಿಗೊಮ್ಮೆ ರಾಜನ ಆಭರಣಗಳನ್ನು ಬಹಳ ಶೀಘ್ರವಾಗಿ ಮಾಡಿಕೊಡುವಂತಹ ಅವಸರವಿತ್ತು. ಮಗನನ್ನು ಸಹಾಯಕ್ಕಾಗಿ ಕರೆದ.

ಮಗನದಕ್ಕುತ್ತರವಾಗಿ, "ನಾನು ಶಿವಧ್ಯಾನವೊಂದನ್ನು ಬಿಟ್ಟು ಮತ್ತೇನನ್ನೂ ಮಾಡುವುದಿಲ್ಲ" ಎಂದು ಹೇಳಿಬಿಟ್ಟ. ತಂದೆಗೆ ಎಲ್ಲಿಲ್ಲದ ಸಿಟ್ಟು ಬಂತು. ಆಗ ಕಲ್ಲಯ್ಯನನ್ನು ಚೆನ್ನಾಗಿ ಹೊಡೆದುಬಿಟ್ಟ. ಹೊಡೆಸಿಕೊಂಡ ಕಲ್ಲಯ್ಯ ಮನೆಯನ್ನೇ ಬಿಟ್ಟು ಹೊರನಡೆದ.

ಮನೆ ಬಿಟ್ಟು ಬಂದ ಕಲ್ಲಯ್ಯ ತಮ್ಮೂರಿನಲ್ಲಿದ್ದ ಕಲ್ಲೀನಾಥೇಶ್ವರನ ಗುಡಿಗೆ ಬಂದು ಸಾಕ್ಷಾತ್ ಶಿವಲಿಂಗದ ಎದುರಿನಲ್ಲಿಗೇ ಹೊಟ್ಟೆಗೆ ಕತ್ತಿಯನ್ನು ತಿವಿದುಕೊಂಡ. ಅಷ್ಟರಲ್ಲಿ ಆಕಾಶ (ಅಶರೀರ) ವಾಣಿ! "ಕಲ್ಲಯ್ಯ ನೀನು ನನ್ನ ಭಕ್ತ. ನಿನ್ನನ್ನು ನಾನು ಸಾಯಲು ಬಿಡುವುದಿಲ್ಲ. ನೀನಿಗಿಂದೀಗಲೇ ರೇವಣಸಿದ್ಧರ ಮಗ ರುದ್ರಮುನಿ ಸ್ವಾಮಿಗಳವರಿಂದ ಇಷ್ಟಲಿಂಗ ದೀಕ್ಷೆ ತೆಗೆದುಕೋ ಹೋಗು" ಎಂದು ಹೇಳಿ ಕಳಿಸಿತು. ಅದರಂತೆಯೇ ರುದ್ರಮುನಿಸ್ವಾಮಿಗಳವರಿಂದ ದೀಕ್ಷೆ ತೆಗೆದುಕೊಂಡ. ಮುಂದೆ ಬೌದ್ಧರನ್ನು, ಜೈನರನ್ನು ಹಾಗೂ ವಿಪ್ರರನ್ನು ತನ್ನ ಜ್ಞಾನಬಲದಿಂದ ಸೋಲಿಸಿದ. ಇದರಿಂದಾಗಿ ವಿಪ್ರರಿಗೆ ಆತನ ಮೇಲೆ ದ್ವೇಷ ಮತ್ತು ಕ್ರೋಧವು ಹೆಚ್ಚಾಯಿತು. ಅದಕ್ಕಾಗಿ ಅವರೆಲ್ಲ ಸೇರಿ ಒಂದು ಸಂಚು ಮಾಡಿದರು.

ಕಲ್ಲಯ್ಯನೊಮ್ಮೆ ಕಲ್ಲಿನಾಥನ ದೇವಸ್ಥಾನದಲ್ಲಿ ಲಿಂಗಪೂಜೆ ಮಾಡುತ್ತಿರುವಾಗ ವಿಪ್ರರೆಲ್ಲರೂ ಸೇರಿ ಗರ್ಭಗುಡಿಯೊಳಗೆ ಒಂದು ಘಟಸರ್ಪವನ್ನು ಬಿಟ್ಟಿದ್ದರು. ಆ ಹಾವು ಕಲ್ಲಯ್ಯನನ್ನೇನೋ ಕಚ್ಚಿತು. ಆದರೆ ಕಲ್ಲಯ್ಯ ಸಾಯಲಿಲ್ಲ, ಬದಲಿಗೆ ಹಾವೇ ಸತ್ತಿತು. ಪುನಃ ಕಲ್ಲಯ್ಯನೇ ಆ ಹಾವಿಗೆ ಮರುಜೀವ ನೀಡಿದ. ವಿಪ್ರರಿಗೆ ಗರ್ವಭಂಗವಾಯಿತು. ಅಷ್ಟೇ ಅಲ್ಲ ಕಲ್ಲಯ್ಯನು ವಿಪ್ರರು ಓದುವಂತಹ ವೇದವನ್ನು ಒಂದು ನಾಯಿಯಿಂದ ಓದಿಸಿದ್ದ. ಮುಂದೆ ಈತ ಸೊಲ್ಲಾಪುರದಲ್ಲಿ ಲಿಂಗೈಕ್ಯನಾದನು. ಅದಕ್ಕೆ ಸಾಕ್ಷಿ ಆತನ ಸಮಾಧಿ ಸೊಲ್ಲಾಪುರ ಸಿದ್ಧರಾಮೇಶ್ವರ ದೇವಾಲಯದಲ್ಲಿ ಇರುವುದು. ಈತನು ಬರೆದಿರುವ ನೂರಾಮೂರು ವಚನಗಳು ಸಿಕ್ಕಿರುವುದಾಗಿ ಸಂಶೋಧಕರು ಹೇಳುತ್ತಾರೆ.

ಶ್ರೀ ವೀರಭದ್ರನ ಪರಮ ಅವತಾರಿ ಎಂದು ಹೇಳಿಸಿಕೊಳ್ಳುವ ಮಡಿವಾಳ ಮಾಚಿದೇವತಂದೆ. ಈತನ ಊರು ಬಿಜಾಪುರ ಜಿಲ್ಲೆ ಸಿಂದಗಿ ತಾಲೂಕು, ದೇವರಹಿಪ್ಪರಗಿ ಗ್ರಾಮ. ಈತನ ಕಾಯಕ ಬಟ್ಟೆ ಮಡಿ ಮಾಡಿಕೊಡುವುದು. ಈತನ ಕುಲಗುರು ಮಲ್ಲಿಕಾರ್ಜುನನಾದರೂ ಈತನ ಆರಾಧ್ಯ ದೈವ ಕಲ್ಲಿನಾಥ. ಈತನ ವಚನಗಳ ಅಂಕಿತನಾಮ 'ಕಲಿದೇವರದೇವ' ಎಂತೆಂಬುದಾಗಿದೆ.

ಶಿವಶರಣರ ಬಟ್ಟೆಗಳನ್ನಷ್ಟೇ ಮಡಿ ಮಾಡಿಕೊಡುವುದು ಈತನ ಕಾಯಕ. ಭವಿಗಳದ್ದಲ್ಲ. ಆದರೊಮ್ಮೆ ಭವಿಯಾದ ಬಿಜ್ಜಳನು ಈತನಿಂದ ಬಟ್ಟೆ ತೊಳೆಸಲೇಬೇಕೆಂಬ ಛಲ ಹೊಂದಿರುತ್ತಾನೆ. ಅದು ಸಾಧ್ಯವಾಗುವುದಿಲ್ಲ. ಇದರ ಆಕ್ರೋಶದ ಪ್ರತಿರೂಪವಾಗಿ ಬಿಜ್ಜಳನೊಮ್ಮೆ ಮಾಚಿದೇವನು ಬರುವ ದಾರಿಯ ಎದುರಿಗೆ ಮದವೇರಿದ ಮದ್ದಾನೆಯೊಂದನ್ನು ಕಳುಹಿಸುತ್ತಾನೆ. ಇದನ್ನರಿತ ಮಾಚಿದೇವತಂದೆ ಆ ಮದಿಸಿದ ಮದ್ದಾನೆಯ ಸೊಕ್ಕನ್ನು ಮರ್ಧನ ಮಾಡುತ್ತಾನೆ. ಅರ್ಥಾತ್ ಈತ ವೀರನಿಷ್ಠೆಗೆ ಹೆಸರಾದಾತ.

ಮಡಿವಳ ಮಾಚಿದೇವನು ಮೂರುಕೋಟಿ ಮುನ್ನೂರು ವಚನಗಳನ್ನು ಬರೆದಿರುವನೆಂದು ಸಿದ್ಧರಾಮ ಶಿವಯೋಗಿ ಹೇಳಿರುವನು. ಆದರೆ ನಮ್ಮಗಳ ದುರ್ದೈವವೇನೋ? ಆತನ ವಚನಗಳು ಕೇವಲ ಐದುನೂರಾಒಂದು ದೊರೆತಿವೆ ಎಂದು ಸಂಶೋಧಕರು ಹೇಳುತ್ತಾರೆ. ಆತನ ವೀರನಿಷ್ಠೆಯ ವಚನವೊಂದು ಹೀಗಿದೆ, "ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರ, ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರ..." ಎಂತೆಂದು.

ನುಲಿಯ ಚಂದಯ್ಯನೆಂಬೊಬ್ಬ ಮಹಾನ್ ಶಿವಶರಣ. ಈತನ ಊರು ಶಿವಣಗಿ. ಈತನ ಕಾಯಕ ಮೆದುವಾದ ಹುಲ್ಲಿನಿಂದ ಹಗ್ಗ (ನುಲಿ)ಗಳನ್ನು ತಯಾರು ಮಾಡುವುದು. 'ಲಿಂಗದ ಮುಖವೇ ಜಂಗಮ' ಎಂಬ ನಿಲುವು ಈತನದು. ಆದ್ದರಿಂದ ಈತ ತನ್ನ ಕಾಯಕದಿಂದ ಬಂದ ಸಂಪಾದನೆಯನ್ನೆಲ್ಲ ಜಂಗಮದಾಸೋಹಕ್ಕೆ ಬಳಸುತ್ತಿದ್ದ.

ಒಮ್ಮೆ ಈತ ನುಲಿ ತಯಾರಿಕೆಗೆಂದು ಹುಲ್ಲು ಕೊಯ್ಯುತ್ತಿದ್ದ. ಆಗ ಚಂದಯ್ಯನನ್ನು ಪರೀಕ್ಷಿಸಲೆಂದೇ ಆತನ ಇಷ್ಟಲಿಂಗವು ಕೊರಳಿಂದ ಕೆಳಗೆ ಬಿದ್ದಿತು. ಚಂದಯ್ಯನಿಗೆ ಅದರ ಮರ್ಮ ಅರ್ಥವಾಗಿರಬೇಕೇನೋ? ಆದ್ದರಿಂದ ಹಾಗೆ ಬಿದ್ದ ಲಿಂಗವನ್ನು ನೋಡಿದರೂ ಸಹ ಆ ಲಿಂಗವನ್ನು ಎತ್ತಿಕೊಳ್ಳದೆ ಮುಂದೆ ಹೋಗಿಬಿಟ್ಟ. ಆಗ ಆ ಲಿಂಗವೇ ಪುರುಷರೂಪವನ್ನು ತಾಳಿ "ನಾ ಬಂದೆನು ಚಂದಯ್ಯಾ" ಎಂದು ಹಿಂಬಾಲಿಸುವುದು. ಅದಕ್ಕೆ ಚಂದಯ್ಯನು "ಮೊದಲೇಕೆ ಹೋದಿರಿ? ಈಗೇಕೆ ಬಂದಿನೆಂದಿರಿ? ನಾನೊಲ್ಲೆ" ಎನುತ್ತಾ ಮುನ್ನಡೆದರು. ಮತ್ತೆ ಆ ಲಿಂಗವು "ನೀನೊಲ್ಲೆನೆಂದೊಡೆ ನಾ ಬಿಡೆನು ತನ್ನಾಣೆ" ಎಂದು ಹಿಂಬಾಲಿಸುವುದು. ಹೀಗೆ ಇಬ್ಬರೂ ಮಾತನಾಡುತ್ತಾ ಬಟ್ಟೆ ತೊಳೆಯುತ್ತಿದ್ದ ಮಾಚಿದೇವನಲ್ಲಿಗೆ ಬರುವರು.

ಮಾಚಿದೇವನೂ ಸಹ ಚಂದಯ್ಯನಿಗೆ ಬಹಳಷ್ಟು ತಿಳಿ ಹೇಳುವನು. ಆದರೆ ಚಂದಯ್ಯನು "ನನಗೆ ಬಿಟ್ಟು ಹೋದ ಲಿಂಗವು ಬೇಡೆಬೇಡ ನನಗೆ ಜಂಗಮರ ದಾಸೋಹವೇ ಲಿಂಗಪೂಜೆಯು" ಎಂದು ಹೇಳುವನು.

ಮಾಚಿದೇವನು ಕೊನೆಗೊಂದು ತೀರ್ಮಾನ ಕೊಡುವನು. "ನಿನ್ನ ಪೂಜೆಗೆ ಲಿಂಗ ಬೇಕಿಲ್ಲದಿದ್ದರೇನಂತೆ. ನೀ ಮಾಡುವ ಜಂಗಮ ದಾಸೋಹಕ್ಕಾದರೂ ನೆರವಾಗಲು ಕರೆದೊಯ್ಯಯ್ಯಾ" ಎಂದು ಹೇಳಿ ಕಳಿಸುವನು.

ಮುಂದೆ ಆ ಲಿಂಗವು ಚಂದಯ್ಯನು ಹೇಳಿದಂತೆಯೇ ಕಾಯಕ ಮಾಡಿಕೊಂಡಿತ್ತು. ಒಂದು ದಿನ ಚಂದಯ್ಯನು ಆ ಲಿಂಗವನ್ನು ಹಗ್ಗ ಮಾರಲೆಂದು ಕಳಿಸುವನು. ಆಗ ಆ ಲಿಂಗಯ್ಯನು ಬಸವಣ್ಣನಲ್ಲಿಗೆ ಬಂದು ಹಗ್ಗಗಳನ್ನೆಲ್ಲ ಮಾರುವುದು. ಬಸವಣ್ಣನು ಹಗ್ಗ ತೆಗೆದುಕೊಂಡಿದ್ದಕ್ಕಾಗಿ ಒಂದು ಸಾವಿರ ಹೊನ್ನು ಕೊಟ್ಟು ಕಳಿಸುವನು. ಆ ಹೊನ್ನನ್ನು ತಂದು ಲಿಂಗಯ್ಯ ಚಂದಯ್ಯನಿಗೆ ಕೊಡುವನು.

ಆ ಸಹಸ್ರ ಹೊನ್ನು ಕೈಯಲ್ಲಿ ಹಿಡಿದು ಚಂದಯ್ಯನು "ಎಲೆ ಅಯ್ಯಾ ನನಗೆ ಈ ಅನ್ಯಾಯದ ಸಂಪಾದನೆ ಬೇಕಾಗಿಲ್ಲ, ಅದಕ್ಕೆಷ್ಟು ಬೆಲೆಯಿತ್ತೋ ಅಷ್ಟನ್ನೇ ತೆಗೆದುಕೊಂಡು ಬಾ

ಹೋಗು" ಎಂದು ಕಳಿಸಿದನು. ಅಷ್ಟೇ ಅಲ್ಲ ಚಂದಯ್ಯನು ಆ ಲಿಂಗದ ಹಿಂದೆ ಹಿಂದೆ ಅನುಭವ ಮಂಟಪದತ್ತ ನಡೆದ. ಮತ್ತೆ ಅಲ್ಲಿ ಇದ್ದಂತಹ ಎಲ್ಲ ಶಿವಶರಣರಿಗೆ ಆ ಲಿಂಗದ ದುರ್ವರ್ತನೆಯ ಬಗ್ಗೆ ತಿಳಿಸಿ ಹೇಳಿದ್ದ.

ಆಯ್ದಕ್ಕಿ ಮಾರಯ್ಯನ ಹೆಂಡತಿ ಮಹಾಶಿವಶರಣೆ ಲಕ್ಕಮ್ಮ. ಪತಿ ಮಾರಯ್ಯ ಪ್ರತಿನಿತ್ಯ ವ್ಯಾಪಾರ ಸ್ಥಳಕ್ಕೆ ಹೋಗಿ ಅಲ್ಲಿ ಬಿದ್ದಿದ್ದ ಕಾಳುಗಳನ್ನು ಆಯ್ದು ತರಬೇಕು. ಪತಿ ಆಯ್ದು ತಂದ ಆ ಕಾಳುಗಳಲ್ಲಿಯೇ ಸತಿ ಲಕ್ಕಮ್ಮ 'ಶಿವೋಽಹಂ' ಭಾವದಿಂದ ಅಡುಗೆ ಮಾಡಿ ಅದನ್ನು ಜಂಗಮಕ್ಕೆ ದಾಸೋಹ ಮಾಡಿ, ಸತಿಪತಿಗಳಿಬ್ಬರೂ ಸೇವಿಸುತ್ತಿದ್ದರು. ಇದು ಅವರ ದೈನಂದಿಕ ಜೀವನ.

ಹೀಗೆ ನಡೆದಿರಲೊಂದು ದಿನ ಬಸವಣ್ಣನೊಂದು ಉಪಾಯ ಮಾಡುತ್ತಾನೆ. ಮಾರಯ್ಯ ಕಾಳು ಆಯಲು ಬರುವಂತಹ ಜಾಗದಲ್ಲಿ ಅಂದು ಹೆಚ್ಚು ಕಾಳುಗಳನ್ನು ಚೆಲ್ಲಿ ಹೋಗುತ್ತಾನೆ. ಸುಮಾರು ಒಂದು ತಿಂಗಳ ಕಾಲ ಆಯ್ದರೂ ಸಿಕ್ಕಲಾರದಷ್ಟು ಕಾಳುಗಳು ಅಂದು ಮಾರಯ್ಯನಿಗೆ ಸಿಕ್ಕವು. ಆ ಎಲ್ಲ ಕಾಳುಗಳನ್ನು ಆಯ್ದು ತಂದು ಸತಿ ಲಕ್ಕಮ್ಮನಿಗೆ ಕೊಡುವನು. ಅಷ್ಟೊಂದು ಅಕ್ಕಿಯನ್ನು ನೋಡಿದ ಲಕ್ಕಮ್ಮನಿಗೆ ಮೈ ಉರಿದುಬಿಡುತ್ತದೆ. ಕೂಡಲೇ ಗಂಡನನ್ನು ಕರೆದು "ಇದೇನು ಇಂದು ಇಷ್ಟೊಂದು ಅಕ್ಕಿ ತಂದಿರುವಿರಲ್ಲ?" ಎಂದು ಕೇಳುತ್ತಾಳೆ.

"ಇಂದು ಸಿಕ್ಕಿದ್ದೇ ಇಷ್ಟೊಂದು ಅಕ್ಕಿ. ಅದಕ್ಕಿಷ್ಟು ಅಕ್ಕಿ ತಂದಿರುವೆ" ಎಂದು ಹೇಳುವನು.

ಲಿಂಗಪೂಜಾ ನಿಷ್ಠಳಾದ ಲಕ್ಕಮ್ಮನಿಗೆ ಇದು ಬಸವಣ್ಣನ ಕೆಲಸವೆಂಬುದು ಅರ್ಥವಾಗುವುದು. ಆ ಕೂಡಲೇ ಆಕೆಯೊಂದು ವಚನ ಹೇಳುತ್ತಾಳೆ. "ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗೆವುಂಟೇ ಅಯ್ಯಾ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೇ ಅಯ್ಯಾ? ಈಸಕ್ಕಿ ಆಸೆ ನಿಮಗ್ಯಾಕೆ ಈಶ್ವರನೊಪ್ಪ. ಮಾದೇಶ್ವರ ಪ್ರಿಯ ಅಮರೇಶ್ವರ ಲಿಂಗಕ್ಕೆ ದೂರು ಮಾರಯ್ಯಾ" ಎಂತೆಂದು ಹೇಳಿದ್ದಲ್ಲದೆ, "ಇದು ಆ ಬಸವಣ್ಣನ ಕೆಲಸ. ಮೊದಲು ಹೋಗಿ ಆ ಬಸವಣ್ಣನಿಗೆ ಈ ಅಕ್ಕಿಯನ್ನೆಲ್ಲ ಕೊಟ್ಟು ಬಸವಣ್ಣನು ಬಿನ್ನಹ ಮಾಡುವುದಕ್ಕಿಂತ ಮೊದಲೇ ಬಸವಣ್ಣನಲ್ಲಿರುವ ಲಕ್ಷದ ತೊಂಬತ್ತಾರು ಸಾವಿರ ಜಂಗಮರಿಗೆ ಇಂದು ನಮ್ಮ ಮನೆಗೆ ದಾಸೋಹಕ್ಕೆ ಬರಲು ಬಿನ್ನಹ ಮಾಡಿ ಬನ್ನಿರಿ. ಹಾಗೆ ಇಂದು ನಿಮಗೆಷ್ಟು ಅಕ್ಕಿ ಸಿಗುವವೋ ಅಷ್ಟೆ ಅಕ್ಕಿಯನ್ನು ಆಯ್ದು ತನ್ನಿರಿ" ಎಂದು ಹೇಳಿ ಕಳಿಸುವಳು.

ಮಾರಯ್ಯನು ಸತಿಯು ಹೇಳಿದಂತೆ ಅಷ್ಟೂ ಅಕ್ಕಿಯನ್ನು ಒಯ್ದು ಬಸವಣ್ಣನಿಗೆ ಕೊಡುವನು. ನಂತರ ಅಲ್ಲಿದ್ದ ಎಲ್ಲ ಜಂಗಮರಿಗೆ ಬಿನ್ನಹ ಮಾಡಿಕೊಳ್ಳುವನು. ಅಂದು ಆಯ್ದಷ್ಟೇ ಅಕ್ಕಿಯನ್ನು ತಂದು ಸತಿ ಶಿರೋಮಣಿ ಲಕ್ಕಮ್ಮನ ಕೈಗೆ ಕೊಡುವನು. ಲಕ್ಕಮ್ಮನು ಅಷ್ಟೇ ಅಕ್ಕಿಯನ್ನು 'ಶಿವೋಽಹಂ' ಭಾವದಿಂದ ಅಡುಗೆ ಮಾಡಿ ಲಕ್ಷದ ತೊಂಬತ್ತಾರು ಸಾವಿರ ಜಂಗಮರಿಗೆ ಕಳುಹಿಸುವಳು. ನಂತರ ಮಿಕ್ಕ ಪ್ರಸಾದವನ್ನು ದಂಪತಿಗಳಿಬ್ಬರೂ ಸೇವಿಸುವರು.

ಪ್ರಪಂಚದಲ್ಲಿ ಹಣ ಮಾಡುವ ಹೆಂಗಸರೇ ಹೆಚ್ಚು. ಗಂಡ ಹೇಗೆ ಹಣ ಮಾಡಿದರೂ

ಚಿಂತೆಯಿಲ್ಲ. ಒಟ್ಟಾರೆ ಹಣ ತರಬೇಕು. ತಂದು ತನ್ನ ಕೈಗೆ ಕೊಡಬೇಕು. ಹೀಗೆ ಮಾಡುವುದನ್ನು ಹೇಳಿಕೊಡುವ ಹೆಂಗಸರೇ ತುಂಬಿಕೊಂಡಿರುವ ಈ ಪ್ರಪಂಚದಲ್ಲಿ 'ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗೆವುಂಟೇ ಅಯ್ಯಾ?' ಎಂದು ಪ್ರಶ್ನಿಸುವ ಲಕ್ಕಮ್ಮನಂತಹ ಹೆಂಗಸರು ಸಿಗುವುದು ದುರ್ಲಭ. ಅದಕ್ಕೆಂದೇ ಚನ್ನಬಸವಣ್ಣ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾನೆ.

ಬಟ್ಟಬಯಲೆಲ್ಲ ಗಟ್ಟಿಗೊಂಡೊಡೆ ಸ್ವರ್ಗಮರ್ತ್ಯಪಾತಾಳಕ್ಕೆ
ಠಾವಿನ್ನೆಲ್ಲಿಹುದೋ? ಮೇಘಜಲವೆಲ್ಲ ಮುತ್ತಾದೊಡೆ ಸಪ್ತಸಾಗರಂಗಳಿಗೆ
ಉದಕವೆನ್ನೆಲ್ಲಿಹುದೋ? ಕಷ್ಟಜೀವಿ ಮನುಜರೆಲ್ಲ ನೆಟ್ಟನೆಶಿವಜ್ಞಾನಿಗಳಾದೊಡೆ
ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲಿಹುದೋ?
ಸಾಕ್ಷಿ: 'ಗುರುಭಕ್ತಿಂ ಪರಿತ್ಯಜ್ಯ ಸದ್ಯೋಽಪಿ ನರಕಂ ವ್ರಜೇತ್'
ಇಂತೆಂಬುದಾಗಿ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ
ಸಾವಿರಕ್ಕೊಬ್ಬ ಸತ್ಯ! ಲಕ್ಷಕ್ಕೊಬ್ಬ ಭಕ್ತ! ಕೋಟಿಗೊಬ್ಬ ಶರಣ ॥

ಬಹುಶ: ನಮ್ಮ ಭಾರತದೇಶದಲ್ಲಿ ಸುಮಾರು ನೂರಾಮೂವತ್ತು ಕೋಟಿ ಜನಸಂಖ್ಯೆ ಇದೆಯೆಂದರೆ ಅದರಲ್ಲಿ ಕೇವಲ ನೂರಾಮೂವತ್ತು ಜನರು ಮಾತ್ರ ಶರಣರಾಗಲೀ, ಸಂತರಾಗಲಿ ಇದ್ದಿರಲು ಸಾಧ್ಯ ಎಂದು? ನಾವು ಭಾವಿಸಿಕೊಳ್ಳಬೇಕಾಗಿದೆ. ಹೋಗಲಿ, ನಾವು ಶರಣರಾಗದಿದ್ದರೂ ಕೊನೆಪಕ್ಷ ಭಕ್ತರಾಗಲಿ, ಇಲ್ಲವೇ ಸತ್ಯವಂತರಾಗಲಿ ಆಗುವ ಪ್ರಯತ್ನವನ್ನಾದರೂ ಮಾಡಬೇಕಲ್ಲವೇ? ಇದಕ್ಕೆ ಸಂಸ್ಕಾರ ಬೇಕೇಬೇಕು. ಸಂಸ್ಕಾರಕ್ಕೆಲ್ಲಿಗೆ ಹೋಗಬೇಕೆಂಬ ಪ್ರಶ್ನೆ ಮೂಡಿಬಂದರೆ ಸತ್ಸಂಗ ಮಾಡಬೇಕು. ಇದನ್ನೇ ಶಂಕರಾಚಾರ್ಯರು ಹೇಳಿರುವರು.

ಸತ್ಸಂಗತ್ವೇ ನಿಸ್ಸಂಗತ್ವಂ ನಿಸ್ಸಂಗತ್ವೇ ನಿರ್ಮೋಹತ್ವಂ ।
ನಿರ್ಮೋಹತ್ವೇ ನಿಶ್ಚಲತತ್ವಂ ನಿಶ್ಚಲತತ್ವೇ ಜೀವನ್ಮುಕ್ತಿ: ॥

ಡಂಬಾಚಾರದ ಪೂಜೆ ಜಪ ತಪಾದಿಗಳನ್ನಾಚರಿಸುವುದಕ್ಕಿಂತ ಮನಸ್ಸನ್ನು ನಿಶ್ಚಲಗೊಳಿಸುವ ಸತ್ಸಂಗವೇ ಸಾವಿರ ಪಾಲು ಮೇಲು.

ತಪಸ್ಸು ಶ್ರೇಷ್ಟವೋ? ಸತ್ಸಂಗ ಶ್ರೇಷ್ಟವೋ? ಈ ಬಗ್ಗೆ ವಿಶ್ವಾಮಿತ್ರ ವಶಿಷ್ಠರಲ್ಲಿ ವಿವಾದ ಹುಟ್ಟಿಕೊಂಡಿತು. ತಪಸ್ಸು ಶ್ರೇಷ್ಟವೆಂಬುದು ವಿಶ್ವಾಮಿತ್ರರ ವಾದ. ಸತ್ಸಂಗವೇ ಶ್ರೇಷ್ಟವೆಂಬುದು ವಶಿಷ್ಠರ ವಾದವು. ಕೊನೆಗೆ ಅಂತಿಮ ತೀರ್ಮಾನಕ್ಕೆಂದು ಇಬ್ಬರೂ ಆದಿಶೇಷನ ಬಳಿಗೆ ಹೋದರು. ಇವರ ವಿವಾದವನ್ನು ಕೇಳಿದ ಆದಿಶೇಷನು, "ಅಯ್ಯೋ ನೀವಿಬ್ಬರೂ ನನ್ನ ಕಷ್ಟ ನೋಡುತ್ತಿದ್ದೀರಿ. ನನ್ನ ತಲೆಯ ಮೇಲೆ ಇಡೀ ಪೃಥ್ವಿ (ಭೂಮಿ)ಯ ಭಾರವಿದೆ. ಈ ಭಾರವನ್ನು ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು ಸ್ವಲ್ಪ ಹೊತ್ತು ಹೊತ್ತುಕೊಂಡರೆ ನಾನು ಸ್ವಲ್ಪ ವಿಚಾರ ಮಾಡಿ ತೀರ್ಮಾನ ಕೊಡಬಹುದು" ಎಂದು ಹೇಳಿದ.

ವಿಶ್ವಾಮಿತ್ರನಿಗೆ ತನ್ನ ತಪಸ್ಸಿನ ಬಹಳ ನಂಬಿಕೆಯಿತ್ತು. ಯಾಕೆಂದರೆ ತಾನು ಹತ್ತು ಸಾವಿರ ವರ್ಷಗಳ ಪರ್ಯಂತರ ತಪಸ್ಸು ಮಾಡಿದ್ದ. ಆದ್ದರಿಂದ ತನ್ನ ತಪಸ್ಸಿನ ಸಂಪೂರ್ಣ ಫಲವನ್ನು ಪ್ರಯೋಗಿಸಿ ಈ ಪೃಥ್ವಿಯನ್ನು ಎತ್ತಲು ಪ್ರಯತ್ನಿಸಿದ. ಸಾಧ್ಯವಾಗಲಿಲ್ಲ. ಪೃಥ್ವಿ ಸ್ವಲ್ಪ

ನಡುಗಿತಷ್ಟೆ! ಮುಂದೆ ವಶಿಷ್ಠರ ಸರದಿ. ವಶಿಷ್ಠರಾಗ ತಮ್ಮ ಸತ್ಸಂಗದ ಅರ್ಧಕ್ಷಣ ಫಲದಿಂದ ಪೃಥ್ವಿಯನ್ನು ಸಹಜವಾಗಿಯೇ ಹೊತ್ತುಕೊಂಡರು. ಅಷ್ಟೆ ಅಲ್ಲ ಆದಿಶೇಷನು ಮತ್ತೆ ತನ್ನ ತಲೆಯ ಮೇಲಿಡು ಎಂದು ಕೇಳುವವರೆಗೂ ಹೊತ್ತುಕೊಂಡೇ ಇದ್ದರು. ವಿಶ್ವಾಮಿತ್ರ ಕೇಳಿದ. "ಏನನ್ನು ಹೇಳದೆ ಪುನ: ಪೃಥ್ವಿಯನ್ನು ನಿನ್ನ ತಲೆಯ ಮೇಲೆ ಇಟ್ಟುಕೊಂಡೆಯಲ್ಲ? ನಿರ್ಣಯ ಕೊಡು" ಎಂದು.

ಆದಿಶೇಷನು ಅದಕ್ಕೆ "ಋಷಿಗಳೇ ನಿರ್ಣಯ ತನ್ನಿಂದ ತಾನೇ ಮುಗಿದುಹೋಗಿದೆ. ಯಾವಾಗ ವಶಿಷ್ಠರು ಅರ್ಧಕ್ಷಣದ ಸತ್ಸಂಗದ ಫಲಕ್ಕೆ ನಿಮ್ಮ ಹತ್ತು ಸಾವಿರ ವರ್ಷಗಳ ತಪಸ್ಸಿನ ಫಲವು ತೂಗಲಿಲ್ಲವೋ ಆಗಲೇ ತೀರ್ಮಾನವಾಗಿ ಬಿಟ್ಟಿದೆ. ಮತ್ತದರಲ್ಲಿ ಯಾವುದು ದೊಡ್ಡದೆಂದು ನೀವೇ ಭಾವಿಸಿಕೊಳ್ಳಿರಿ" ಎಂದು ಹೇಳಿದ್ದ.

ಬುದ್ಧನ ಬಯಲೋಪದೇಶ ಪ್ರಶಾಂತವಾಗಿ ನಡೆದಿತ್ತು. ಆಗ ಅಲ್ಲಿಗೊಬ್ಬ ನರ್ತಕಿ (ವೇಶ್ಯೆ) ಮಹಾನ್ ಶ್ರೀಮಂತೆ ಬಂದು ಕುಳಿತಳು. ಅವಳ ಹೆಸರು ಅಂಬಾಪಾಲಿ. ಬುದ್ಧನ ಅಮೃತವಾಣಿಯ ಸೊಬಗು, ಚೆಂದಿರನ ಬೆಳದಿಂಗಳ ಬೆಳಗು. ಕೇಳುಗರನ್ನು ಮಂತ್ರಮುಗ್ಧರನ್ನಾಗಿಸಿತು.

ಬುದ್ಧ ಹೇಳಿದ. "ಈ ನಿರ್ವಾಣ ಕ್ಷೇತ್ರದೊಳಗೆ ಯಾರು ಬೇಕಾದರೂ ಪ್ರವೇಶಿಸಬಹುದು. ಇಲ್ಲಿ ಇಂಥವರಿಗೇ ಎಂಬ ಕಡ್ಡಾಯವಿಲ್ಲ. ಮೇಲು ಕೀಳುಗಳೆಂಬ ಜಾತಿಭೇದವಿಲ್ಲ. ಸ್ತ್ರೀಪುರುಷರೆಂಬ ಲಿಂಗಭೇದವಿಲ್ಲ. ಪಾಪಾತ್ಮಪುಣ್ಯಾತ್ಮರೆಂಬ ಅಳತೆಗೋಲಿಲ್ಲ. ಬಡವಬಲ್ಲಿದರೆಂಬ ತಾರತಮ್ಯವಿಲ್ಲ. ಇಲ್ಲಿ ಸರ್ವರಿಗೂ ಪ್ರವೇಶಿಸುವ ಅಧಿಕಾರವಿದೆ" ಎಂದು.

ಈ ಮಧುರವಾಣಿಗಳನ್ನಾಲಿಸಿದ ಅಂಬಾಪಾಲಿಗೆ 'ತಾನು ವೇಶ್ಯೆ, ಮಹಾಪಾಪಿ' ಎಂಬುದು ಅಳಿಸಿಹೋಗಿತ್ತು. ಅವಳಲ್ಲಿ ದೊಡ್ಡ ಪರಿವರ್ತನೆಯಾಯಿತು. ನಾನೂ ನಿರ್ವಾಣಸ್ಥಿತಿ ತಲುಪಬಲ್ಲೆ. ದೇವಕ್ಷೇತ್ರ ಪ್ರವೇಶಿಸಬಲ್ಲೆ ಎಂಬ ಆತ್ಮ ವಿಶ್ವಾಸ ಅವಳಲ್ಲಿ ಬೃಹದಾಕಾರವಾಗಿ ಬೆಳೆದು ನಿಂತಿತು. ಬುದ್ಧನ ಉಪದೇಶವನ್ನು ಆಲಿಸುತ್ತಿದ್ದ ಆ ಊರಿನ ಜನರೆಲ್ಲರೂ ಎದ್ದೆದ್ದು ಹೋದರು. ಆದರೆ ಅಂಬಾಪಾಲಿ ಮಾತ್ರ ಎದ್ದು ಬುದ್ಧನ ಬಳಿ ಬಂದು ನಿಂತು "ಬುದ್ಧಂ ಶರಣಂ ಗಚ್ಛಾಮಿ" ಎಂದೆನ್ನುತ್ತ ಶಿರಬಾಗಿ ನಮಸ್ಕರಿಸಿದಳು.

ಬುದ್ಧ, "ಯಾರು ನೀನು?" ಎಂದು ಕೇಳಿದ.

ಅವಳು "ಈಗೀಗ ಸ್ವಲ್ಪ ಸಮಯದ ಹಿಂದೆ ನಾನೋರ್ವ ನರ್ತಕಿ, ವೇಶ್ಯೆ. ಆದರೆ ನಾನೀಗ ನಿರ್ವಾಣ ಪಥಿಕಳು. ಆದ್ದರಿಂದ ಪೂಜ್ಯರೇ ನೀವು ನಾಳೆ ನನ್ನ ಮನೆಗೆ ಭಿಕ್ಷೆಗೆ ಬರಬೇಕು" ಎಂದು ಪ್ರಾರ್ಥಿಸಿಕೊಂಡಳು. ಬುದ್ಧನು ಒಪ್ಪಿಗೆ ಕೊಟ್ಟ.

ವೇಶ್ಯೆಯೋರ್ವಳ ಮನೆಗೆ ಭಗವಾನ್ ಬುದ್ಧನು ಭಿಕ್ಷೆಗೆ ಹೋಗುವುದನ್ನು ಕೇಳಿಸಿಕೊಂಡ ಜನರು ಮನಬಂದಂತೆ ಆಡಿಕೊಂಡರು. ಯಾರ ಮಾತಿಗೂ ಕಿವಿಗೊಡದೆ ಬುದ್ಧ ಮರುದಿನ ಅಂಬಾಪಾಲಿಯ ಮನೆಗೆ ಧರ್ಮಭಿಕ್ಷೆಗೆ ಹೊರಟ. ಬಂದು ಬಂದವನೇ ಅವಳ ಮುಂದೆ

ಭಿಕ್ಷಾಪಾತ್ರೆಯನ್ನು ಒಡ್ಡಿನಿಂತ. ಬುದ್ಧನ ಭಿಕ್ಷಾಪಾತ್ರೆಗೆ ಊರಿನ ಪ್ರತಿಯೊಬ್ಬರೂ ಆಹಾರ ನೀಡಿದ್ದರು. ಆದರೆ ಅಂಬಾಪಾಲಿ ಅಂದು ತನ್ನ ಸಮಗ್ರ ಆಸ್ತಿಯನ್ನೇ ಧಾರೆಯೆರೆದು ಬಿಟ್ಟಳು.

ಅದಕ್ಕೆ ಬುದ್ಧ, "ನಾನು ಭಿಕ್ಷೆಗಾಗಿ ಬಂದವನೇ ಹೊರತು ಆಸ್ತಿಗಾಗಿ ಬಂದವನಲ್ಲ" ಎಂದ.

ಅದಕ್ಕವಳು, "ಪೂಜ್ಯರೇ ಅದ ನಾಬಲ್ಲೆ. ನೀವು ಹಣ ಆಸ್ತಿ ಗಳಿಸುವವರಲ್ಲ. ನಮ್ಮಗಳ ಹೃದಯ ಹಸನ ಮಾಡುವವರು. ಆದರೆ ನಾನೀಗ ಅರ್ಪಿಸಿಬಿಟ್ಟದ್ದೇನೆ ಆಯಿತು" ಎಂದು ಹೇಳಿದ್ದಳು.

ಬುದ್ಧ, "ನೋಡು ಇನ್ನೊಮ್ಮೆ ಆಲೋಚಿಸು" ಎಂದ.

"ಯೋಚಿಸಿದ್ದೇನೆ. ನಾನೀಗ ನಿರ್ವಾಣ ಪಥಿಕಳಷ್ಟೇ. ಈಗ ನನ್ನದೆಂಬುದು ಏನೂ ಇಲ್ಲ. ಎಲ್ಲದೂ ಬುದ್ಧನದೇ" ಎಂದಳು ಅಂಬಾಪಾಲಿ.

"ಸರಿ ನಾನೀಗ ಇದನ್ನು ಸ್ವೀಕರಿಸಿದರೆ ನನ್ನದಾಗಬೇಕಲ್ಲ?" ಎಂದ ಬುದ್ಧ.

"ಹೌದು ನಾನದನ್ನು ಮರಳಿ ಪಡೆದರೆ ನನ್ನದಾಗಬೇಕಲ್ಲ? ಎಂದು ಮತ್ತೆ ಹೇಳಿದಳು.

ಬುದ್ಧ "ನಿನ್ನದೂ ಅಲ್ಲ, ನನ್ನದೂ ಅಲ್ಲ. ಮತ್ತಿನಾರದು ಈ ಸಿರಿ" ಎಂದು ಪ್ರಶ್ನಿಸಿದ.

"ಅದು ಶೂನ್ಯಕ್ಕೆ ಸೇರಿದ್ದು" ಎಂದಳು ಅಂಬಾಪಾಲಿ.

ಅಂಬಾಪಾಲಿ ಸತ್ಸಂಗಕ್ಕೆ ಬಂದಿದ್ದು ಒಂದೇ ಒಂದು ದಿನ ಮಾತ್ರ. ಆದರವಳಲ್ಲಿ ಅದೆಂತಹ ಪರಿವರ್ತನೆಯಾಗಿತ್ತು. ಅದೊಂದು ದಿನಕ್ಕೆ ಅವಳು ಸರ್ವಸಂಗ ಪರಿತ್ಯಾಗಿಯಾದಳು. ಪವಿತ್ರಾತ್ಮಳಾದಳು. ನಿಜ ನಿರ್ವಾಣ ಪಥಿಕಳಾದಳು. ಅಂದವಳ ಆಮ್ರವನ (ಹುಣಸೆ ಮರದ ತೋಪು). ಈಗೇನಿದ್ದರೂ ಅದು ಬುದ್ಧನ ಧ್ಯಾನ ಬನ!

ಶಿಲ್ಪಿಯ ಕೈಗೆ ಸಿಕ್ಕ ಶಿಲೆಯು ಮಾತ್ರ ವಿಗ್ರಹವಾಗಿ ರೂಪಗೊಳ್ಳುವುದು. ಹೀಗೆ ಸತ್ಸಂಗದಲ್ಲಿ ಮನಸ್ಸನ್ನು ಸಮರ್ಪಿಸಿದರೆ ಮಾತ್ರ ಮಾನವ-ದೇವನಾಗುವುದು, ಜೀವ-ಶಿವನಾಗವುದು, ನರ-ಹರನೆನಿಸಿಕೊಳ್ಳುವುದು.

ಬೀದಿಯಲ್ಲಿ ದೀಪವೊಂದು ಅಖಂಡವಾಗಿ ಬೆಳಗುವುದು. ಅದರ (ಆ ಬೆಳಕಿನ) ಕೆಳಗೆ ಯಾವೊಬ್ಬ ವ್ಯಕ್ತಿಯಾಗಲೀ, ಯಾವೊಂದು ವಸ್ತುವಾಗಲೀ ಹೋದುದಾದರೆ ಅವೂ ಸಹ ಬೆಳಗುವುವು. ಮದುವೆಯ ದಿಬ್ಬಣ ಅದರ ಕೆಳಗೆ ಹೋಯಿತೆಂದರೆ ಅದು ಆನಂದಿಸಿ ಹೆಚ್ಚಿನ ಬೆಳಕು ಕೊಡುವುದಿಲ್ಲ. ಹಾಗೆ ಮಸಣಕ್ಕೆ ಹೋಗುವ ಹೆಣ. ಅದರ ಕೆಳಗೆ ಹಾಯ್ದು ಹೋದರೂ ಅದು ದು:ಖಿಸಿ ಕತ್ತಲಾಗಿಸುವುದಿಲ್ಲ. ಹೀಗಿರುವುದು ಆತ್ಮತತ್ವ. ಅದು ಸರ್ವಾಂತರ್ಯಾಮಿ. ಕತ್ತಲಲ್ಲೂ ಇದೆ, ಬೆಳಕಲ್ಲೂ ಇದೆ, ಬಡವನಲ್ಲೂ ಇದೆ, ಬಲ್ಲಿದನಲ್ಲೂ ಇದೆ, ಹೆಣ್ಣು ಗಂಡುಗಳಲ್ಲೂ ಇದೆ. ಮೇಲುಕೀಳೆಂಬ ಸರ್ವಜಾತಿಗಳಲ್ಲೂ ಇದೆ. ಆದರೆ

ಅದನ್ನು ಪಡೆಯಲು ಸನ್ನದ್ಧನಾದವನೇ ನಿಜವಾದ ಭಕ್ತ. ವಿರುದ್ಧವಾದವನೇ ಭವಿ. ಸನ್ನದ್ಧರಾಗುವವರು ಮೊದಲು ಸಂಸ್ಕಾರದತ್ತ ತಿರುಗಬೇಕು.

"ಜ್ಞಾನಂ ಕ್ರಿಯ ನಭವತಿ, ಕ್ರಿಯಾಂ ಜ್ಞಾನ ನಭವತಿ" ಎಂಬಂತೆ ಕೇವಲ ಜ್ಞಾನ ಪಡೆದುಕೊಂಡು (ಸಂಸ್ಕಾರವಂತರಾಗಿ) ಸಾಧನೆಯ ಮಾರ್ಗದಲ್ಲಿ ನಡೆಯದಿದ್ದರೂ ಪ್ರಯೋಜನವಿಲ್ಲ. ಸಂಸ್ಕಾರವಿಲ್ಲದೆ (ಜ್ಞಾನ ಪಡೆದುಕೊಳ್ಳದೆ) ಕರ್ಮಗಳನ್ನಾಚರಿಸಿದರೂ ಪ್ರಯೋಜನವಿಲ್ಲ. ಇದನ್ನೇ ಶಾಸ್ತ್ರಗಳು 'ಅಂಧ-ಪಂಗು ನ್ಯಾಯ' ಎಂದಿರುವುದು. ಜ್ಞಾನವಿಲ್ಲದ ಕರ್ಮ, ಕುರುಡು. ಕರ್ಮಾಚಾರ ಪಾಲಿಸದ ಜ್ಞಾನ ಕುಂಟು. ಕರ್ಮಿಯೆಂಬ ಕುರುಡ ಜ್ಞಾನಿಯೆಂಬ ಕುಂಟನನ್ನು ಹೆಗಲ ಮೇಲೆ ಹೊತ್ತುಕೊಂಡು ಅವನು ಹೇಳಿದಂತೆ ಹೆಜ್ಜೆಗಳನ್ನಿಡಬೇಕು. ಅದಕ್ಕೆ ಯಾವೊಂದು ಜಾತಿಗಳಿಗಷ್ಟೇ ಮೀಸಲಲ್ಲ. ಇದನ್ನು ಪಡೆಯಲು ಸರ್ವರಿಗೂ ಸ್ವಾತಂತ್ರವಿದೆ. ಅದಕ್ಕಾಗಿಯೇ ಶಾಸ್ತ್ರಗಳು "ಜನ್ಮನಾ ಜಾಯತೇ ಶೂದ್ರಾ: ಸಂಸ್ಕಾರಾತ್ ದ್ವಿಜ ಮುಚ್ಯತೆ" ಎಂದಿರುವುದು.

ಸಂಸ್ಕಾರ ಪಡೆದ ನೆಲ (ಭೂಮಿ) ಪುಣ್ಯ ಕ್ಷೇತ್ರವಾಯಿತು. ಸಂಸ್ಕಾರ ಪಡೆದ ಶಿಲೆ (ಕಲ್ಲು) ಶಿವಲಿಂಗವಾಯಿತು. ಸಂಸ್ಕಾರ ಪಡೆದ ಜಲ (ನೀರು) ತೀರ್ಥವೆಂದಿನಿಸಿಕೊಂಡಿತು. ಸಂಸ್ಕಾರ ಪಡೆದ ಆಹಾರ (ಅನ್ನ) ಪ್ರಸಾದವೆನಿಸಿಕೊಂಡಿತು. ಹೀಗೆ ಸಂಸ್ಕಾರ ಪಡೆದುಕೊಂಡ ಮಾನವ (ಜೀವಾತ್ಮ) ಮಹಂತ (ಪರಮಾತ್ಮ) ಎನಿಸಿಕೊಳ್ಳುವನು!!

# ಮಡಿ–ಸೂತಕ ಹಾಗೂ ಪೂಜಾಚರಣೆ

ಹಿಂದಿನ ಕಾಲದಲ್ಲಿ ವಿಜ್ಞಾನ ಬೆಳೆದಿರಲಿಲ್ಲ. ಆದರೆ ಜನರಲ್ಲಿ ಸಾಕಷ್ಟು ಕುತೂಹಲ ಬೆಳೆದು ನಿಂತಿತ್ತು. ಇಂದು ವಿಜ್ಞಾನ ಬೆಳೆದಿದೆ. ಆದರೆ ಜನರಲ್ಲಿ ಕುತೂಹಲ ನಾಶವಾಗುತ್ತ ಬರುತ್ತಿದೆ. ಅರ್ಥಾತ್ ಅಂದು ಜನರು ಆಚರಿಸುತ್ತಿದ್ದ ಸುಸಂಸ್ಕೃತ ಕ್ರಿಯೆಗಳಿಂದ ವ್ಯಕ್ತಿಯ ಹಾಗೂ ವಾತಾವರಣದ ಸುತ್ತ ಧನಾತ್ಮಕ ಶಕ್ತಿಯ ಕಂಪನವು (Positive Energy Vibrate) ಉತ್ಪನ್ನವಾಗುತ್ತಿತ್ತು. ಇಂದು ನಾವುಗಳು ಆಚರಿಸುತ್ತಿರುವ ವಿಕೃತ ಬುದ್ಧಿಯ ಕ್ರಿಯೆಗಳಿಂದ ನಮ್ಮ ವಾತಾವರಣದ ಸುತ್ತ ಋಣಾತ್ಮಕ ಶಕ್ತಿಯ ಕಂಪನವು (Negative Energy Vibrate) ಸೃಷ್ಟಿಯಾಗುತ್ತಲಿರುವುದು. ಈ ಕಾರಣದಿಂದಲೇ ಜನರಲ್ಲಿ ಮಾನಸಿಕ ಸಮತೋಲನತೆ ಹಾಳಾಗಿರುವುದು. ಪ್ರಕೃತಿಯ ವಿಕೋಪದಿಂದ ಮಳೆ ಬೆಳೆ ಕಡಿಮೆಯಾಗುತ್ತಿರುವುದು. ಭೂಕಂಪ, ಚಂಡಮಾರುತಗಳು ಹೆಚ್ಚಾಗುತ್ತಿರುವುದು.

ಪ್ರಕೃತಿ ಎಲ್ಲ ಕಡೆಗೂ ಒಂದೇ ತರಹದಲ್ಲಿಲ್ಲ. ಒಂದೊಂದು ಕಡೆ ಒಂದೊಂದು ರೀತಿಯ ಕಂಪನಗಳಿವೆ. ವೈಜ್ಞಾನಿಕವಾಗಿ ಒಂದು ಪರಮಾಣುವಿನೊಳಗೆ ನ್ಯೂಟ್ರಾನ್, ಪ್ರೋಟಾನ್, ಎಲೆಕ್ಟ್ರಾನ್‌ಗಳೆಂಬ ಮೂರು ಅಂಗಗಳಿರುತ್ತವೆ. ಅವುಗಳು ಧನಾತ್ಮಕ, ಋಣಾತ್ಮಕ ಹಾಗೂ ತಟಸ್ಥರೂಪದಲ್ಲಿ ಕಾರ್ಯನಿರ್ವಹಿಸುತ್ತವೆ. ಹಾಗೆ ಈ ಸೃಷ್ಟಿ (ಪ್ರಕೃತಿ)ಯಲ್ಲಿ ಸಾತ್ವಿಕ, ರಾಜಸಿಕ ಹಾಗೂ ತಾಮಸಿಕ ಗುಣಗಳಿವೆ. ಹಾಗೆ ಪ್ರಕೃತಿಯಲ್ಲಿ ಸ್ತ್ರೀ, ಪುರುಷ, ನಪುಂಸಕವೆಂಬ ಮೂರು ಲಿಂಗಭೇದಗಳಿವೆ. ವಾತ–ಪಿತ್ತ–ಕಫಗಳೆಂಬ ತ್ರಿದೋಷಗಳಿರುವಂತೆ ಪ್ರಕೃತಿಯಲ್ಲಿ ಅಲ್ಲಲ್ಲಿ ಬೇರೆ ಬೇರೆಯಾದ ವಾತಾವರಣವಿರುತ್ತದೆ. ಈ ಬಗ್ಗೆ ತೆಲುಗಿನವರ ಒಂದು ಗಾದೆ ಮಾತಿದೆ. "ಚಿಂತಮಾನ ಕಿಂದ ಪಂಚಾಯ್ತಿ ಚಯ್ಯೊದ್ದುರಾ" ಎಂತೆಂಬುದು. ಅಂದರೆ ಹುಣಸೆ ಮರದ ಕೆಳಗೆ ಪಂಚಾಯ್ತಿ ಮಾಡಿದರೆ, ಅದು ಮತ್ತಷ್ಟು ವಿಕೋಪಕ್ಕೆ ಹೋಗುವುದಂತೆ.

ಶ್ರೀರಾಮಚಂದ್ರ ಪಿತೃವಾಕ್ಯ ಪರಿಪಾಲಕ. ತಮ್ಮ ಭ್ರಾತೃಪ್ರೇಮಿ. ಒಮ್ಮೆ ಇವರಿಬ್ಬರು ನಡೆದು ಹೋಗುತ್ತಿದ್ದರು. ಆಗ ಅಣ್ಣನಿಗೆ ಭಾರವಾಗಬಾರದೆಂದು ಶ್ರೀರಾಮಚಂದ್ರನ ಬಿಲ್ಲು ಬತ್ತಳಿಕೆಗಳನ್ನು ತಾನೇ ಹೊತ್ತುಕೊಂಡು ನಡೆದಿದ್ದ. ಹೀಗೆ ಹೋಗುತ್ತಲಿರುವಾಗ ಲಕ್ಷ್ಮಣನ ಬುದ್ಧಿಭಾವದಲ್ಲಿದ್ದ ಭ್ರಾತೃಪ್ರೇಮ ದೂರವಾಗಿ ಒಮ್ಮಿಂದೊಮ್ಮೆಯೇ ಸಿಟ್ಟು ರೋಷ ಉಲ್ಬಣವಾಯಿತು. ಆ ಕೂಡಲೆ ಲಕ್ಷ್ಮಣನು "ನಿನ್ನ ಬಿಲ್ಲು ಬತ್ತಳಿಕೆಗಳನ್ನು ನಾನೇಕೆ ಹೊರಬೇಕು. ನೀನೇ ಹೊತ್ತುಕೋ" ಎಂದು ಹೇಳುತ್ತಾ, ಶ್ರೀರಾಮಚಂದ್ರನಿಗೆ ಅವುಗಳನ್ನು ಕೊಟ್ಟುಬಿಟ್ಟ. ಮತ್ತೆ ಸ್ವಲ್ಪ ದೂರ ನಡೆದ ನಂತರ ಲಕ್ಷ್ಮಣನ ಬುದ್ಧಿ ಯಥಾಸ್ಥಿತಿಗೆ ಮರಳಿತ್ತು. ಆಗ ಅಣ್ಣನತ್ತ ನೋಡಿದ. ಮೊದಲು ತನ್ನಲ್ಲಿದ್ದ ಅಣ್ಣನ ಬಿಲ್ಲು ಬತ್ತಳಿಕೆಗಳು, ಅಣ್ಣನ ಹೆಗಲ ಮೇಲಿದ್ದವು. ಆಶ್ಚರ್ಯದಿಂದ ಅಣ್ಣನನ್ನು ಕೇಳಿದ, "ಅಣ್ಣಾ ಇವು ಹೇಗೆ ನಿನ್ನಲ್ಲಿಗೆ ಬಂದವು? ನಾನು ಯಾವಾಗ ಇವುಗಳನ್ನು ನಿನಗೆ ಕೊಟ್ಟೆ? ಯಾಕೆ ಕೊಟ್ಟೆ? ಅವುಗಳನ್ನಿಲ್ಲಿ ಕೊಡು" ಎನ್ನುತ್ತ ಮತ್ತವುಗಳನ್ನು ಪಡೆದಿದ್ದ.

ಶ್ರೀರಾಮಚಂದ್ರ ನಗುತ್ತ ಹೇಳಿದ, "ನೀನು ಅವುಗಳನ್ನು ನನ್ನ ಕೈಗೆ ಕೊಟ್ಟಾಗ

ಯುದ್ಧಭೂಮಿ (ರಣರಂಗ) ಹತ್ತಿರ ಬಂದಿತ್ತು. ಆದ್ದರಿಂದ ಆ ಭೂಮಿಯ ಸುತ್ತಲೂ ವ್ಯಾಪಿಸಿಕೊಂಡಂತಹ ಕ್ಷಾತ್ರ ಶಕ್ತಿಯ ಕಂಪನವು ನಿನ್ನ ಬುದ್ಧಿಭಾವಗಳ ಮೇಲೆ ಪ್ರಭಾವ ಬೀರಿತು. ಅದನ್ನು ನಿಗ್ರಹಿಸಿ ನಿನ್ನ ಸ್ವಂತಿಕೆಯನ್ನು ಉಳಿಸಿಕೊಳ್ಳುವ ಶಕ್ತಿ ನಿನ್ನಲ್ಲಿರಲಿಲ್ಲ. ಆಗ ನೀನು ನಿನಗರಿವಿಲ್ಲದಂತೆ ಅವುಗಳನ್ನು ನನ್ನ ಕೈಗೆ ಕೊಟ್ಟೆ. ಈಗ ಆ ರಣಭೂಮಿಯನ್ನು ದಾಟಿ ಮುಂದೆ ಬಂದಿದ್ದೇವೆ. ಆದ್ದರಿಂದ ನಿನ್ನ ಬುದ್ಧಿ ಭಾವ ಯಥಾಸ್ಥಿತಿಗೆ ಬಂದಾಗಿದೆ" ಎಂದು ಹೇಳಿದ್ದ.

ಹೌದು, ತನುಮನಗಳೆರಡಕ್ಕೂ ಅವಿನಾಭಾವ ಸಂಬಂಧವಿದೆ. ಉದಾಹರಣೆಗೆ ನೀರು. ನೀರಿನಲ್ಲಿ ಧನಾತ್ಮಕ (ಸಕಾರಾತ್ಮಕ) ಶಕ್ತಿಯಿದೆ. ನಾವು ಎಲ್ಲೆಲ್ಲಿಯೋ ತಿರುಗಿ ಯಾರಾರಲ್ಲೋ ಮನಸ್ತಾಪ ಮಾಡಿಕೊಂಡು ಮನೆಗೆ ಬಂದಿರುತ್ತೇವೆ. ಮನೆಗೆ ಬಂದ ನಂತರ ನಮ್ಮ ಭಾರತೀಯ ಸಂಪ್ರದಾಯದಂತೆ ಕೈಕಾಲು ಮುಖ ತೊಳೆಯುತ್ತೇವೆ. ಆಗ ಮನಸ್ಸಿಗೆ ಸ್ವಲ್ಪ ಶಾಂತಿಯೆನಿಸುತ್ತದೆ. ಯಾರಾದರೂ ಅತಿಥಿಗಳು ನಮ್ಮ ಮನೆಗೆ ಬಂದ ತಕ್ಷಣ ಕೈಕಾಲು ಮುಖ ತೊಳೆಯಲು ನೀರು ಕೊಡುವ ಪದ್ಧತಿ ನಮ್ಮ ಭಾರತೀಯರದ್ದಾಗಿತ್ತು. ಅಷ್ಟೇ ಅಲ್ಲ ಆ ವ್ಯಕ್ತಿ ಸ್ವಲ್ಪ ಹೊತ್ತು ಕುಳಿತಾದನಂತರ, ಮಾತುಕತೆ, ವ್ಯವಹಾರಗಳು ಪ್ರಾರಂಭವಾಗುತ್ತಿದ್ದವು. ಆದ್ದರಿಂದ ಅಂದು ಸಂಬಂಧಗಳಾಗಲಿ, ವ್ಯವಹಾರಗಳಾಗಲಿ ಗಟ್ಟಿಯಾಗಿರುತ್ತಿದ್ದವು. ಇಂದು ಈ ಪದ್ಧತಿ ನಾಶವಾಗುತ್ತಾ ಬರುತ್ತಿದೆ. ಮನೆಯೊಳಗೆ ಬಾ ಎಂದು ಹೇಳುವುದಿಲ್ಲ. ಕೈಕಾಲು ಮುಖ ತೊಳೆಯಿರಿ ಎಂದು ಹೇಳುವುದಿಲ್ಲ. ಸ್ವಲ್ಪ ಕೂತುಕೊಳ್ಳಿರಿ ಎಂಬ ಮಾತಂತೂ ದೂರವೇ ಆಗಿಬಿಟ್ಟಿದೆ. ಹೀಗೆ ಎಲ್ಲವೂ ಅವಸರವಸರ. ಬಾಗಿಲಲ್ಲೇ ಮಾತು, ಬಾಗಿಲಲ್ಲೇ ವ್ಯವಹಾರ. ಮತ್ತೆ ಕೆಲವರಂತೂ ಮೊಬೈಲ್ ಮತ್ತು ಇಂಟರ್‌ನೆಟ್‌ಗಳಲ್ಲಿ ಮದುವೆ ಮುಂಜಿಗಳ ವ್ಯವಹಾರ. ಇಂದಿನ ವಾತಾವರಣ ಹೀಗೆ ಬೆಳೆದು ಬಂದುದರಿಂದಲೇ ಕೊಟ್ಟ ದುಡ್ಡು ಮರಳಿ ಬರುವ ಹಾಗಿಲ್ಲ. ದಾಂಪತ್ಯದಲ್ಲಿ ವಿರಸ, ವಿಚ್ಛೇದನ ಇತ್ಯಾದಿ.

ಮೊದಲೇ ಹೇಳಿರುವಂತೆ ಪ್ರಕೃತಿಯಲ್ಲಿ ಅಲ್ಲಲ್ಲಿ ಬೇರೆ ಬೇರೆಯಾದ ವಾತಾವರಣವಿರುತ್ತದೆ. ಹಾಗೆ ಮಾನವರೂ ಸಹ ಬೇರೆ ಬೇರೆ ರೀತಿಯಲ್ಲಿರುತ್ತಾರೆ. ಅಂದರೆ ಮಡಿ-ಮೈಲಿಗೆ ಇತ್ಯಾದಿ ಧಾರ್ಮಿಕ ಆಚಾರಗಳನ್ನು ಒಪ್ಪಿಕೊಳ್ಳುವವರೂ ಇದ್ದಾರೆ. ವಿರೋಧಿಸುವವರೂ ಇದ್ದಾರೆ. ಕೆಲವೊಬ್ಬರು ಈ ಬಗ್ಗೆ ತಟಸ್ಥರಾಗಿದ್ದು, ಕೆಲವೊಮ್ಮೆ ತಮ್ಮ ನಿಲುವನ್ನು ಬದಲಾಯಿಸುವವರೂ ಸಹ. ಕೊನೆಯದಾಗಿ ಮತ್ತೆ ಕೆಲವರು ವೈಜ್ಞಾನಿಕತೆಯ ತಳಹದಿಯ ಮೇಲೆ ಹಾಗೂ ಸಮಷ್ಠಿಭಾವದಿಂದ ಒಪ್ಪಿಕೊಂಡು ಆಚರಿಸುವವರೂ ಸಹ.

ಕಟಿಬದ್ಧವಾಗಿಯೋ, ಆಡಂಬರದಿಂದಲೋ, ಮಡಿ ಮೈಲಿಗೆ, ಪೂಜೆ, ಧ್ಯಾನ, ಜಪತಪಗಳನ್ನು ಆಚರಿಸುವುದೊಂದೇ ಸತ್‌ಸಾಧನೆಯಲ್ಲ. ಈ ಬಗ್ಗೆ ಹೀಗೊಂದು ಕಥೆಯಿದೆ. ಕಾಶಿಯಲ್ಲಿ ಓದಿದ ಒಬ್ಬ ಮಡಿವಂತ ಬ್ರಾಹ್ಮಣ. ವಿದ್ಯಾಭ್ಯಾಸ, ವೇದಧ್ಯಾನ ಮುಗಿಸಿಕೊಂಡು ಮನೆಗೆ ಬಂದಿದ್ದ. ಮದುವೆಯೂ ಆಯಿತು. ಗೃಹಸ್ಥಾಶ್ರಮಕ್ಕೆ ಕಾಲಿಟ್ಟ. ಮದುವೆಯಾಗಿ ಹದಿನೈದು ದಿನಗಳಾಗಿದ್ದವು. ಆದರೆ ಮಡಿ, ಮೈಲಿಗೆ ಇತ್ಯಾದಿಗಳ ನೆಪ ಹೇಳಿಕೊಂಡು ಹೆಂಡತಿಯನ್ನೇ ಮುಟ್ಟಿರಲಿಲ್ಲ. ಒಂದು ದಿನ ಈತನ ಹೆಂಡತಿ ಅವನ ಎದುರಿಗೆ ಊಟ ಮಾಡಲು ಕುಳಿತಳು. ಆಚಾರಿ ಮನಸ್ಸನ್ನು ಎಲ್ಲಿಯೋ ಇತ್ತು, ಬಾಯಿಯಲ್ಲಿ ಮಂತ್ರಗಳನ್ನು ಪಿಟಿಪಿಟಿ ಎನ್ನುತ್ತಾ

ಊಟ ಮಾಡುತ್ತಿದ್ದ. ಆಗೊಮ್ಮೆ ತನ್ನ ತಟ್ಟೆಯಲ್ಲಿ ಕೈಹಿಡುವುದನ್ನು ಬಿಟ್ಟು ಹೆಂಡತಿಯ ತಟ್ಟೆಯೊಳಗೆ ಕೈಯಿಟ್ಟು ತುತ್ತನ್ನು ತೆಗೆದುಕೊಂಡು ತಿಂದುಬಿಟ್ಟ. ಆ ಕೂಡಲೇ ಅವನ ಹೆಂಡತಿ, "ಅಲ್ಲಾ ರೀ ನೀವೆಂಥ ಕೆಲಸ ಮಾಡಿದ್ರಿ. ನನ್ನ ಎಂಜಲು ತಿಂದು ಬಿಟ್ರೆಲ್ಲಾ" ಎಂದಳು.

"ಥೂ ಉಚ್ಛಿಷ್ಟಸೂತಕವಾಯಿತು. ಈ ಸೂತಕಹರಣಕ್ಕೆ ಬೇಗ ಕಾಶಿಗೆ ಹೋಗಿ ಗಂಗಾಸ್ನಾನ ಮಾಡಿ ಬರುತ್ತೇನೆ" ಎನ್ನುತ್ತ ಎದ್ದು, ನಾರುಮಡಿಯುಟ್ಟು, ಕಾಶಿಗೆ ಪ್ರಯಾಣ ಬೆಳೆಸಿದ. ದಾರಿಯಲ್ಲಿ ನಡೆದು ಹೋಗುವಾಗೊಮ್ಮೆ ನೀರಡಿಕೆಯಾಯಿತು. ಎಲ್ಲೆಲ್ಲೂ ನೀರು ಸಿಗಲಿಲ್ಲ. ಸ್ವಲ್ಪ ದೂರದಲೊಂದು ಗುಡಿಸಲು. ಅಲ್ಲಿಗೆ ಹೋದ, "ಅಮ್ಮಾ ಇಲ್ಲಿ ಕುಡಿಯಲು ನೀರೆಲ್ಲಿ ಸಿಗುತ್ತದೆ. ಹೋಗಲಿ ನಿನ್ನಲ್ಲಿಯಾದರೂ ಇದ್ದರೆ ಕೊಡುವೆಯಾ ತಾಯಿ" ಎಂದು ಅಂಗಲಾಚಿ ಕೇಳಿದ.

"ಇಲ್ಲ, ಇಲ್ಲಿ ನೀರು ಸಿಗುವುದು ಬಹಳ ಕಷ್ಟ. ನನ್ನ ಮಗನೊಬ್ಬ ಪ್ರತಿದಿನ ಊರೊಳಗಿನಿಂದ ಕೆಲಸ ಮುಗಿಸಿಕೊಂಡು ಬರುತ್ತಾನೆ. ಆಗೊಂದು ಬಿಂದಿಗೆ ನೀರು ತರುತ್ತಾನೆ. ಅದರಲ್ಲಿ ನಮ್ಮ ಜೀವನ. ಇಂದು ಅವು ಖಾಲಿಯಾಗಿವೆ. ನಿಲ್ಲಿ ಒಂದು ಅಡಿಕೆಯಿದೆ. ಅದನ್ನು ಕೊಡುತ್ತೇನೆ. ಅದನ್ನು ಚೀಪಿ ಹಾಗೆ ಮತ್ತೆ ಕೊಟ್ಟು ಬಿಡು. ನಿನ್ನ ದಾಹ ಅಡಗಿ ಬಿಡುತ್ತೆ" ಎಂದು ಹೇಳಿ ಅಡಿಕೆಯೊಂದನ್ನು ತಂದುಕೊಟ್ಟಳು. ಆ ಬರಗೆಟ್ಟ ಆಚಾರಿ ಆ ಅಡಿಕೆಯನ್ನು ಚೀಪಲಿಲ್ಲ. 'ಕಟಂ' ಎಂದು ಕಡಿದುಬಿಟ್ಟ. ಕೂಡಲೆ ಆ ಅಜ್ಜಿ ಹೇಳಿದಳು. "ಎಂಥ ಕೆಲಸ ಮಾಡಿಬಿಟ್ಟೆಯಪ್ಪ. ಇದ್ದದು ಅದೊಂದೆ ಅಡಿಕೆ. ಈ ದಾರಿಯಲ್ಲಿ ಹೋಗಿಬರುವವರಿಗೆ ನೀರಡಿಕೆಯಾದರೆ ಈ ಅಡಿಕೆಯನ್ನೇ ಕೊಡುತ್ತಿದ್ದೆ. ಅವರು ಚೀಪಿ ಚೀಪಿ ಮರಳಿ ಕೊಟ್ಟು ಹೋಗುತ್ತಿದ್ದರು. ನೀನು ಅದನ್ನು ಇಲ್ದಂಗೆ ಮಾಡಿಬಿಟ್ಟೆಲ್ಲಾ?" ಎಂದಳು.

ಆಚಾರಿಗೆ ಧರ್ಮಸಂಕಟ ಪ್ರಾರಂಭವಾಯಿತು. ಮೊದಲು ಹೆಂಡತಿಯೊಬ್ಬಳ ಎಂಜಲಿನ (ಉಚ್ಛಿಷ್ಟ) ಸೂತಕ. ಈಗ ಕಂಡಕಂಡವರ ಎಂಜಲಿನ ಸೂತಕ ಎಂದುಕೊಂಡು 'ಶಾಂತಂ ಪಾಪಂ' ಎಂದು ವಟಗುಟ್ಟುತ್ತಾ ಬಾಯಿಯೊಳಗಿನ ಅಡಿಕೆಯನ್ನು 'ಥೂ' ಎಂದು ಉಗುಳಿ ಅಲ್ಲಿಂದ ಹೆಜ್ಜೆ ಹಾಕಿದ.

ಮುಂದೆ ನಡೆದ. ಬಂದೊಂದೂರಿಗೆ ಸೇರಿದ. ಹಸಿವಾಗಿತ್ತು. ಅಲ್ಲೊಬ್ಬ ಬ್ರಾಹ್ಮಣರ ಮುದುಕಿ ತುಳಸಿಕಟ್ಟೆಗೆ ಪೂಜೆ ಮಾಡುತ್ತಿದ್ದಳು. ಅವಳಲ್ಲಿಗೆ ಹೋಗಿ, "ಅಮ್ಮಾ, ನಾನು ಕಾಶಿಗೆ ಹೊರಟ್ಟಿದ್ದೇನೆ, ಹಸಿವಾಗಿದೆ ಊಟವೇನಾದರೂ ಸಿಗುವುದೇ ತಾಯಿ" ಎಂದು ಅಂಗಲಾಚಿದ. ಆ ಮುದುಕಿ ಒಂದು ಪತ್ರದೆಲೆಯನ್ನು ಕೊಟ್ಟು ಊಟಕ್ಕೆ ನೀಡಿದಳು. ಶ್ಯಾವಿಗೆ ಪಾಯಸ, ಅನ್ನ ಸಾರು ನೀಡಿದಳು. ಊಟ ಮಾಡಿದವನೆ ಎಲೆಯನ್ನು ಮುದುರಿ ಮುರಿದುಬಿಟ್ಟ. ಮುದುಕಿ ಒಳಗಿನಿಂದ ಬರುತ್ತಾ ಹೇಳಿದಳು, "ಯಪ್ಪಾ ಯಂಥ ಕೆಲ್ಸ ಮಾಡ್ಬಿಟ್ಟೆ. ನಾನು ಬಡವಿ. ಇದ್ದದ್ದು ಅದೊಂದೇ ಎಲೆ. ಯಾರಾದ್ರೂ ಊಟ ಕೇಳಿದ್ರೆ ತೊಳೆದಿಟ್ಟು ಇದೇ ವಿಲೆ ಕೊಡುತ್ತಿದ್ದೆ. ನೀನದನ್ನು ಮುರಿದುಬಿಟ್ಟೆಯಲ್ಲಾ" ಎಂದಳು.

ಆಚಾರಿಗೆ ಎಲ್ಲಿಲ್ಲದ ಸಂಕಟ ಪ್ರಾರಂಭವಾಯಿತು. ಅಂತೂ ಇಂತೂ ಕೊನೆಗೆ ಕಾಶಿಗೆ

ಬಂದ. ಗಂಗೆಯಲ್ಲಿ ಸ್ನಾನಕ್ಕೆಂದು ಇಳಿದ. ಒಮ್ಮೆ ಮುಳುಗಿ ಎದ್ದು, "ಇದು ಹೆಂಡತಿಯ ಎಂಜಲು ತಿಂದಿದ್ದಕ್ಕೆ ಪ್ರಾಯಶ್ಚಿತ" ಎಂದ. ಮತ್ತೊಮ್ಮೆ ಮುಳುಗಿ ಎದ್ದು, "ಇದು ಎಂಜಲು ಅಡಿಕೆ ತಿಂದಿದ್ದಕ್ಕೆ ಪ್ರಾಯಶ್ಚಿತ್ಯ" ಎನ್ನುತ್ತಾ ಮತ್ತೆ ಮೂರನೆ ಭಾರಿ ಮುಳುಗುವಾಗ "ಕೃಷ್ಣಾ ಕೃಷ್ಣಾ ಇದು ನೂರಾರು ಜನರು ಉಂಡ ಎಲೆಯಲ್ಲಿ ಉಂಡಿದ್ದಕ್ಕೆ" ಎಂತೆನ್ನುತ್ತ ಮುಳುಗಿ ಮೇಲೇಳುವಷ್ಟರಲ್ಲಿ ಅಲ್ಲೇ ಹತ್ತಿರದಲ್ಲೊಬ್ಬ ತನ್ನ ತಂದೆ ಶವ ಸಂಸ್ಕಾರದ ಅಸ್ತಿಗಳ ಬೂದಿಯನ್ನು ಬಿಟ್ಟಿದ್ದ. ಆ ಬೂದಿ ಗಾಳಿಯಲ್ಲಿ ಹಾರಿ ಬಂದು ಆಚಾರಿಯ ಮುಖಕ್ಕೆಲ್ಲ ಮೆತ್ತಿಕೊಂಡಿತ್ತಂತೆ! ಪಾಪ! 'ಪಾಪಿ ಸಮುದ್ರ ಹೊಕ್ಕರೂ ಮೊಳಕಾಲ್ಮಟ್ಟ ನೀರು' ಎಂಬ ಗಾದೆ ಮಾತಿನಂತಾಗಿತ್ತು ಆತನ ಪರಿಸ್ಥಿತಿ. ಇವೆಲ್ಲ ವಿಕೃತ ಆಚಾರಗಳು.

ಮನಃಶಾಂತಿ ಪಡೆಯುವುದಕ್ಕಾಗಿ ಈ ಆಚರಣೆಗಳನ್ನು ಮಾಡಿಕೊಂಡು ಬರುತ್ತಿರುವುದು. ಆಡಂಬರ ಹಾಗೂ ಭಯದಿಂದ ಮತ್ತಷ್ಟು ಮಾನಸಿಕ ಸಮತೋಲನತೆ ಹಾಳಾಗುವುದು. ಮಡಿ ಮೈಲಿಗೆಯ ಆಚಾರದಿಂದ ಗುರಿ ಮುಟ್ಟಲು ಸಾಧ್ಯವಿಲ್ಲ. ಇವು ಬೇಕಷ್ಟೆ. ಈ ಹಿಂದೆ ಹೇಳಿರುವಂತೆ ಮನಸ್ಸಿಗೂ ಮತ್ತು ಶರೀರಕ್ಕೂ ಅವಿನಾಭಾವ ಸಂಬಂಧವಿದೆ. ಬಾಹ್ಯಾಚಾರಗಳೆನಿಸಿಕೊಂಡಿರುವ ಸ್ನಾನ, ಪೂಜೆ, ಜಪತಪಾದಿಗಳಿಂದ ಮನಃಶಾಂತಿಯೋ, ನಿತ್ಯಾನಂದದ ಮುಕ್ತಿಯೋ ದೊರಕುವುದು ಸತ್ಯ. ಆದರೆ ಆ ಆಚರಣೆಗಳು ಸಹಜತೆಯಿಂದ ನಡೆದುಕೊಂಡು ಹೋಗುತ್ತಿರಬೇಕು. ಭಯದಿಂದ ಅಲ್ಲ. ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಈ ಸೂತಕಗಳ ಬಗ್ಗೆ ಹೀಗೆ ಹೇಳಲಾಗಿದೆ.

> ನ ತಸ್ಯ ಸೂತಕಂ ಕಿಂಚಿತ್ ಪ್ರಾಣಲಿಂಗಾಂಗಸಂಗಿನಃ ।
> ಜನ್ಮನೋತ್ಥಂ ಮೃತೋತ್ಥಂ ಚ ವಿದ್ಯತೇ ಪಾರಮಾರ್ಥತಃ ॥ (ಸಿ.ಶಿ.)

ಪ್ರಾಣಲಿಂಗಾಂಗಿ ಸಂಗಿಯಾದ ವೀರಶೈವನಿಗೆ, ಪಾರಮಾರ್ಥಿಕ ದಶೆಯಲ್ಲಿ ಜನನ ಸೂತಕ-ಮರಣ ಸೂತಕವಾಗಲಿ ಇರುವುದಿಲ್ಲ. ಅರ್ಥಾತ್ ಲೌಕಿಕಾಚಾರದ ದಶೆಯಲ್ಲಿ ಇರುವುದೆಂಬ ಭಾವವು. ಹಾಗೆ ಮುಂದಿನ ಶ್ಲೋಕಗಳಲ್ಲಿ ಮುಂದುವರಿಸಿ ಹೇಳಿದ್ದಾರೆ. ಲಿಂಗಧಾರಿಯಾದ ವೀರಶೈವ ಸ್ತ್ರೀಗೆ ಲಿಂಗಪೂಜೆ ಮಾಡಿಕೊಳ್ಳಲು ಋತುಸೂತಕವೂ ಇರುವುದಿಲ್ಲ. ಹಾಗೆ ದೀಕ್ಷಾಬದ್ಧ ಲಿಂಗಧಾರಿಗಳು ಯಾವ ಜಾತಿಯವರೆ ಇರಲಿ ಅವರಿಂದ ಮಾತ್ರ ಜಾತಿ ಸೂತಕವು ತಟ್ಟುವುದಿಲ್ಲ. (ಅಂದರೆ ಭವಿ ಮತ್ತು ಭಕ್ತರೆಂಬ ಎರಡೇ ಜಾತಿಗಳು) ಬಾಹ್ಯ ಕ್ರಿಯಾಚರಣೆಗೆ ಸೂತಕ ಹರಣ ಮಾಡಿಕೊಳ್ಳಬೇಕೆಂದರೆ ಸದ್ಗುರುವಿನ ಮುಖಾಂತರ ತ್ರಿವಿಧ (ಗುರು-ಲಿಂಗ-ಜಂಗಮವೆಂಬ) ಪಾದೋದಕವನ್ನು ಸ್ವೀಕಾರ ಮಾಡಬೇಕು. ಗುರು ಪಾದೋದಕದ ಮಹಿಮೆಯನ್ನು ಶ್ಲೋಕವೆಂದು ಹೀಗೆ ವರ್ಣಿಸಿದೆ.

> ಪಾ ಕಾರಂ ಪರಮಜ್ಞಾನಂ ದೋ ಕಾರಂ ದೋಷನಾಶನಂ ।
> ದ ಕಾರಂ ದಹ್ಯತೇ ಜನ್ಮ ಕ ಕಾರಂ ಕರ್ಮನಾಶನಂ ॥

ಪಾದೋದಕ ಮಾತ್ರದಿಂದ ಪರಮಜ್ಞಾನ ಪ್ರಾಪ್ತಿಯಾಗುವುದು. ಸರ್ವದೋಷಗಳೂ ಹರಣವಾಗುವುವು. ದುಃಖಮಯವಾದ ಈ ಭವದಲ್ಲಿ ಮತ್ತೆ ಹುಟ್ಟಿ ಬರುವುದು ತಪ್ಪುವುದು. ಕರ್ಮಗಳೆಲ್ಲವೂ ನಾಶವಾಗಿ ಹೋಗುವುವು.

ಗಂಗಾಪಾಪಂ, ಶಶಿತಾಪಂ, ದೈನಂಚ ಕಲ್ಪತರು ।
ಪಾಪಂಚ, ತಾಪಂಚ, ದೈನಂಚ, ಸಂತೋಹಂತಿ ಮಹಾಶಯಾ ॥

ಗಂಗೆ ಪಾಪವನ್ನು ತೊಳೆದರೆ, ಚಂದ್ರ ತನ್ನ ತಂಪಿನಿಂದ ತಾಪವನ್ನು ಕಳೆವನು, ಕಲ್ಪತರು (ತೆಂಗಿನ ಮರದ ಎಳೆನೀರು) ನಮ್ಮ ದಾಹವನ್ನು ಕಳೆವುದು. ಆದರೆ ಸದ್ಗುರುವಿನ ಪಾದೋದಕ ಮಾತ್ರದಿಂದ ಪಾಪ, ತಾಪ, ದಾಹಗಳೆಲ್ಲವೂ ನಾಶವಾಗುವುವು. ಆತನ ಪಾದೋದಕ ಸ್ವೀಕಾರ ಮಾತ್ರದಿಂದ ತಾಪತ್ರಯಗಳು ನಾಶವಾಗುವುವು. ಎಳೆನೀರಿನಂತೆ ಆ ಪಾದೋದಕ ನಮ್ಮ ದಾಹವನ್ನು (ತೃಷೆ) ಕಳೆವುದಾಗಿದೆ.

ಶ್ರೀಕೃಷ್ಣ ದೇವರಾಯ ತನ್ನ ಆಸ್ಥಾನದಲ್ಲಿನ ಪಂಡಿತರೊಂದಿಗೆ ವಿನೋದಿಸುತ್ತಾ ಕುಳಿತಿದ್ದ. ಆಗೊಮ್ಮೆ ಆತನಲ್ಲಿ ಒಂದು ವಿಚಾರ ಹೊಳೆಯಿತು. ಪಂಡಿತರೆಲ್ಲರಿಗೂ ಹೀಗೊಂದು ಸವಾಲು ಹಾಕಿದ. "ದೇವರಂತೆ ಜನರಿಂದ ಪೂಜಿಸಿಕೊಳ್ಳುವವನು, ಅನ್ನವನ್ನು ಪ್ರಸಾದಭಾವದಿಂದ ಉಣ್ಣುವನು, ಭಾರವಾಹನನು, ಜಲವಾಹನನು – ಈ ಎಲ್ಲವೂ ಒಬ್ಬನಲ್ಲಿಯೇ ಇರಬೇಕು. ಅಂತಹ ಮಹಾಶಯನನ್ನು ನಾಳೆ ಯಾರು ಕರೆತಂದು ತೋರಿಸುವಿರೋ ಅವರಿಗೆ ಸೂಕ್ತವಾದ ಬಹುಮಾನ ಕೊಡುವೆವು" ಎಂದು ಘೋಷಿಸಿದ.

ಮರುದಿನದ ಸಭೆಗೆ ಪಂಡಿತರೆಲ್ಲರೂ ಬಂದರು. ಯಾರೊಬ್ಬರಲ್ಲೂ ರಾಜನ ಪ್ರಶ್ನೆಗೆ ಉತ್ತರಿಸುವ ಶಕ್ತಿ ಇರಲಿಲ್ಲ. ಅದರಲ್ಲೊಬ್ಬ ಒಬ್ಬ ವ್ಯಕ್ತಿಗೆ ನಾರುಮಡಿ ಉಡಿಸಿ, ಮೈತುಂಬ ವಿಭೂತಿ ಬಳಿದು, ಕೊರಳಲ್ಲೊಂದು ಹಾರ ಹಾಕಿ, ಆತನ ಹೆಗಲ ಮೇಲೊಂದು ಕಾಯಿ ಇರಿಸಿ ಪೂಜೆ ಮಾಡಿದ್ದ ಕುಂಭ (ಬಿಂದಿಗೆ) ಒಂದು ಹೊರಿಸಿಕೊಂಡು ಸಭೆಗೆ ಕರೆತಂದಿದ್ದ. ಆತ ರಾಜನಿಗೆ ಹೇಳಿದ, "ಈತ ಕೊಡ ಹೊತ್ತಿದ್ದಾನೆ. ಕೊಡದಲ್ಲಿ ನೀರು ತುಂಬಿಕೊಂಡಿವೆ. ಆದ್ದರಿಂದ ಈತನು ಜಲವಾಹನನೂ, ಭಾರವಾಹನನೂ ಆಗಿದ್ದಾನೆ. ಹಾಗೆ ಕೆಲವರು ನಮಸ್ಕಾರವನ್ನು ಮಾಡುವರು. ಆದ್ದರಿಂದ ಈತ ಪೂಜ್ಯನು. ಮನಸ್ಸು ಮಾಡಿದರೆ ಈತ ಅನ್ನವನ್ನು ಪ್ರಸಾದರೂಪದಲ್ಲಿ ಊಟಮಾಡಬಹುದು" ಎಂದು ಹೇಳಿದ.

ರಾಜ ಇದ್ಯಾವುದನ್ನೂ ಒಪ್ಪಲಿಲ್ಲ. ಕೊನೆಗೆ ತೆನಾಲಿ ರಾಮಕೃಷ್ಣನ ಕಡೆಗೆ ತಿರುಗಿ "ಪಂಡಿತರೇ, ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?" ಎಂದ ಕೇಳಿದ.

ರಾಮಕೃಷ್ಣನು ತತ್‌ಕ್ಷಣ ಹೊರಹೋಗಿ ಓರ್ವ ಶಿವಯೋಗಿಯನ್ನು ಕರೆತಂದು "ಮಹಾಪ್ರಭೂ, ಈ ಶಿವಯೋಗಿಯನ್ನು ಸರ್ವರೂ ವಂದಿಸಿ ಗೌರವಿಸುತ್ತಾರೆ. ಹಾಗೆ ಈತನ ಕೈಯಲ್ಲಿರುವ ಜೋಳಿಗೆಗೆ ಹಣ ಹಾಕುತ್ತಾರೆ. ಅಂದರೆ ಈ ಜೋಳಿಗೆ ಸಾಮಾನ್ಯದ್ದಲ್ಲ. ಜಗತ್ತಿನ ಜನರೆಲ್ಲರ ಪಾಪಗಳ ಭಾರವನ್ನು ಹೊರುವಂತಹ ಜೋಳಿಗೆಯಿದು. ಈ ಶಿವಯೋಗಿಯ ಜೋಳಿಗೆಗೆ ಜನರು ಹಣ ಹಾಕುತ್ತಿರುವುದು ಭಿಕ್ಷೆಯೆಂದಲ್ಲ. ಜಗದ ಜನರ ಪಾಪಗಳನ್ನು ಹೋರುವ ಜೋಳಿಗೆ ಇದಾದುದರಿಂದ ಜನ ತಾವು ಮಾಡಿರುವ ಪಾಪಗಳನ್ನು ಕಳೆದುಕೊಳ್ಳಲು, ಆ ಭಾರವನ್ನು ಇದರಲ್ಲಿ ಕಾಣಿಕೆಯ ರೂಪದಲ್ಲಿ ಹಾಕುವರು. ಆದ್ದರಿಂದ ಭಾರವಾಹನನು ಈ ಶಿವಯೋಗಿ. ಇನ್ನು ಈ ಶಿವಯೋಗಿಯ ಕೈಯಲ್ಲಿ ಕಮಂಡಲವಿದೆ. ಅದರೊಳಗೆ ಆತನ

ಪಾದೋದಕ ಮಂತ್ರೋದಕವಿದೆ. ಆ ಪಾದೋದಕವನ್ನು ಯಾರೊಬ್ಬರ ಮೈಗೆ ಸಿಂಪಡಿಸಿದರೆ ಸಾಕು, ಅವರ ಭವರೋಗಗಳೆಲ್ಲವೂ ಹರಣವಾಗುವವು. ಈ ಯೋಗಿಯ ಕೈಯಲ್ಲಿ ಸದಾ ಕಮಂಡಲದಲ್ಲಿ ನೀರಿರುವುದರಿಂದ ಈತನು ಜಲವಾಹನನೂ ಆಗಿದ್ದಾನೆ" ಎಂಬ ಸಮಗ್ರವಾದ ಉತ್ತರವನ್ನು ಕೊಟ್ಟು ಕುಳಿತುಕೊಂಡ. ಕೃಷ್ಣದೇವರಾಯ ಸಂತುಷ್ಟನಾಗಿ ತೆನಾಲಿಗೆ ಬಹುಮಾನವನ್ನು ಕೊಟ್ಟ.

ವೀರಶೈವ ಧರ್ಮದವರಿಗೆ ಜನನಸೂತಕ, ಮರಣಸೂತಕ, ರಜಸ್ಸೂತಕ, ಜಾತಿಸೂತಕ, ಉಚ್ಛಿಷ್ಟ ಸೂತಕಗಳೇನಾದರೂ ಬಂದಲ್ಲಿ ಇಷ್ಟಲಿಂಗಾರ್ಚನೆ ನಿಲ್ಲಿಸುವಂತಿಲ್ಲ. ಆದರೆ ಲೌಕಿಕದ ಕೆಲವು ಕ್ರಿಯಾಚರಣೆಗಳಿಗೆ ಮಾತ್ರ ಪ್ರಾಯಶ್ಚಿತ್ಯ ಮಾಡಿಕೊಳ್ಳಲೇಬೇಕು. ಅದು ಶ್ರೀ ಗುರುವಿನ ಪರಮ ಪಾದೋದಕವೊಂದರಿಂದ ಮಾತ್ರ.

ಪಾದೋದಕದಲ್ಲಿ ಎರಡು ವಿಧ. ಒಂದು ಧೂಳ ಪಾದೋದಕ. ಮತ್ತೊಂದು ಕ್ರಿಯಾ ಪಾದೋದಕವೆಂದು. ಧೂಳ ಪಾದೋದಕವನ್ನು ಮನೆಗೆ, ಹೊಲಗದ್ದೆಗೆ ಸಿಂಪಡಿಸಿಕೊಳ್ಳಲಿಕ್ಕೆ. (ನಾವು ಸ್ವೀಕರಿಸಬಹುದು. ಆದರೆ ಅದರಿಂದ ಸೂತಕಗಳು ಹರಣವಾಗುವುದಿಲ್ಲ.) ಸೂತಕಹರಣಕ್ಕೆ ಮಾತ್ರ ಕ್ರಿಯಾ ಪಾದೋದಕವನ್ನೇ ತೆಗೆದುಕೊಳ್ಳಬೇಕು.

ಲಿಂಗಾರ್ಚನೆಯ ಮಾಡುವೆನಯ್ಯಾ
ಜಂಗಮವು ಮನೆಗೆ ಬರಲೆಂದು ।
ಜಂಗಮವು ಬಂದರೆ ಲಿಂಗಾರ್ಚನೆಯಂ ಬಿಟ್ಟು
ಜಂಗಮಾರ್ಚನೆಯ ಮಾಡುವೆನಯ್ಯಾ
ಲಿಂಗದಲ್ಲೇನುಂಟು? ಜಂಗಮದಲ್ಲೇನುಂಟೆಂದರೆ?
ಲಿಂಗದಲ್ಲಿ ಕುಲವುಂಟು, ಛಲವುಂಟು ।
ಫಲವುಂಟು ಪದವುಂಟು ಭವವುಂಟು ।
ಆ ಜಂಗಮದಲ್ಲಿ ಕುಲಂನಾಸ್ತಿ ಛಲಂನಾಸ್ತಿ
ಫಲಂನಾಸ್ತಿ ಪದಂನಾಸ್ತಿ ಭವಂನಾಸ್ತಿ
ಇದು ಕಾರಣನ ನಮ್ಮ ಬಸವಣ್ಣನು
ಜಂಗಮವೇ ಲಿಂಗವೆಂದು ನಂಬಿದ ಕಾರಣ
ಸ್ವಯಂ ಲಿಂಗವಾದ ಕಾಣ ಕೂಡಲ ಚೆನ್ನಸಂಗಮದೇವಾ ॥

ಜಂಗಮವೇ ಲಿಂಗದ ಮುಖವೆಂಬುದು ಶರಣರ ಅಭಿಪ್ರಾಯ. ವೀರಶೈವರ ಅಷ್ಟಾವರಣಗಳಲ್ಲಿ 'ಗುರು–ಲಿಂಗ–ಜಂಗಮ' ಎಂಬ ಮೊದಲಿನ ಈ ಮೂರು ಪೂಜಿಸಿಕೊಳ್ಳುವಂಥವುಗಳು. 'ಪಾದೋದಕ–ಪ್ರಸಾದ' ಈ ಎರಡು ಪೂಜಿಸಿದ ನಂತರ ಭಕ್ತನಿಗೆ ಸಿಗುವಂತಹ ಫಲಗಳು. 'ವಿಭೂತಿ–ರುದ್ರಾಕ್ಷಿ–ಮಂತ್ರ' ಈ ಮೂರು ಪೂಜೆಗೆ ಬೇಕಾದಂಥವುಗಳು. ಅಸ್ತು!

## ಪೂಜೆ ಸಾಮಗ್ರಿಗಳಿಂದ ಸಿಗಬಹುದಾದ ಲಾಭಗಳ ಸಂಕ್ಷಿಪ್ತ ಪರಿಚಯ

ಗೋಭಸ್ಮ : ಭಸ್ಮಸ್ನಾನ (ನಮ್ಮ ಶರೀರ ಪೂರ್ತಿ ಭಸ್ಮವನ್ನು ಸವರಿಕೊಳ್ಳುವುದು) ಭಸ್ಮಧೂಳಿನ (ಭಸ್ಮದ ಕಣಗಳನ್ನು ನಮ್ಮ ಶರೀರದ ಮೇಲೆ ಹಾಕಿಕೊಳ್ಳುವುದು) ಭಸ್ಮಧಾರಣ (ನಮ್ಮ ಶರೀರದ

ತುಂಬ ತ್ರಿಪ್ರಂಡ್ರವಾಗಿ ಧಾರಣ ಮಾಡಿಕೊಳ್ಳುವುದು. ಕನಿಷ್ಟ ಪಕ್ಷ ೧೬ ಸ್ಥಾನಗಳಲ್ಲಾದರೂ ಧರಿಸಲೇಬೇಕು) ಗೋಭಸ್ಮವು ನಮ್ಮ ಶರೀರದ ಮೇಲಿರುವ ವಿಷಾಣು (ಬ್ಯಾಕ್ಟಿರೀಯಾ)ಗಳನ್ನು ನಾಶಗೊಳಿಸುವಂತಹ ಆಯುರ್ವೇದದ ದಿವ್ಯ ಔಷಧಿಯು. ಚರ್ಮರೋಗಗಳು ನಿವಾರಣೆಯಾಗುವುವು. ಹಿಂದಿನ ಕಾಲದ ಜನರು ಶೌಚಕ್ರಿಯೆಗೆ ಹೋಗಿ ಬಂದ ನಂತರ ಈವತ್ತಿನ ದಿನಗಳಂತೆ ಸೋಪು ಹಚ್ಚಿ ಕೈತೊಳೆಯುತ್ತಿರಲಿಲ್ಲ. ಒಲೆಯ ಬೂದಿಯನ್ನು ಕೈಗೆ ತಿಕ್ಕಿಕೊಂಡು ನಂತರ ತೊಳೆದುಕೊಳ್ಳುತ್ತಿದ್ದರು. ಇದು ವೈಜ್ಞಾನಿಕವಾಗಿಯೂ ಸತ್ಯದ ವಿಷಯ. ಈ ಭಸ್ಮದಲ್ಲಿ ಮೆಂಥಾಲ್, ಅಮೋನಿಯಾ, ಫಿನಾಲ್, ಫಾರ್ಮೋಲಿನ್ ಇತ್ಯಾದಿ ನಂಜುನಿವಾರಕ ಸತ್ವಗಳಿವೆ.

**ರುದ್ರಾಕ್ಷಿಧಾರಣೆ :** ಶರೀರಕ್ಕೆ ರುದ್ರಾಕ್ಷಿ ಸ್ಪರ್ಶವಾಗುತ್ತಿದ್ದರೆ ರಕ್ತದೊತ್ತಡ ಹಾಗೂ ಹೃದಯ ದೌರ್ಬಲ್ಯತೆ ಇಂತಹ ಅಸಾಧ್ಯ ರೋಗಗಳನ್ನು ನಿಯಂತ್ರಣದಲ್ಲಿಡುತ್ತವೆ. ಇದು ಆಧುನಿಕ ವಿಜ್ಞಾನಿಗಳ ಅಭಿಪ್ರಾಯ.

**ಪತ್ರಿ-ಪುಷ್ಪ :** ಬಿಲ್ವಪತ್ರಿಯನ್ನು ಲಿಂಗದ ಮೇಲೆ ಬೋರಲಾಗಿ ಧರಿಸಬೇಕು. ಹೂಗಳನ್ನು ಲಿಂಗದ ಮೇಲೆ ಮೇಲ್ಮುಖ ಮಾಡಿ ಇಡಬೇಕು. ಬಿಲ್ವಪತ್ರಿಯು ಹಿಂಭಾಗದ ಮೂಲಕ 'ಫಾರ್ಮೋನಾ' ಎಂಬ ರಸಾಯನಿಕವನ್ನು ಹೊರಸೂಸುವುದು. ಅದು ಶ್ವಾಸದೊಡನೆ ದೇಹ ಸೇರುವುದು. ಮೂಗಿನಲ್ಲಿರುವ ರಕ್ತವಾಹಿನಿಗಳು, ಪುಪ್ಪುಸದಲ್ಲಿರುವ ರಕ್ತವಾಹಿನಿಗಳು ಆ ರಾಸಾಯನಿಕವನ್ನು ಹೀರಿಕೊಳ್ಳುವುವು. ಹೀಗೆ ರಕ್ತದೊಡನೆ ಫಾರ್ಮೋನ್ ಮೆದುಳು ತಲುಪಿ ಮೆದುಳಿನ ಕೇಂದ್ರಗಳ ಮೇಲೆ ತನ್ನ ಪ್ರಭಾವವನ್ನು ಬೀರಿ ಪೂಜೆ ಮಾಡುತ್ತಿರುವ ವ್ಯಕ್ತಿಯನ್ನು ಶಾಂತವಾಗಿರಿಸುವಂತೆ ಮಾಡುವುದು. ಈ ಬಿಲ್ವಪತ್ರಿಯನ್ನು ತುಳಿಯಬಾರದೆಂಬ ಕಡ್ಡಾಯವಿದೆ. ಆದರೆ ಪೂಜೆಯ ಸಂದರ್ಭದಲ್ಲಿ ಮಾತ್ರ ಶಿವಪೂಜೆಗೆ ಕೂಡುವಂತಹ ವ್ಯಕ್ತಿ ತಾನು ಕೂಡುವ ಪೀಠದ ಮೇಲೆ ಬೋರಲವಾಗಿಡಬೇಕು. ಇದರಿಂದ ಮೂಲವ್ಯಾದಿಯನ್ನು ನಿಯಂತ್ರಿಸಬಹುದು. ದಿನಾಲು ಈ ಬಿಲ್ವಪತ್ರಿಯನ್ನು ಸೇವನೆ ಮಾಡುವುದರಿಂದ ವಾತಾ-ಪಿತ್ತ-ಕಫಗಳೆಂಬ ತ್ರಿದೋಷ ರೋಗಗಳನ್ನು ನಿಯಂತ್ರಿಸಬಹುದು.

**ಕರ್ಪೂರ :** ಪರಿಶುದ್ಧವಾದ ಕರ್ಪೂರವನ್ನು ನಾವು ಪೂಜೆಗೆ ಕೂಡುವ ಸ್ಥಳದಲ್ಲಿ ಹಚ್ಚುವುದರಿಂದ, ಆ ಸ್ಥಳದಲ್ಲಿ ಜೀವಕ್ಕೆ ಹಾನಿಯಾಗುವಂತಹ ವಿಷಾನಿಲ (ಕಾರ್ಬನ್ ಮೋನಾಕ್ಸೈಡ್)ವನ್ನು ಇಲ್ಲವಾಗಿಸಬಹುದು.

**ಮಂತ್ರ :** ಮಂತ್ರೋಚ್ಛಾರದ ಮೂಲಕ ಉತ್ತಮ ಭಾವತರಂಗಗಳನ್ನು ಅಲ್ಲಿ ಹರಿಬಿಟ್ಟು ಅಲ್ಲಿನ ವಾತಾವರಣ ಶುದ್ಧಿಗೊಳಿಸಿದಾಗ ಆ ಸ್ಥಾನದಲ್ಲಿ ಮತ್ತಷ್ಟು ಶಾಂತಿ ಲಭ್ಯವಾಗುವುದು.

ಯಾವೊಂದು ಪೂಜಾಕ್ರಿಯೆಗಳು ಕಾಕತಾಳೀಯವಲ್ಲ. ವೈಜ್ಞಾನಿಕವಾದವು. ಆದರೆ ಈ ಕ್ರಿಯಾದಿಗಳನ್ನು ಆಡಂಬರ ಹಾಗೂ ಭಯದಿಂದ ಆಚರಿಸದೆ ಸಹಜತೆಯಿಂದ ಆಚರಿಸಿದ್ದಾದರೆ ಸತ್ಯವಾಗಿಯೂ ಸದ್ಗುರಿ ತಲುಪಬಹುದು. ಇನ್ನೂ ಹೆಚ್ಚಿನ ವಿಷಯಾದಿಗಳ ಬಗ್ಗೆ ನಮ್ಮದೇ ಆದಂತಹ "ಪರಮಾತ್ಮ-ಜೀವಾತ್ಮ-ದೇಹಾತ್ಮ" ಎಂಬ ಗ್ರಂಥದಲ್ಲಿ ಬರೆಯಲಾಗಿದೆ. ಆಸಕ್ತರು ಆ ಗ್ರಂಥವನ್ನು ನೋಡಬಹುದು.

# ಭಕ್ತಿಯೋಗ

ಭಕ್ತಿ ಎಂದರೆ ಭಯವಲ್ಲ. ಅದು ಅಖಂಡ ಪ್ರೇಮ. ಯೋಗವೆಂದರೆ ಕೂಡುವಿಕೆ, ಒಂದಾಗುವಿಕೆ. ಇಲ್ಲಿ ಜೀವ, ಶಿವನಲ್ಲಿ ಸಮರಸ ಹೊಂದುವುದು ಅರ್ಥಾತ್ ಲಗ್ನವಾಗುವುದು.

ನಾವು ದಾಂಪತ್ಯಯೋಗವೆನ್ನುತ್ತೇವೆ. ಗಂಡ ಹೆಂಡತಿ ಇಬ್ಬರೂ ಒಬ್ಬರನ್ನೊಬ್ಬರು ಅಗಾಧವಾಗಿ ಪ್ರೀತಿಸುತ್ತಿದ್ದರೆ ಮಾತ್ರ. ಅವರ ದಾಂಪತ್ಯ ಗಟ್ಟಿಯಾಗಿ ಉಳಿಯಲು ಸಾಧ್ಯ. ಅದುವೇ ಲಗ್ನ (ಕೂಡುವಿಕೆ) ಇದನ್ನೇ ಶಂಕರಾಚಾರ್ಯರು ಹೀಗೆ ಹೇಳಿರುವುದು.

ಬಾಲಸ್ಥಾವತ್ ಕ್ರೀಡಾಸಕ್ತಾ; ತರುಣಸ್ಥಾವತ್ ತರುಣೀರಕ್ತ ।
ವೃದ್ಧಾಸ್ಥಾವತ್ ಚಿಂತಾರ್ಮಜ್ಞಾ ; ಪರಬ್ರಹ್ಮಣೇಕೋ ನऽಪಿಲಗ್ನ: ॥

ಬಾಲ್ಯದಲ್ಲಿ ಮನಸ್ಸು ಕ್ರೀಡೆಯಲ್ಲಿ ಲಗ್ನವಾಗಿರುತ್ತದೆ. ತಾರುಣ್ಯದಲ್ಲಿ ಮನಸ್ಸು ತರುಣಿಯ ಮೇಲೆ ಲಗ್ನವಾಗಿರುತ್ತದೆ. ವೃದ್ಧಾಪ್ಯದಲ್ಲಿ ಮನಸ್ಸು ಕಳೆದುಹೋದ ಹಳೆಯ ನೆನಪುಗಳ ಚಿಂತೆಯಲ್ಲಿ ಮಗ್ನವಾಗಿರುತ್ತದೆ. ಹೀಗೆ ಜೀವನ ಕಳೆದ ನಮ್ಮ ಮನಸ್ಸಿನಲ್ಲಿ, ಆ ಪರಶಿವ ಬ್ರಹ್ಮನ ಲಗ್ನವಾದರೂ ಹೇಗಾಗುವುದು ಎಂದು ಮಾರ್ಮಿಕವಾಗಿ ಹೇಳಿದ್ದಾರೆ.

ಭಕ್ತಿ ಎಂಬುದು ನಾಲ್ಕು ವಿಧವಾಗಿರುವುದು. ಅದನ್ನೇ ಶ್ರೀಕೃಷ್ಣಪರಮಾತ್ಮ ಭಗವದ್ಗೀತೆಯ ಏಳನೇ ಅಧ್ಯಾಯದಲ್ಲಿ ಹೀಗೆ ಹೇಳಿದ್ದಾನೆ.

ಚತುರ್ವಿಧಾ ಭಜಂತೇ ಮಾಂ ಜನಾ: ಸುಕೃತಿನೋऽರ್ಜುನ ।
ಆರ್ತೋರ್ ಜಿಜ್ಞಾಸುರರ್ಥಾರ್ಥಿ ಜ್ಞಾನಿ ಚ ಭರತವರ್ಷಭ ॥ (ಭ.ಗೀ.)

"ಭರತವಂಶೀಯರಲ್ಲಿ ಶ್ರೇಷ್ಠನಾದ ಅರ್ಜುನಾ, ಉತ್ತಮ ಕರ್ಮಗಳನ್ನು ಮಾಡುವ ಅರ್ಥಾರ್ಥಿ. ಆರ್ತ, ಜಿಜ್ಞಾಸು ಮತ್ತು ಜ್ಞಾನಿ – ಹೀಗೆ ನಾಲ್ಕು ಪ್ರಕಾರದ ಭಕ್ತ ಜನರು ನನ್ನನ್ನು ಭಜಿಸುತ್ತಿದ್ದಾರೆ ಎಂಬ ಅರ್ಥವು.

ಒಬ್ಬ ತಂದೆಗೆ ನಾಲ್ಕು ಜನ ಮಕ್ಕಳಿದ್ದರು. ಒಮ್ಮೆ ಅವರೆಲ್ಲರೂ ಒಟ್ಟಿಗೆ ಸೇರಿ ಆಟವಾಡುತ್ತಿದ್ದರು. ಆ ಸಂದರ್ಭಕ್ಕೆ ಸರಿಯಾಗಿ ತಂದೆ ಕೈಯಲ್ಲಿ ಹಣ್ಣಗಳನ್ನು ಹಿಡಿದುಕೊಂಡು ಬಂದ. ಆ ನಾಲ್ಕು ಮಕ್ಕಳು ತಂದೆ ಬಂದದ್ದನ್ನು ನೋಡಿದರು. ಒಬ್ಬ ಮಗ ತಂದೆಯ ಹತ್ತಿರ ಅಳುತ್ತಾ ಓಡೋಡಿ ಬಂದು 'ನನಗೆ ಹಣ್ಣು ಬೇಕು ಕೊಡು' ಎಂದ. ಮತ್ತೊಬ್ಬ ಮಗ ಅಳದೆಲೆ 'ನನಗೂ ಬೇಕು' ಎಂದು ಕೇಳಿದ. ಮೂರನೆಯವನು ಮಾತ್ರ ಅಪ್ಪನನ್ನು ನೋಡುತ್ತಿದ್ದನೇ ಹೊರತು ಕೇಳಲಿಲ್ಲ. ಅರ್ಥಾತ್ ಆಸೆಯಿತ್ತು ಆದರೂ ಕೇಳಲಿಲ್ಲ. ಕೊನೆಯವನು ತಂದೆಯನ್ನು ನೋಡಿದ್ದರೂ ನೋಡದವನಂತೆ ಇದ್ದ. ತನ್ನ ಪಾಡಿಗೆ ತಾನು ಆಟವಾಡುತ್ತಿದ್ದ. ತಂದೆ ಭೇದ ಮಾಡದೆ ನಾಲ್ಕೂ ಮಕ್ಕಳಿಗೂ ಒಂದೊಂದು ಹಣ್ಣು ಕೊಟ್ಟ. ಆದರೆ ಅವನ ಪ್ರೇಮ ಕೇಳದಿದ್ದ ಮಗನ ಮೇಲೆ ಹೆಚ್ಚಿತ್ತು. ಅರ್ಥ ಈ ಕೆಳಗಿನಂತಿದೆ.

ಅಳುತ್ತಾ ಕೇಳುವವನು ಆರ್ತ ಭಕ್ತ. ಅಳದೆ ದುರಾಸೆಯಿಂದ ಬಂದು ಕೇಳಿ

ಪಡೆಯುವವನು ಅರ್ಥಾರ್ಥಿ. ಆಸೆಯಿದ್ದೂ ಕೇಳದೆ ಪಡೆಯುವವನು ಜಿಜ್ಞಾಸು ಭಕ್ತ. ಆಸೆಯಿಲ್ಲದೆ ಪಡೆಯುವವನು ಜ್ಞಾನಿಭಕ್ತ. ಇವರೇ ಶರಣರು, ಸಂತರು, ಮಹಾಂತರು.

ಯಾರು ಶಾರೀರಿಕ ಮತ್ತು ಮಾನಸಿಕ ಸಂತಾಪ. ವಿಪತ್ತು, ಶತ್ರುಭಯ, ರೋಗ, ಅಪಮಾನ ಇತ್ಯಾದಿ ಭಯ ಹಾಗೂ ದು:ಖಾದಿ ನಿವಾರಣೆಗಳಿಗೆ ತಾತ್ಕಾಲಿಕವಾಗಿ ಅವುಗಳಿಂದ ಬಿಡುಗಡೆ ಹೊಂದಲು ಭಗವಂತನನ್ನು ಅನನ್ಯ ಭಕ್ತಿಯಿಂದ ಯಾರು ಭಜಿಸುತ್ತಾರೋ ಅವರು ಆರ್ತಭಕ್ತರು.

ದುಷ್ಟ ದುಶ್ಯಾಸನನು ದುರ್ಯೋಧನನ ಆಜ್ಞೆಯಂತೆ ದ್ರೌಪದಿಯನ್ನು ಸಭೆಗೆ ಎಳೆದು ತರುತ್ತಾನೆ. ಸಭೆಯ ಮಧ್ಯದಲ್ಲಿ ಬಲಪೂರ್ವಕವಾಗಿ ಏಕವಸ್ತ್ರಳಾದ ದ್ರೌಪದಿಯ ಸೀರೆಯನ್ನು ಎಳೆಯಲಾರಂಭಿಸುವನು. ಸಭೆಯಲ್ಲಿದ್ದ ಯಾವ್ರೊಬ್ಬ ವೀರರು ಅವಳ ರಕ್ಷಣೆಗೆ ಬರದೆ ಹೋಗುವರು. ಆಗ ದ್ರೌಪದಿಯು ತಾನು ಸರ್ವಥಾ ಅಸಹಾಯಕಳೆಂದು ಭಾವಿಸಿಕೊಂಡು; ತನ್ನ ಪರಮಬಂಧುವಾದ ಶ್ರೀಕೃಷ್ಣ ಪರಮಾತ್ಮನು ಮಾತ್ರ ನನ್ನನ್ನು ಕೈಬಿಡಲಾರ. ಅವನು ಬರದೆ ಸುಮ್ಮನಿರಲಾರನು ಎಂಬ ದೃಢವಾದ ನಂಬಿಕೆಯಿಂದ ಹೀಗೆ ಸ್ಮರಿಸುವಳು.

ಕೃಷ್ಣ ಕೃಷ್ಣಾ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಭಾವನ ।
ಪ್ರಪನ್ನಾಂ ಪಾಹಿ ಗೋವಿಂದ ಕುರುಮಧ್ಯೇಽವಸೀದತೀಮ್॥(ಮ.ಹಾ.ಸಭಾ ೬೭)

"ಹೇ ಕೃಷ್ಣ ಕೃಷ್ಣಾ, ಮಹಾಯೋಗಿ, ಹೇ ವಿಶ್ವಾತ್ಮಾ! ವಿಶ್ವಭಾವನೇ, ಹೇ ಗೋವಿಂದಾ, ನಾನು ಕೌರವರ ಕೈಯಲ್ಲಿ ಸಿಕ್ಕಿಬಿದ್ದು ಬಹಳಷ್ಟು ದು:ಖಕ್ಕೀಡಾಗಿದ್ದೇನೆ. ನಿನಗೆ ಶರಣಾಗತಳಾಗಿ ಬಂದಿರುವ ನನ್ನನ್ನು ಕಾಪಾಡು ಕಾಪಾಡು" ಎಂದು ಭಗವಂತನಲ್ಲಿ ಮೊರೆಹೋಗುವಳು. ಹೀಗೆ ದ್ರೌಪದಿಯ ಕರೆಯನ್ನು ಆಲಿಸಿದ ಭಗವಂತನ ಹೃದಯ ಕರಗಿತು. ಆಗ ಭಗವಂತ ಹೇಗೆ ಬಂದನೆಂಬುದರ ಬಗ್ಗೆ ಈ ಕೆಳಗಿನ ಶ್ಲೋಕ ಹೇಳುತ್ತಿದೆ.

ತ್ಯಕ್ತ್ವಾಶಯ್ಯಾಪನಂ ಪದ್ಭ್ಯಾಂ ಕೃಪಾಲು: ಕೃಪಾಯಾಭ್ಯಗಾತ್ ।

"ಕೃಪಾಳುವಾದ ಭಗವಂತನು, ಕೃಪಾಪರವಶನಾಗಿ, ಶಯ್ಯೆಯನ್ನು ಬಿಟ್ಟು ಕಾಲ್ನಡಿಗೆಯಲ್ಲಿಯೇ ಓಡೋಡಿ ಬಂದನು.

ಆ ಕೂಡಲೇ ಆ ದಾನವರ ಸಭೆಯಲ್ಲಿ ಭಗವಂತನ ವಸ್ತ್ರಾವತಾರ ನಡೆಯಿತು. ಅಂದರೆ ದ್ರೌಪದಿಯ ಒಂದು ವಸ್ತ್ರದಿಂದ ಎರಡನೆಯದು, ಮೂರನೆಯದು. ಹೀಗೆ ಬೇರೆ ಬೇರೆ ಬಣ್ಣಗಳಿಂದ ಕೂಡಿದ ವಸ್ತ್ರಗಳೇ ಬರಲಾರಂಭಿಸಿದವು. ಅಲ್ಲಿ ವಸ್ತ್ರಗಳ ರಾಶಿಯೇ ಬಿದ್ದಿತು. ಎಳೆದೆಳೆದು ಸುಸ್ತಾದ ದುಶ್ಯಾಸನನು ಕುಸಿದು ನೆಲದಲ್ಲಿ ಕುಳಿತುಬಿಟ್ಟ. ಇದು ಆರ್ತಭಕ್ತೆಯ ಕೂಗು. ಆ ಕೂಗಿಗೆ ಭಗವಂತ ನೀಡಿದ ಪ್ರತಿಫಲ.

ಎರಡನೆಯದಾಗಿ ಅರ್ಥಾರ್ಥಿ ಭಕ್ತರ ಲಕ್ಷಣಗಳೇನೆಂದರೆ ಪತ್ನಿ, ಪುತ್ರ, ಐಶ್ವರ್ಯ, ಅಧಿಕಾರ, ಸ್ವರ್ಗಾದಿ ಭೋಗಾಪೇಕ್ಷೆ. ಇತ್ಯಾದಿ ಕಾಮನೆವುಳ್ಳವರಾಗಿ ಭಗವಂತನಲ್ಲಿ ಭಕ್ತಿ ತೋರುವವರು. ವಾಲಿಯ ತಮ್ಮ (ಸಹೋದರ) ಸುಗ್ರೀವ ಶ್ರೀರಾಮನಲ್ಲಿ ಬಂದದ್ದು ಅರ್ಥಾರ್ಥಿ

ಭಕ್ತನಾಗಿ. ರಾವಣನ ತಮ್ಮ ವಿಭೀಷಣನೂ ಸಹ ಅರ್ಥಾರ್ಥಿ ಭಕ್ತನಾಗಿ ರಾಮಚಂದ್ರನಲ್ಲಿಗೆ ಬಂದಿದ್ದ.

ಸ್ವಾಯಂಭುವ ಮನುವಿನ ಮಗ ಉತ್ತಾನಪಾದ. ಉತ್ತಾನಪಾದನಿಗೆ ಇಬ್ಬರು ಹೆಂಡಂದಿರು. ಒಬ್ಬಳು ಸುನೀತಿ, ಮತ್ತೊಬ್ಬಳು ಸುರುಚಿ. ಹಿರಿಯವಳಾದ ಸುನೀತಿಗೆ ಧ್ರುವನೆಂಬುವನೂ, ಕಿರಿಯವಳಾದ ಸುರುಚಿಗೆ ಉತ್ತಾಮ ಎಂಬ ಇಬ್ಬರು ಮಕ್ಕಳು ಹುಟ್ಟಿದ್ದರು. ಉತ್ತಾಮಪಾದನು ಕಿರಿಯ ಹೆಂಡತಿಯಾದ ಸುರುಚಿಯ ಮೇಲೆ ಹೆಚ್ಚು ಪ್ರೀತಿವುಳ್ಳವನಾಗಿದ್ದ. ಆದ್ದರಿಂದ ಅವನು ಅಲ್ಲಿದ್ದಾಗವೊಮ್ಮೆ ಧ್ರುವನು ಬಂದು ತನ್ನ ತಂದೆಯ ತೊಡೆಯ ಮೇಲೆ ಕುಳಿತುಕೊಂಡ. ಸುರುಚಿಯಾಗ ಅಲ್ಲಿಗೆ ಬಂದು ತಿರಸ್ಕಾರಭಾವದಿಂದ ಅವನನ್ನು ಕೆಳಗಿಳಿಸಿ ಹೀಗೆ ಹೇಳಿದಳು, "ಸುನೀತಿಯ ಗರ್ಭದಲ್ಲಿ ಹುಟ್ಟಿರುವ ನಿನಗೆ ಇಂತಹ ಭಾಗ್ಯ ಸಿಗಲು ಸಾಧ್ಯವಿಲ್ಲ. ನೀನು ಮುಂದೆಯೂ ಸಿಂಹಾಸನದ ಮೇಲೆ ಕೂಡ್ರಲು ಅನರ್ಹನಿರುವೆ. ಯಾಕೆಂದರೆ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿ ಬಂದಿಲ್ಲ. ಹೋಗು ಶ್ರೀಹರಿಯನ್ನು ಆರಾಧಿಸು. ಅವನಿಂದ ವರ ಪಡೆದುಕೊಂಡು ಬಾ" ಎಂದು ಗದರಿಸಿ ಕಳುಹಿಸಿದಳು.

ಮಲತಾಯಿಯ ಮಾತುಗಳಿಂದ ಧ್ರುವನಿಗೆ ಬಹಳ ದು:ಖವಾಯಿತು. ತನ್ನ ತಾಯಿಯಲ್ಲಿಗೆ ಬಂದು ನಡೆದುದ್ದನ್ನೆಲ್ಲ ಹೇಳಿದ. ಅದಕ್ಕುತ್ತರವಾಗಿ ಸುನೀತಿಯೂ ಸಹ, "ಹೌದು, ಆಕೆ ಸರಿಯಾಗಿಯೇ ಹೇಳಿದ್ದಾಳೆ. ನೀನು ರಾಜನಾಗಬೇಕೆಂದರೆ ಆ ಭಗವಂತನನ್ನು ಕುರಿತು ತಪಸ್ಸು ಮಾಡು" ಎಂದು ಹೇಳಿದಳು.

ಧ್ರುವ ತಾಯಿಯ ಮಾತನ್ನು ಕೇಳಿ ತಪಸ್ಸು ಮಾಡಲು ಹೊರನಡೆದ. ದಾರಿಯಲ್ಲಿ ನಾರದರ ಭೇಟಿಯಾಯಿತು. ಅವನಿಂದ ನಾರದರಿಗೆ ವಿಷಯವೆಲ್ಲವೂ ತಿಳಿಯಿತು. ರಾಜ್ಯ ಕೊಡಿಸುವುದಾಗಿ ಹಿಂದಕ್ಕೆ ಕಳುಹಿಸುವ ಪ್ರಯತ್ನ ಮಾಡಿದರು. ಧ್ರುವ ತನ್ನ ನಿರ್ಧಾರ ಬದಲಿಸಲಿಲ್ಲ. ಕೊನೆಗೆ ನಾರದರು "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಕ್ಷರಿ ಮಂತ್ರವನ್ನು ಉಪದೇಶಗೈದು ಧ್ಯಾನಕ್ಕೆ ಕಳುಹಿಸಿದರು.

ಯಮುನಾ ತಟದ ಮಧುವನದಲ್ಲಿ ತಪಸ್ಸನ್ನಾರಂಭಿಸಿದ. ಅವನ ಏಕನಿಷ್ಠೆಯ ಭಕ್ತಿಗೆ ಭಗವಂತ ಪ್ರಸನ್ನನ್ನಾಗಿ ದರ್ಶನ ಕೊಟ್ಟ. ಧ್ರುವ ತನ್ನ ಬಯಕೆಯನ್ನು ಭಗವಂತನಲ್ಲಿ ಹೇಳಿಕೊಂಡ. ಮತ್ತೆ ಮುಂದೆ ಧ್ರುವನಿಗೆ ಭಗವಂತನ ಅನುಗ್ರಹದಿಂದ ಪಟ್ಟಾಭಿಷೇಕ ನಡೆಯಿತು. ಹೀಗೆ ತಮ್ಮ ಕಾಮನೆಗಳನ್ನು ಈಡೇರಿಸಿಕೊಳ್ಳುವುದೇ ಅರ್ಥಾರ್ಥಿ ಭಕ್ತನ ಲಕ್ಷಣ.

ಮೂರನೆಯದಾಗಿ ಜಿಜ್ಞಾಸು ಭಕ್ತನ ಲಕ್ಷಣಗಳೇನು? ಅಂಥವರು ಯಾರು ಎಂಬುದು.

ಮನೆ, ಮಠ, ಹೆಂಡತಿ, ಮಕ್ಕಳು, ಅಧಿಕಾರ, ಐಶ್ವರ್ಯ, ರೋಗರುಜಿನ ಇತ್ಯಾದಿ ಯಾವುಗಳೊಂದರ ಪರಿವೇ ಇಲ್ಲದೆ ಏಕ ಮಾತ್ರ ಸತ್ಯವನ್ನು ಪರಮಾತ್ಮನನ್ನು ತತ್ವದ ಮೂಲಕ ತಿಳಿದುಕೊಳ್ಳಬೇಕೆಂಬ ಮಹದಿಚ್ಛೆವುಳ್ಳವನೇ ಜಿಜ್ಞಾಸು ಭಕ್ತ. ಇಂಥವರಲ್ಲಿ ಶಂಕರಾಚಾರ್ಯರು ಮತ್ತು ಬುದ್ಧ.

ಕೇರಳ ರಾಜ್ಯದ ಕಾಲಟಿ ಗ್ರಾಮದಲ್ಲಿ ವೇದಾಧ್ಯಾಯ ಸಂಪನ್ನರಾದಂತಹ ಆಚಾರ್ಯರೊಬ್ಬರಿದ್ದರು. ಅವರ ಹೆಸರು ಶಿವಗುರು. ಇವರ ಹೆಂಡತಿಯ ಹೆಸರು ಆರ್ಯಾಂಬ. ಮದುವೆಯಾಗಿ ಇಪ್ಪತ್ತು ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ಕೊನೆಗೆ ಇವರ ದೈವಭಕ್ತಿಗೆ ಶಿವನ ಅನುಗ್ರಹವಾಯಿತು. ಗಂಡು ಮಗುವೊಂದು ಜನಿಸಿತು. ಆ ಮಗುವಿಗೆ 'ಶಂಕರ' ಎಂಬ ಹೆಸರಿಡಲಾಯಿತು.

ಶಂಕರನಿಗೆ ಐದು ವರ್ಷ ತುಂಬಿವೆ. ಆಗ ಇವರ ತಂದೆ ಅಕಾಲ ಮೃತ್ಯುವಿಗೆ ತುತ್ತಾದರು. ಆ ಪಿತೃವಿಯೋಗ ಬಾಲಕ ಶಂಕರನ ಎಳೆ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರಿತು. ತಂದೆಯ ಮರಣದ ಸಂದರ್ಭದಲ್ಲಿ ಬಂದವರೆಲ್ಲರೂ "ಎಲ್ಲರೂ ಒಂದು ದಿನ ಮರಣ ಹೊಂದಲೇಬೇಕು. ಹುಟ್ಟಿದವರೊಂದು ದಿನ ಸಾಯಲೇಬೇಕು" ಎಂತೆಂದು. ಆ ನುಡಿಗಳು ಆತನನ್ನು ಬಹುಕಾಲ ಕಾಡಿಸಿದವು. ಅಲ್ಲದೆ "ಹಾಗಾದರೆ ನಾವು ಹುಟ್ಟುವುದೇತಕ್ಕೆ?" ಎಂಬ ಪ್ರಶ್ನೆಯು ಎಡಬಿಡದೆ ಕಾಡಹತ್ತಿತು. ಮೇಧಾವಿಯಾದ ಬಾಲಕ ಮತ್ತಷ್ಟು ಮೌನಿಯಾದ. ಹುಟ್ಟುಸಾವುಗಳ ಗುಟ್ಟು ತಿಳಿಯಬೇಕೆಂಬ ಜಿಜ್ಞಾಸೆ ಹೆಚ್ಚಾಯಿತು. ತಾಯಿಯಿಂದಾಗಲೀ ಮತ್ಯಾವ ಹಿರಿಯ ಪಂಡಿತರಿಂದಾಗಲಿ ತಮ್ಮ ಪ್ರಶ್ನೆಗೆ ಸಮರ್ಪಕವಾದ ಉತ್ತರ ಸಿಗಲಿಲ್ಲ. ವೇದಾಂತ ತತ್ವಗಳಿಂದ ಮಾತ್ರ ತನ್ನ ಗೊಂದಲಕ್ಕೆ ತೆರೆಬೀಳಬಹುದೆಂಬ ಅರಿವಾಯಿತು. ತಮ್ಮ ಗ್ರಾಮಕ್ಕೆ ಹತ್ತಿರದಲ್ಲಿದ್ದ ಅತ್ರೇಯರ ಗುರುಕುಲಕ್ಕೆ ಶಿವಜ್ಞಾನದ ಜಿಜ್ಞಾಸುವಾಗಿ ಸೇರಿಕೊಂಡ. ಇಂತಹ ಆತ್ಮಜ್ಞಾನದ ಸಂಪಾದನೆಯ ಮಹದಾಸೆಯುಳ್ಳವನೇ ಜಿಜ್ಞಾಸು ಭಕ್ತನು. ಈ ಬಗ್ಗೆ ಭಕ್ತನಲ್ಲಿ ಇಚ್ಛಾಶಕ್ತಿ ಪ್ರಬಲವಾಗಿತ್ತೆಂದರೆ ಭಗವಂತ ಅಂತಹ ದಾರಿ ತಾನೇ ತೋರಿಸುವನು. ಜಿಜ್ಞಾಸುವಿನ ಆಸೆ ಈಡೇರಿಸುವನು. ಆ ಭಕ್ತನನ್ನು ಆತ್ಮಜ್ಞಾನದಲ್ಲಿ ತೇಲಾಡಿಸುವನು.

ಕೊನೆಯದಾಗಿ ಜ್ಞಾನಿ ಭಕ್ತನ ಲಕ್ಷಣಗಳು. ತನ್ನನ್ನು ತಾನು ಭಗವಂತನಿಗೆ ಅರ್ಪಿಸಿಕೊಂಡವನೇ ಜ್ಞಾನಿಭಕ್ತ. ಅಲ್ಲಿ ತನ್ನ ಜೀವದ ಹಂಗು ಸಹ ಇರುವುದಿಲ್ಲ. ನಿಷ್ಕಾಮ ಭಕ್ತಿ.

ಹಿರಣ್ಯಕಶಿಪುವಿನ ಮಗ ಪ್ರಹ್ಲಾದ. ತಂದೆ ಭಗವಂತನ ದ್ವೇಷಿ. ಮಗ ಪ್ರಹ್ಲಾದ ಭಗವಂತನ ಪ್ರೇಮಿ. ತಂದೆಗೆ ಇದು ಹಿಡಿಸಲಿಲ್ಲ. ಅದಕ್ಕೆ ಹಿರಣ್ಯಕಶಿಪು ಪ್ರಹ್ಲಾದನಿಗೆ ಅನಂತ ಕಷ್ಟಗಳನ್ನು ಕೊಟ್ಟ. ಹಾವುಗಳಿಂದ ಕಚ್ಚಿಸಿದ, ಆನೆಗಳಿಂದ ತುಳಿಸಿದ, ಬೆಟ್ಟದಿಂದ ತಳ್ಳಿಸಿದ, ಸಮುದ್ರದಲ್ಲಿ ಮುಳುಗಿಸಿದ, ಬೆಂಕಿಯಲ್ಲಿ ಹಾಕಿಸಿದ. ಹೀಗೆಲ್ಲ ಮಾಡಿಸಿದರೂ ಯಾವುದಕ್ಕೂ ಅಳುಕಲಿಲ್ಲ. ಭಗವಂತನಲ್ಲೂ ತನ್ನ ಪ್ರಾಣ ಕಾಪಾಡು ಎಂದು ಬೇಡಲಿಲ್ಲ. ಭಗವಂತನಲ್ಲಿ ಪ್ರೇಮ ಕಡಿಮೆಯಾಗಲಿಲ್ಲ.

ಇಂತಹ ನಿಷ್ಕಾಭಕ್ತರನ್ನು ಕಂಡು ಬಸವಣ್ಣ ತನ್ನ ವಚನದಲ್ಲಿ ಹೇಳುತ್ತಾನೆ,

**ಅರ್ಥಪ್ರಾಣ ಅಭಿಮಾನವ ಕೊಟ್ಟೇನೆಂಬುವರಲ್ಲದೆ**
**ಕೊಟ್ಟ ಭಕ್ತನಾರನೂ ಕಂಡುದಿಲ್ಲ**
**ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ**

ಬಲ್ಲಾಳ ತನ್ನ ವಧುವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ
ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ
ಇವೆಲ್ಲ ಹೊರಗಣ ಮಾತು ಕೂಡಲಸಂಗಮದೇವ
ತನ್ನ ಕೊಟ್ಟ ಸಿಂಧುಮರಾಳ

ಬಹಳರು ಭಗವಂತನಿಗೆ ಏನೋ ಒಂದನ್ನು ಕೊಟ್ಟು ಮತ್ತೆ ಬೇರೊಂದನ್ನು ಪಡೆದರು. ಫಲಾಪೇಕ್ಷೆ ಇಲ್ಲದೆ ದಾನ ಮಾಡುವವರನು ನಾಕಾಣೆ. ಯಾಕೆಂದರೆ ದಾಸಿಮಯ್ಯ ಶಿವನಿಗೆ ವಸ್ತ್ರವನ್ನು ಕೊಟ್ಟ. ಮರಳಿ ಆತನಿಂದ 'ತವನಿಧಿ' ಎಂಬ ಬಿರುದನ್ನು ಪಡೆದುಕೊಂಡ. ಸಿರಿಯಾಳ ಚಂಗಳೆಯರು ಶಿವನಿಗೆ ಮಗನನ್ನು ಕೊಟ್ಟು ಮತ್ತೆ ಮರಳಿ ಮಗನನ್ನು ಪಡೆದರು. ಅಲ್ಲದೆ ಕಂಚೀಪುರವನ್ನೇ ಕೈಲಾಸಕ್ಕೆ ಕೊಂಡೊಯ್ದರು. ಸಿಂಧೂಬಲ್ಲಾಳ ವಧುವನ್ನು ಕೊಟ್ಟು ಸ್ವಲಿಂಗವಾದನು. ಹೀಗೆ ಎಲ್ಲರೂ ಒಂದನ್ನು ಕೊಟ್ಟು ಮತ್ತೊಂದನ್ನು ಪಡೆದವರೇ. ಆದರೆ ಸಿಂಧುಮರಾಳನಂತೆ ತನ್ನನ್ನೇ ಸಂಪೂರ್ಣವಾಗಿ ಅರ್ಪಿಸಿಕೊಂಡವನ್ನು ಕಾಣೆ. ಅತಿವಿರಳರು ಎಂದಿದ್ದಾನೆ.

ಚಂಪಕಾವತಿ ಪಟ್ಟಣದ ರಾಜ ಹಂಸಧ್ವಜ. ಆತನ ಮಗ ಸುಧನ್ವ. ಇಬ್ಬರೂ ಶ್ರೀ ಹರಿಯ ಪರಮ ಭಕ್ತರು. ಸಾಕ್ಷಾತ್ ಶ್ರೀ ಹರಿಯೇ ಶ್ರೀಕೃಷ್ಣ ಪರಮಾತ್ಮನೆನಿಸಿ ಈ ಧರೆಯಲ್ಲಿ ಜನಿಸಿ ಬಂದಿದ್ದರೂ ಇವರಿಗೆ ಆ ಭಗವಂತನ ದರ್ಶನ ಆಗಿರಲಿಲ್ಲ. ಆ ನೋವು ಇವರಲ್ಲಿ ಸದಾ ಕಾಡುತ್ತಿತ್ತು. ಹೀಗಿರಲೊಮ್ಮೆ ಪಾಂಡವರ ಅಶ್ವಮೇಧದ ಕುದುರೆ ಇವರ ಪಟ್ಟಣಕ್ಕೆ ಬಂತು. ಆ ಕುದುರೆಯ ಹಿಂದೆ ಅರ್ಜುನನೇ ಬಂದಿದ್ದ. ಆಗ ಇವರು ಹೀಗೆ ವಿಚಾರ ಮಾಡಿದರು. "ನಮ್ಮಿಂದೇನಾದರೂ ಅರ್ಜುನನಿಗೆ ಸ್ವಲ್ಪ ನೋವಾದರೆ ಸಾಕು, ಶ್ರೀಕೃಷ್ಣ ಪರಮಾತ್ಮ ಇಲ್ಲಿಗೆ ಬಂದೇ ಬರುತ್ತಾನೆ, ಬರದೆ ಇರಲಾರ. ಹೀಗೆಯಾದರೂ ಆತನ ದರ್ಶನ ಭಾಗ್ಯ ನಮಗೆ ಲಭ್ಯವಾಗಲಿ, ಅದಕ್ಕಿಂತ ಭಾಗ್ಯ ಮತ್ತೊಂದಿಲ್ಲ" ಎಂದುಕೊಂಡು ಭಗವಂತನ ದರ್ಶನಕ್ಕಾಗಿಯೇ ತಮ್ಮ ಜೀವವನ್ನೇ ಪಣವಾಗಿಟ್ಟು ಮಹಾಶ್ವವನ್ನು ಕಟ್ಟಿಹಾಕಿದರು. ಶ್ರೀಹರಿಯ ಮಹಾನ್ ಭಕ್ತನಾದ ಸುಧನ್ವನು "ತನ್ನ ಪರಾಕ್ರಮದಿಂದ ಅರ್ಜುನನನ್ನು ಸೋಲಿಸಿ ಶ್ರೀಕೃಷ್ಣ ಪರಮಾತ್ಮನನ್ನು ಚಂಪಕಾವತಿಗೆ ಬರುವಂತೆ ಮಾಡಿ ಆತನ ದರ್ಶನ ಭಾಗ್ಯ ನಿಮ್ಮೆಲ್ಲರಿಗೆ ಕಲ್ಪಿಸುತ್ತೇನೆ" ಎಂಬ ಶಪಥ ಮಾಡಿದನು.

ಯುದ್ಧ ಪ್ರಾರಂಭವಾಯಿತು. ಸುಧನ್ವನೊಡನೆ ಮೊದಲು ಯುದ್ಧ ಮಾಡಲೆಂದು ಬಂದ ಪಾಂಡವರ ಕಡೆಯ ಋಷಕೇತು, ಪ್ರದ್ಯುಮ್ನ, ಕೃತವರ್ಮ, ಅನುಸಾಲ್ವ ಮುಂತಾದ ಅತಿರಥ ಮಹಾರಥರೂ ಸಹ ಯುದ್ಧ ಮಾಡದೆ ಹಿಂತಿರುಗಿದರು. ಕೊನೆಗೆ ಅರ್ಜುನನೇ ಬರಬೇಕಾಯಿತು. ಅರ್ಜುನನು ಸುಧನ್ವನಿಗೆ ಹೀಗೆ ಹೇಳಿದ. "ಎಲೋ ಸುಧನ್ವ, ನೀನಿನ್ನು ಕಂದನಿರುವೆ, ನಿನ್ನೊಂದಿಗೆ ಯುದ್ಧ ಮಾಡಲು ನನ್ನ ಮನಸ್ಸೊಪ್ಪದು, ನಿನ್ನ ತಂದೆಯಾದ ಹಂಸಧ್ವಜನನ್ನು ಕಳುಹಿಸು ಹೋಗು" ಎಂದನು.

ಅದಕ್ಕೆ ಸುಧನ್ವನು "ಹೇ ಅರ್ಜುನಾ ನಿನ್ನ ಪರಾಕ್ರಮದ ಬಗ್ಗೆ ನಾನೇನು ತಿಳಿದಿಲ್ಲವೆಂದು ಭಾವಿಸಬೇಡ. ನೀನು ಕರ್ಣ, ದ್ರೋಣ, ಭೀಷ್ಮಾದಿಗಳನ್ನು ಗೆದ್ದಿದ್ದು ನಿನ್ನ ಸ್ವಂತ ಬಲದಿಂದಲ್ಲ.

ಶ್ರೀಕೃಷ್ಣ ಪರಮಾತ್ಮನ ಸಾರಥ್ಯದಿಂದ. ಅವನಿಲ್ಲದೆ ಬಂದ ನೀನು ನನ್ನನ್ನೇನೂ ಮಾಡಲು ಸಾಧ್ಯವಿಲ್ಲ. ಈಗಲೂ ನಿನಗೆ ಎಚ್ಚರಿಕೆಯ ಮಾತನ್ನು ಹೇಳುತ್ತಿದ್ದೇನೆ. ಆ ಭಗವಂತನನ್ನು ಬೇಗನೆ ಕರೆತರಿಸು, ಸುಮ್ಮನೆ ಶ್ರಮಪಡಬೇಡ" ಎಂದು ಹೇಳಿ ಅರ್ಜುನನ ಮೇಲೆ ಬಾಣಗಳ ಸುರಿಮಳೆಗೈದ. ಭಯಂಕರವಾದ ಯುದ್ಧ ನಡೆಯಿತು. ಒಬ್ಬರು ಸರ್ಪಾಸ್ತ್ರ ಬಿಟ್ಟರೆ ಅದಕ್ಕೆ ಪ್ರತಿಯಾಗಿ ಮತ್ತೊಬ್ಬರು ಗರುಡಾಸ್ತ್ರ, ಅಗ್ನಿಯಾಸ್ತ್ರಕ್ಕೆ ಪ್ರತಿಯಾಗಿ ವರುಣಾಸ್ತ್ರ ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ಬ್ರಹ್ಮಾಸ್ತ್ರ, ಹೀಗೆ ನಡೆಯಿತು. ಕೊನೆಗೆ ಬೇಸತ್ತ ಅರ್ಜುನನು ಪಾಶುಪತಾಸ್ತ್ರವನ್ನೇ ಪ್ರಯೋಗಿಸಿದ. ಆಗ ಸುಧನ್ವನು ಮನಸ್ಸಿನಲ್ಲಿ ಬಲವಾಗಿ ಶ್ರೀಹರಿಯನ್ನು ನೆನೆಸಿಕೊಂಡ. ಆ ಕೂಡಲೇ ಪಾಶುಪತಾಸ್ತ್ರ ತಟಸ್ಥವಾಯಿತು. ಆಗ ಸುಧನ್ವನು ಹೇಳುತ್ತಾನೆ, "ಎಲೈ ಅರ್ಜುನ ಬೀಸಣಿಕೆಯಿಂದ ಬೀಸಿದರೆ ಮೇಘಗಳು ಚದುರಿ ಹೋಗುವುದಿಲ್ಲ, ನನ್ನನ್ನು ಕೊಲ್ಲುವ ಶಕ್ತಿ ನಿನ್ನಲ್ಲಿಲ್ಲವೇ ಇಲ್ಲ. ಈಗಲೂ ಹೇಳುತ್ತಿದ್ದೇನೆ, ಬೇಗ ಆ ಶ್ರೀಕೃಷ್ಣ ಪರಮಾತ್ಮನನ್ನು ಕರೆಸು" ಎಂದು ಹೇಳುತ್ತಾ ಮಹಾನ್ ಶಕ್ತಿಶಾಲಿ ಬಾಣವೊಂದನ್ನು ಬಿಟ್ಟ. ಆ ಬಾಣ ಅರ್ಜುನನ ರಥವನ್ನು ಬುಗುರಿಯಂತೆ ಗರಗರನೆ ತಿರುಗಿಸಿತು. ನೋಡಿದವರೆಲ್ಲ ಬೆರಗಾದರು. ಅರ್ಜುನನ ರಥದ ಮೇಲಿನ ಪತಾಕೆಯಲ್ಲಿದ್ದ ಮಾರುತಿ ಭ್ರಮೆಗೊಳಗಾದನು. ಅರ್ಜುನನ ಸಾರಥಿ ಸತ್ತನು. ಕುದುರೆಗಳು ಅಸ್ವಸ್ಥವಾದವು. ಎಡಬಲದಲ್ಲಿದ್ದ ಸೇನೆ ನಾಶವಾಯಿತು.

ಇದನ್ನೆಲ್ಲ ಕಂಡು ದಾರಿ ಕಾಣದಾದ. ಅರ್ಜುನನು ಮನಸ್ಸಿನಲ್ಲಿ ಶ್ರೀಹರಿಯೇ, ಶ್ರೀಕೃಷ್ಣ, ಪರಮಾತ್ಮಾ ಕಾಪಾಡು, ಕಾಪಾಡು" ಎಂದು ಬೇಡಿಕೊಂಡನು. ಶ್ರೀಕೃಷ್ಣನಿಗೆ ಅರ್ಜುನನ ಕರೆ ಕೇಳಿದ ತಕ್ಷಣ ಗರುಡವಾಹನನಾಗಿ ಚಂಪಕಾವತಿ ಪಟ್ಟಣಕ್ಕೆ ಬಂದಿಳಿದನು. ಅರ್ಜುನನು ಶ್ರೀಕೃಷ್ಣನ ಚರಣಗಳಿಗೊಂದಿಸಿ "ನನ್ನನ್ನು ಕಾಪಾಡು ಪರಮಾತ್ಮ" ಎಂದು ಬೇಡಿಕೊಂಡನು.

ಶ್ರೀಕೃಷ್ಣ ಪರಮಾತ್ಮ ಅರ್ಜುನನ್ನು ಸಮಾಧಾನಪಡಿಸುತ್ತಾ, ರಥವನ್ನು ಏರಿ ಕುದುರೆಗಳ ಲಗಾಮನ್ನು ಹಿಡಿದುಕೊಂಡು ಸುಧನ್ವನ ಕಡೆಗೆ ರಥವನ್ನು ತಿರುಗಿಸಿದನು. ಸುಧನ್ವನಾಗ ರಥದಿಂದ ಕೆಳಗಿಳಿದು ಬಿಲ್ಲು ಬಾಣ ಬತ್ತಳಿಕೆಗಳನ್ನು ಕೆಳಗಿಟ್ಟು, ಶ್ರೀಕೃಷ್ಣ ಪರಮಾತ್ಮನಿಗೆ ಸಾಷ್ಟಾಂಗ ನಮಸ್ಕಾರ ಹಾಕಿ, "ಹೇ ಭಗವಂತ ನಾನು ಈ ಯುದ್ಧ ಮಾಡಿದ್ದು, ನಿನ್ನ ದರ್ಶನ ಭಾಗ್ಯ ಪಡೆಯಲಿಕ್ಕೆ ಹೊರತು ಮತ್ತಾವುದಕ್ಕೂ ಅಲ್ಲ. ಪುರುಷೋತ್ತಮಾ, ನಿನ್ನ ದರ್ಶನವಾದನಂತರ ಮತ್ತೇಕೆ ಈ ರಣರಂಗ, ಮುಕುಂದ ಮುರಾರಿ ಸರ್ವತಂತ್ರ ಸ್ವತಂತ್ರ ನೀನು. ನಿನ್ನ ದರ್ಶನದಿಂದ ನಾನಷ್ಟೇ ಅಲ್ಲ ನಮ್ಮ ಚಂಪಕಾವತಿ ಪಟ್ಟಣವೇ ಪುನೀತವಾಯಿತು. ನಮ್ಮನ್ನೆಲ್ಲ ಭವಸಾಗರದಿಂದ ಮುಕ್ತಗೊಳಿಸು" ಎಂದು ಪ್ರಾರ್ಥಿಸಿಕೊಂಡನು. ಮತ್ತೆ ಸುಧನ್ವನು ಅರ್ಜುನನಿಗೆ "ಹೇ ಅರ್ಜುನ ನಿನ್ನ ಪರಾಕ್ರಮ ತಿಳಿದಾಯಿತು. ಆದರೂ ಈಗ ಆ ಪರಮಾತ್ಮ ಬಂದಿದ್ದಾನೆ. ಇನ್ನಾದರೂ ಅವನ ಬಲದಿಂದ ಯುದ್ಧವನ್ನು ಆರಂಭಿಸು" ಎಂಬ ಕ್ಷಾತ್ರನುಡಿಯಿಂದ ಘರ್ಜಿಸಿದನು.

ಶ್ರೀಕೃಷ್ಣ ಪರಮಾತ್ಮನಾಗ ಅರ್ಜುನನಿಗೆ "ಅರ್ಜುನಾ, ಇನ್ನು ಸಾಮಾನ್ಯ ಯುದ್ಧ ಮಾಡಬೇಡ. ಏನಾದರೂ ಶಪಥಗೈದು ಯುದ್ಧಕ್ಕಿಳಿ" ಎಂದು ಹೇಳಿದನು.

ಅರ್ಜುನನಾಗ "ಎಲೈ ಸುಧನ್ವ, ನಿನ್ನ ತಲೆಯನ್ನು ಮೂರೇ ಮೂರು ಬಾಣಗಳಲ್ಲಿ

ಕತ್ತರಿಸಿ ಹಾಕದಿದ್ದರೆ ನನಗೆ ನರಕ ಪ್ರಾಪ್ತಿಯಾಗಲಿ" ಎಂದು ಪ್ರತಿಜ್ಞೆ ಮಾಡಿದ. ಅಷ್ಟೊತ್ತಿಗೆ ಶ್ರೀಕೃಷ್ಣ ಪರಮಾತ್ಮ ಸುಧನ್ವನು ಸಾಮಾನ್ಯನಲ್ಲ ಎಂಬ ಎಚ್ಚರಿಕೆಯ ಸಂದೇಶವನ್ನೂ ಸಹ ಅರ್ಜುನನಿಗೆ ಕೊಟ್ಟಿದ್ದ.

ಅರ್ಜುನನ ಶಪಥಕ್ಕೆ ಪ್ರತಿಯಾಗಿ ಸುಧನ್ವನು "ಎಲೈ ದುರಹಂಕಾರಿಯಾದ ಅರ್ಜುನನೇ, ನಾನೂ ಸಹ ಹೇಳುತ್ತೇನೆ ಕೇಳು! ಆ ಶ್ರೀಕೃಷ್ಣ ಪರಮಾತ್ಮನ ಆಣೆಯಾಗಿ ಆ ನಿನ್ನ ಮೂರೂ ಬಾಣಗಳನ್ನು ಕತ್ತರಿಸಿ ಹಾಕದಿದ್ದರೆ! ನನಗೂ ಮಹಾ ಪಾತಕಿಗಳಿಗೆ ಸಿಗುವಂತಹ ದುರ್ಗತಿ ಪ್ರಾಪ್ತಿಯಾಗಲಿ" ಎಂದು ಶಪಥಗೈದ.

ಆಗ ಶ್ರೀಕೃಷ್ಣ ಪರಮಾತ್ಮನೂ ಸಹ, "ಶಹಬಾಷ್ ಸುಧನ್ವ, ಶಹಬಾಷ್" ಎಂದನು. ಸುಧನ್ವನನ್ನು ಹೊಗಳಿದ್ದಕ್ಕೆ ಅರ್ಜುನನಿಗೂ ಸ್ವಲ್ಪ ಇರಿಸುಮುರಿಸು ಆಯಿತು. ಆಗ ಪರಮಾತ್ಮ ಅರ್ಜುನನಿಗೆ ನೀನು ಹೆದರಬೇಡ, ಯುದ್ಧ ಮುಂದುವರಿಸು" ಎಂದು ಹೇಳಿದ.

ಅರ್ಜುನ ತನ್ನ ಬತ್ತಳಿಕೆಯಿಂದ ಒಂದು ಬಾಣವನ್ನು ತೆಗೆದು ಗಾಂಢೀವಿಗೆ ಹೂಡಲು ಸಿದ್ಧನಾದ. ಆಗ ಶ್ರೀಕೃಷ್ಣ ಪರಮಾತ್ಮ ಅರ್ಜುನನಿಗೆ ಹೇಳಿದ, "ಅರ್ಜುನ ಇವನು ಸಾಮಾನ್ಯನಲ್ಲ. ಆದ್ದರಿಂದ ನಾನು ನಿನ್ನ ಬಾಣಕ್ಕೆ ಬೆಂಬಲವಾಗಿ ಈ ಹಿಂದೆ ಗೋವರ್ಧನಗಿರಿಯನ್ನು ಎತ್ತಿದ ಪುಣ್ಯದ ಫಲವನ್ನು ಹಾಗೂ ಗೋವುಗಳನ್ನು ಕಾಯ್ದ ಪುಣ್ಯದ ಫಲವನ್ನೂ ಸಹ ಧಾರೆ ಎರೆದಿದ್ದೇನೆ" ಎಂದು ಹೇಳಿ ಬಾಣ ಬಿಡಲು ತಿಳಿಸಿದ.

ಸುಧನ್ವನು ಅದಕ್ಕುತ್ತರವಾಗಿ "ಹೇ ಅರ್ಜುನಾ, ನಿನಗೆ ನಿನ್ನ ಬಲ ಸಾಕಾಗದೆ ಆ ಬಾಣಕ್ಕೆ ಶ್ರೀಕೃಷ್ಣ ಪರಮಾತ್ಮನ ಪುಣ್ಯವನ್ನು ಕಿತ್ತುಕೊಂಡೆಯಲ್ಲಾ? ಆಗಲಿ ಹೇ ಹರಿಯೇ, ನಾನು ನಿನ್ನ ಸದ್ಭಕ್ತನಾಗಿದ್ದರೆ ಮಾತ್ರ ಈ ಬಾಣವನ್ನು ಕತ್ತರಿಸಿ ಹಾಕುತ್ತೇನೆ" ಎಂದು ಹೇಳುತ್ತಾ ಪ್ರತಿಯಾಗಿ ಬಾಣ ಹೂಡಿ, ಅರ್ಜುನನು ಹೂಡಿದ ಬಾಣವನ್ನು ತುಂಡುತುಂಡು ಮಾಡಿ ಹಾಕಿದ. ಶ್ರೀಕೃಷ್ಣನೂ ಸಹ ಅದಕ್ಕೆ ಗಾಬರಿಯಾದ.

ಮೊದಲನೇ ಬಾಣ ವ್ಯರ್ಥವಾಯಿತು. ಅವಮಾನಿತನಾದ ಅರ್ಜುನ ಮತ್ತೊಂದು ಬಾಣವನ್ನು ಕೈಯಲ್ಲಿ ಹಿಡಿದು ಗಾಂಢೀವಿಗೆ ಹೂಡುವ ಮುನ್ನ ಶ್ರೀಕೃಷ್ಣ ಪರಮಾತ್ಮನು "ಹೇ ಅರ್ಜುನ ಈ ನಿನ್ನ ಬಾಣಕ್ಕೆ ಈ ಶ್ರೀಕೃಷ್ಣವತಾರದ ಪುಣ್ಯದ ಫಲವನ್ನು ಧಾರೆಯರೆದಿದ್ದೇನೆ, ಬಿಡು" ಎಂದು ಹೇಳಿದ.

ಸುಧನ್ವದಕ್ಕೆ ಪ್ರತಿಯಾಗಿ "ಹೇ ಪರಮಾತ್ಮ, ಅರ್ಜುನನ ಆ ಬಾಣಕ್ಕಾಗಿ ನೀನು ಬಹಳ ದೊಡ್ಡ ಪುಣ್ಯವನ್ನೇ ವ್ಯಯ ಮಾಡಿಬಿಟ್ಟೆ. ನಾನೂ ಪ್ರತಿಜ್ಞೆ ಮಾಡುತ್ತೇನೆ ಕೇಳು, "ನಾನು ದಿವ್ಯಾಸ್ತ್ರವನ್ನು ತುಂಡರಿಸದಿದ್ದರೆ ಮಹಾಪತಿವ್ರತೆಯಾದ ಅರುಂಧತಿಯೊಂದಿಗೆ ವಶಿಷ್ಠರಿದ್ದಾಗ ಅವರಿಬ್ಬರನ್ನೂ ಕೊಂದಂತಹ ಪಾಪ ನನಗೆ ತಟ್ಟಲಿ" ಎಂದು ಹೇಳುತ್ತಾ ಪ್ರತಿಯಾಗಿ ಬಾಣವನ್ನು ಬಿಟ್ಟು, ಅರ್ಜುನನ ಆ ಬಾಣವನ್ನು ತುಂಡು ತುಂಡಾಗಿಸಿದ.

ಅರ್ಜುನನು ಶಪಥಗೈದಿರುವಂತೆ ಇನ್ನುಳಿದಿರುವುದು ಒಂದೇ ಒಂದು ಬಾಣ. ಅದನ್ನೂ

ಕೈಯಲ್ಲಿ ಹಿಡಿದುಕೊಂಡ. ಶ್ರೀಕೃಷ್ಣ ಪರಮಾತ್ಮ ಅರ್ಜುನನಿಗೆ ಹೇಳಿದ, "ಹೇ ಅರ್ಜುನ ನಿಲ್ಲು, ನಿನ್ನ ಶಪಥದಂತೆ ಉಳಿದಿರುವುದು ಇದೊಂದೆ ಬಾಣ. ಅದಕ್ಕೆ ನಾನು ನನ್ನ ಶ್ರೀರಾಮಾವತಾರದಲ್ಲಿನ ಪುಣ್ಯದ ಫಲವನ್ನು ಎರೆಯುತ್ತೇನೆ, ಅಷ್ಟೇ ಅಲ್ಲ, ಬಾಣದ ಹಿಂಬದಿಯಲ್ಲಿ ಬ್ರಹ್ಮನು, ಮಧ್ಯದಲ್ಲಿ ನನ್ನ, ತುತ್ತತುದಿಯಲ್ಲಿ ಶ್ರೀ ರುದ್ರದೇವನ ಈ ಶಕ್ತಿಗಳನ್ನಿರಿಸುತ್ತೇನಲ್ಲದೆ, ಇನ್ನು ಹಲವಾರು ದೇವಾನುದೇವತೆಗಳ ಶಕ್ತಿಯನ್ನು ಅದರಲ್ಲಿರಿಸಿದ್ದೇನೆ. ನೀನಿನ್ನು ಬಾಣವನ್ನು ಹೂಡು" ಎಂದು ಹೇಳಿದನು.

ಸುಧನ್ವನು ಈ ಎಲ್ಲವನ್ನೂ ಕೇಳಿಸಿಕೊಂಡು ಕುಣಿದಾಡಿದನು, "ಹೇ ಪುಂಡರೀಕ್ಷ, ಈ ಅರ್ಜುನನು ನಿನ್ನೆಲ್ಲಾ ಪುಣ್ಯವನ್ನು ಸೂರೆಮಾಡಿಬಿಟ್ಟ. ಈಗ ನಾನು ಹೇಳುತ್ತೇನೆ ಕೇಳು, "ಆ ಬಾಣವನ್ನು ನಾನು ತುಂಡರಿಸದಿದ್ದರೆ ನಾನು ಹಂಸಧ್ವಜನ ಮಗನೇ ಅಲ್ಲ. ನನ್ನ ತಾಯಿಯೂ ಸಹ ನನ್ನನ್ನು ಮಗನೆಂದು ಕರೆಯದಿರಲಿ; ಹಾಗೆ ಪ್ರಭಾವತಿಯ ಪತಿಯೂ ನಾನಲ್ಲ, ಮತ್ತೆ ಹೇಳುತ್ತೇನೆ ಕೇಳು! ಶಿವರಾತ್ರಿಯ ಜಾಗರಣೆಯ ದಿನ ಶಿವಲಿಂಗವನ್ನು ಕಾಲಿನಿಂದ ತುಳಿದರೆ ಯಾವ ದುರ್ಗತಿ ಲಭಿಸುವುದೋ ಅಂತಹ ಪಾಪ ನನ್ನದಾಗಲಿ" ಎಂದು ಅರ್ಜುನನ ಬಾಣವನ್ನು ತುಂಡರಿಸಲು ಪ್ರತಿಯಾದ ಬಾಣವೊಂದನ್ನು ಹೂಡಿದನು.

ಅರ್ಜುನನು ಬಿಟ್ಟ ಮೂರನೆಯ ಬಾಣ ಸುಧನ್ವನ ಕಡೆ ಬಂದಾಗ! ಸುಧನ್ವನು ಬಿಟ್ಟ ಬಾಣವು ಆ ಬಾಣವನ್ನು ತುಂಡು ಮಾಡಿಯೇಬಿಟ್ಟಿತು. ಸುಧನ್ವನ ಪ್ರತಿಜ್ಞೆ ಈಡೇರಿತು. ಆದರೆ ತುಂಡಾದ ಆ ಬಾಣದ ಹಿಂಬದಿಯ ತುಂಡು ಮಾತ್ರ ನೆಲಕ್ಕೆ ಬಿದ್ದಿತು. ಮುಂದಿನ ರುದ್ರಶಕ್ತಿಯ ಭಾಗವು ಭಾರೀ ವೇಗದಿಂದ ಬಂದು ಸುಧನ್ವನ ತಲೆಯನ್ನು ಕತ್ತರಿಸಿ ಹಾಕಿತು. ಆ ತಲೆ "ಅಚ್ಚುತಾ, ಮುರಾರಿ, ನಾರಾಯಣ" ಎನ್ನುತ್ತಾ ಆಕಾಶದಲ್ಲಿ ತೇಲಾಡಿತು. ಸುಧನ್ವನ ತಲೆಯನ್ನು ಕತ್ತರಿಸಿ ಶ್ರೀಹರಿಯೇ ತಪ್ಪು ಮಾಡಿದನೆಂದು ದೇವತೆಗಳು ಆಡಿಕೊಂಡರು. ಕೊನೆಗೆ ಸುಧನ್ವನ ಆತ್ಮ ಪರಮಾತ್ಮನಲ್ಲಿ ಲೀನವಾಯಿತು.

ಭಕ್ತಿಯೋಗವೆಂದರೆ ಇದು. ಬಸವಣ್ಣ ತನ್ನ ವಚನದಲ್ಲಿ "ಏನೆಲ್ಲ ಕೊಟ್ಟೆನೆಂಬರು ತನ್ನ ಕೊಟ್ಟುದಿಲ್ಲ" ಎಂದಿರುವಂತೆ, ಭಕ್ತಾಗ್ರಣಿ ಸುಧನ್ವ ಪರಮಾತ್ಮನ ಮೇಲಿನ ಪ್ರೇಮಕ್ಕಾಗಿ ತನ್ನನ್ನೇ ತಾನು ಅರ್ಪಿಸಿಕೊಂಡ. ಭಕ್ತಿಯೆಂದರೆ ಭಯವಲ್ಲ, ಭಗವಂತನ ಮೇಲಿರುವ ಅಪ್ರತಿಮ ಪ್ರೇಮ. ಇಂತಹ ನಿಷ್ಕಾಮ ಭಕ್ತಿಯೇ ಮುಕ್ತಿಗೆ ಕಾರಣವಾದುದು.

# ಕರ್ಮಯೋಗ

"ವೃತ್ತಿಶ್ಚೇತನ್ಯ ರೂಪಿಣಿ" "ಯೋಗ: ಕರ್ಮಸು ಕೌಶಲಂ" "ಕಾಯಕವೇ ಕೈಲಾಸ" ವೃತ್ತಿ, ಕರ್ಮ, ಕಾಯಕ ಇವೆಲ್ಲವೂ ಸಮಾನಾರ್ಥಕ ಪದಗಳು. ವೃತ್ತಿಯಿಂದ ಶಿವಚೈತನ್ಯ ಪ್ರಾಪ್ತಿ. ಕರ್ಮದಿಂದ ಶಿವಯೋಗ, ಕಾಯಕದಿಂದ ಕೈಲಾಸ ವಿಷ್ಣು ಪುರಾಣದಲ್ಲಿ ಹೀಗೆ ಹೇಳಲಾಗಿದೆ.

ಕರ್ಮಣಾ ಜಾಯತೇ ಸರ್ವಂ ಕರ್ಮೈವ ಗತಿಸಾಧನಮ್ ।
ತಸ್ಮಾತ್ ಸರ್ವಪ್ರಯತ್ನೇನ ಸಾಧಕರ್ಮ ಸಮಾಚರೇತ್ ॥

ಕರ್ಮದಿಂದಲೇ ಎಲ್ಲವೂ ಆಗುತ್ತದೆ. ಕರ್ಮವೇ ನಮ್ಮ ವಿಭಿನ್ನ ಗತಿಗಳಿಗೆ ಕಾರಣ. ಆದ್ದರಿಂದ ಪ್ರಜ್ಞೆ ಮತ್ತು ಪ್ರಯತ್ನಪೂರ್ವಕವಾಗಿ ಸತ್ಕಾರ್ಯಗಳನ್ನು ಮಾಡಬೇಕು.

ಪ್ರಜ್ಞೆ ಮತ್ತು ಪ್ರಯತ್ನಪೂರ್ವಕವಾಗಿ ಸತ್ಕಾರ್ಯಗಳನ್ನು ಮಾಡಬೇಕು. ಹೇಗೇಗೋ ಮಾಡುವಂತಿಲ್ಲ. ಬಸವಣ್ಣ ಕಾಯಕವೇ ಕೈಲಾಸವೆಂದು ಹೇಳಿದ್ದಾನೆ. ಹೀಗೆ ಬಸವ ತತ್ವ ಬಾಯಲ್ಲಿ ಬಾಯಲ್ಲಿ ಹೇಳುತ್ತಾ! ಹೇಗೇಗೋ ದುಡ್ಡು ದುಡಿಯುವ ಜನರು ಇಂದು ಹೆಚ್ಚಾಗಿದ್ದಾರೆ. ತಿನ್ನುವ ಅನ್ನಕ್ಕೂ ಮಣ್ಣು ಬೆರೆಸಿ ದುಡ್ಡು ದುಡಿಯುವರು. ಇಂಥವರೂ ಕರ್ಮಯೋಗಿಗಳೇ?

ಸರ್ ಎಂ. ವಿಶ್ವೇಶ್ವರಯ್ಯನವರು ಇಡೀ ಜಗತ್ತೇ ಮೆಚ್ಚಿಕೊಂಡಿರುವ ಮಹಾಜ್ಞಾನಿ. ಅವರು ಹೇಗೆ ಬೇಕಾದರೂ ದುಡಿಯಬಹುದಿತ್ತು. ಹಣ ಮಾಡಬಹುದಿತ್ತು. ಆದರೆ ಅದು ಅವರಿಗೆ ಬೇಕಾಗಿರಲಿಲ್ಲ. ಯಾಕೆಂದರೆ ಅವರು ಕರ್ಮಯೋಗಿಯಾಗಿದ್ದರು.

ಅಂದಿನ ದಿನಗಳಲ್ಲಿ ಇಂದಿನಷ್ಟು ವಿದ್ಯುತ್ ಬಳಕೆ ಇರಲಿಲ್ಲ. ಆದ್ದರಿಂದ ಒಂದು ದಿನ ರಾತ್ರಿ ಅವರು ಒಂದು ಮೇಣದ ಬತ್ತಿಯನ್ನು ಹಚ್ಚಿಕೊಂಡು, ಯಾವುದೋ ಸರ್ಕಾರದ ಕೆಲಸವೊಂದನ್ನು ಮಾಡಿ ಮುಗಿಸಿದರು. ಆ ನಂತರ ಬೇರೊಂದು ಮೇಣದ ಬತ್ತಿಯನ್ನು ಹಚ್ಚಿ ಇಟ್ಟು, ಮೊದಲು ಹಚ್ಚಿಟ್ಟದ್ದ ಮೇಣದಬತ್ತಿಯನ್ನು ಆರಿಸಿ ತೆಗೆದಿಟ್ಟರು. ಇದನ್ನೆಲ್ಲ ನೋಡುತ್ತಿದ್ದ ಜವಾನನೊಬ್ಬ ಅವರನ್ನು ಕೇಳಿದ, "ಮೊದಲಿನ ಮೇಣದಬತ್ತಿಯನ್ನು ಆರಿಸಿ ಈ ಬತ್ತಿಯನ್ನು ಏಕೆ ಹಚ್ಚಿಟ್ಟಿರಿ?" ಎಂದು.

"ಅದು ಸರ್ಕಾರದವರು ಕೊಟ್ಟಂತಹ ಮೇಣದಬತ್ತಿ. ಈ ಬತ್ತಿ ನನ್ನ ಸ್ವಂತದ್ದು. ನಾನಾದರೂ ಇಲ್ಲಿಯವರೆಗೆ ಮಾಡಿದ್ದು ಸರ್ಕಾರದ ಕೆಲಸ. ಆ ಕೆಲಸ ಮುಗಿಯಿತು. ಈಗ ನಾನು ಪುಸ್ತಕ ಓದುವೆ. ಅದು ನನ್ನ ವೈಯಕ್ತಿಕ ಕೆಲಸ. ಆದ್ದರಿಂದ ನನ್ನದೇ ಬತ್ತಿ ಹಚ್ಚಿಟ್ಟಿರುವೆ" ಎಂದು ಹೇಳಿದರು. ಇದು ಸತ್ಕರ್ಮ. ಇಂತಹ ಕಾಯಕದಿಂದ ಕೈಲಾಸ ಪ್ರಾಪ್ತಿಯಾಗುವುದೇ ಹೊರತು ಹೇಗ್ಗೇಗೋ ದುಡಿದರೆ ಕೈಲಾಸ ಸಿಗುವುದಿಲ್ಲ.

ನಮ್ಮ ದೇಶ ಕಂಡಂತಹ ಅತ್ಯದ್ಭುತ ಪ್ರಧಾನಮಂತ್ರಿ ಲಾಲ್ ಬಹದ್ದೂರ್ ಶಾಸ್ತ್ರಿ. ಪ್ರಧಾನ ಮಂತ್ರಿಯೆಂದ ಮೇಲೆ ಹಣಕ್ಕೆ ಬಡತನ ಇರುವುದಿಲ್ಲ. ಇದು ನಾವು ಕಾಣುತ್ತಿರುವ

ಸತ್ಯ. ಆದ್ದರಿಂದ ಅಂದು ಯಾರೋ ಒಬ್ಬರು ಶಾಸ್ತ್ರೀಜಿಯವರ ಬಳಿಗೆ ಬಂದು ತಮ್ಮ ಮಗನ ಮದುವೆಗಾಗಿ ಧನ ಸಹಾಯ ಕೇಳಿದರು. ಅದಕ್ಕೆ ಶಾಸ್ತ್ರೀಜಿಯವರು, "ದಯಮಾಡಿ ಕ್ಷಮಿಸಿ, ನನ್ನಲ್ಲಿ ನಿಮಗೆ ಸಹಾಯ ಮಾಡುವುದಕ್ಕೆ ಹಣವಿಲ್ಲ" ಎಂದು ಹೇಳಿದರು.

ಅಲ್ಲಿಯೇ ನಿಂತು ಕೇಳುತ್ತಿದ್ದ ಶಾಸ್ತ್ರೀಜಿಯವರ ಹೆಂಡತಿ, ಲಲಿತಾಶಾಸ್ತ್ರಿಯವರು ಆ ವ್ಯಕ್ತಿಗೆ 'ನಿಲ್ಲು' ಎಂದು ಹೇಳಿ, ಒಳಗೆ ಹೋಗಿ ಬಂದು, ಒಂದು ನೂರು ರೂಪಾಯಿ ಅವನ ಕೈಗೆ ಕೊಟ್ಟರು. (ಅಂದಿನ ನೂರು ರೂಪಾಯಿ ಇಂದಿನ ಲಕ್ಷಕ್ಕೆ ರೂಪಾಯಿಗೆ ಸಮ) ಕೂಡಲೇ ಶಾಸ್ತ್ರಿಯವರು ಲಲಿತಾಶಾಸ್ತ್ರಿಯನ್ನು ಕೇಳಿದರು, "ಇಷ್ಟು ಹಣ ನಿನ್ನಲ್ಲಿ ಹೇಗೆ ಬಂತು?" ಎಂದು.

ಅದಕ್ಕುತ್ತರವಾಗಿ ನೀವು ನನ್ನ ಕೈಗೆ ತಂದು ಕೊಡುತ್ತಿದ್ದ ಸಂಬಳದಲ್ಲಿ ಪ್ರತಿ ತಿಂಗಳಿಗೆ ಐದು ರೂಪಾಯಿಯಂತೆ ಉಳಿತಾಯ ಮಾಡುತ್ತಾ ಬಂದಿದ್ದೆ. ಆ ಹಣವೇ ಈ ನೂರು ರೂಪಾಯಿ" ಎಂದು ಲಲಿತಾಶಾಸ್ತ್ರಿಯವರು ಹೇಳಿದ್ದರು.

ಆ ಕೂಡಲೇ ಶಾಸ್ತ್ರಿಯವರು ಬಿಳಿಹಾಳೆಯೊಂದನ್ನು ತೆಗೆದುಕೊಂಡು, "ಇನ್ನು ಮುಂದೆ ನನಗೆ ಕೊಡುವ ಸಂಬಳದ ಹಣದಲ್ಲಿ ಐದು ರೂಪಾಯಿಗಳನ್ನು ಕಡಿಮೆ ಮಾಡಿ ಕೊಡಿರಿ" ಎಂದು ಸರ್ಕಾರಕ್ಕೆ ಪತ್ರ ಬರೆದು ತಿಳಿಸಿದರು. ಇಂಥವರೇ ಕರ್ಮಯೋಗಿಗಳು. ಇವರಿಗೆ ಕಾಯಕದಿಂದ ಕೈಲಾಸ ಸಿಗುವುದು.

ಕುರುಕ್ಷೇತ್ರ ಮಹಾಯುದ್ಧದ ಆರಂಭದಲ್ಲಿ ತನ್ನ ಸಂಬಂಧಿಗಳನ್ನೇ ಕಂಡಂತಹ ಅರ್ಜುನನು ಶ್ರೀಕೃಷ್ಣನಿಗೆ ಹೇಳುತ್ತಾನೆ, "ಹೇ ಮಧುಸೂದನ, ಅವರೆಲ್ಲರೂ ನನ್ನನ್ನು ಕೊಂದರೂ ಚಿಂತೆಯಿಲ್ಲ, ನಾನು ಮಾತ್ರ ಅವರೊಂದಿಗೆ ಯುದ್ಧ ಮಾಡುವುದಿಲ್ಲ" ಎಂಬ ವ್ಯಾಮೋಹ ತೋರುತ್ತಾನೆ.

ಅದಕ್ಕೆ ಶ್ರೀಕೃಷ್ಣ ಹೇಳುತ್ತಾನೆ, "ನೀನು ಬಹಳ ಪಂಡಿತನಂತೆ ಮಾತನಾಡುತ್ತಿರುವೆ. ಯಾಕೆಂದರೆ ಯಾರಿಗಾಗಿ ನೀನು ಶೋಕಿಸಬೇಕಾಗಿಲ್ಲವೋ ಅವರಿಗಾಗಿ ನೀನು ಶೋಕಿಸುತ್ತಿರುವೆ, (ಅರ್ಥಾತ್ ಈ ಶರೀರದ ಮೋಹ ಸರಿಯಲ್ಲ. ಅದು ಅನಿತ್ಯವಾದದ್ದು. ನಾವೆಷ್ಟೇ ಜೋಪಾನ ಮಾಡಿದರೂ ಅದು ಉಳಿಯುವುದಿಲ್ಲವೆಂಬುದಾಗಿದೆ) ಸುಮ್ಮನೆ ಯುದ್ಧ ಮಾಡು" ಎಂದು ಹೇಳುತ್ತಾ ಮತ್ತೆ ಹೇಳುತ್ತಾನೆ.

> ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।
> ಮಾ ಕರ್ಮಫಲಹೇತು ರ್ಭೂರ್ಮಾತೇ ಸಂಗೋಽಸ್ತ್ವಕರ್ಮಣ್ಯೇ ॥

"ನಿನಗೆ ಕರ್ಮ ಮಾಡುವುದರಲ್ಲಿ ಮಾತ್ರ ಅಧಿಕಾರವಿದೆ. ಅದರ ಫಲಗಳಲ್ಲಿ ಎಂದೂ ಇಲ್ಲ. ಆದ್ದರಿಂದ ನೀನು ಕರ್ಮಗಳ ಫಲಕ್ಕೆ ಕಾರಣನಾಗಬೇಡ" ಎಂದು ಹೇಳುತ್ತಾನೆ. ಅಂದರೆ ಫಲಾಪೇಕ್ಷೆಯಿಲ್ಲದೆ ಕರ್ತವ್ಯಬುದ್ಧಿಯಿಂದ ಸಮಸ್ತವನ್ನು ಭಗವಂತನಿಗೆ ಅರ್ಪಿಸಿ ಕರ್ಮಗಳನ್ನು ಮಾಡು ಎಂಬುದಾಗಿದೆ.

ಮೊದಲನೆಯ ಮಹಾಯುದ್ಧದ ಘಟನೆಯಿದು. ಜಪಾನ್ ದೇಶದ ಯೋಧನೊಬ್ಬ

ತೀವ್ರವಾಗಿ ಗಾಯಗೊಂಡಿದ್ದ. ಪ್ರಜ್ಞೆ ತಪ್ಪಿತು. ಅವನ ತೋಳಿಗೆ ಬಿದ್ದ ಗುಂಡನ್ನು ಹೊರತೆಗೆಯಲು ಶಸ್ತ್ರಚಿಕಿತ್ಸೆ ಮಾಡುವ ಸಂದರ್ಭದಲ್ಲಿ ಕೈ ಕತ್ತರಿಸಬೇಕಾದ ಅನಿವಾರ್ಯತೆಯಿತ್ತು. ಕತ್ತರಿಸಿದರು ಸಹ. ಪುನಃ ಅವನು ಎಚ್ಚರಗೊಂಡ ನಂತರ ವೈದ್ಯರು ಆ ಸೈನಿಕನಿಗೆ "ಕ್ಷಮಿಸಿ, ನೀವು ನಿಮ್ಮ ಕೈಯನ್ನು ಕಳೆದುಕೊಂಡಿದ್ದೀರಿ" ಎಂದು ಹೇಳಿದರು.

ಸೈನಿಕನದಕ್ಕೆ ಉತ್ತರವಾಗಿ ಹೇಳಿದ. "ಇಲ್ಲ, ನಾನು ಕೈಯನ್ನು ಕಳೆದುಕೊಂಡಿಲ್ಲ, ಅವುಗಳನ್ನು ದೇಶಕ್ಕೆ ಸಮರ್ಪಣೆಗೈದಿದ್ದೇನೆ" ಎಂದಾಗ ಸೈನಿಕನ ಮುಖದಲ್ಲಿ ದಿವ್ಯ ತೇಜಸ್ಸಿತ್ತು. ಆನಂದಕಳೆ ತುಂಬಿ ತುಳುಕುತ್ತಿತ್ತು.

ಹೌದು, ಸ್ವಾರ್ಥದಲ್ಲಿ ದುಃಖವಿದೆ. ತ್ಯಾಗದಲ್ಲಿ ಆನಂದವಿದೆ. ಹಾಗೆ ನಾವು ಇಲ್ಲಿ ನಿಮಿತ್ತರು ಮಾತ್ರ. ಆಸೆ ಆಕಾಂಕ್ಷೆಗಳಿಲ್ಲದೆ ಕರ್ಮಗಳನ್ನು ಮಾಡಬೇಕು. ಕರ್ಮ ಮಾಡದಿದ್ದರೆ ಈ ಭೂಮಿಯಲ್ಲಿ ಯಾರೊಬ್ಬರೂ ಬದುಕಿ ಉಳಿಯಲು ಸಾಧ್ಯವಿರಲಿಲ್ಲ. ಉಣ್ಣುವುದು, ನಡೆಯುವುದು, ಮಲಗುವುದು ಇವು ಸಹ ಕರ್ಮಗಳೇ ಆಗಿವೆ.

ಭಗವಂತನೂ ಸಹ ಕಾರ್ಯತತ್ಪರನಾಗದಿದ್ದರೆ, ಈ ಜಗತ್ತು, ಜೀವರು ಇರುತ್ತಿರಲಿಲ್ಲ. ಸೃಷ್ಟಿ, ಸ್ಥಿತಿ, ಲಯಾದಿ ಚಕ್ರವು ತಿರುಗುತ್ತಿರಲಿಲ್ಲ. ಭಗವಂತನೂ ಸಹ ಕರ್ತವ್ಯನಿರತನಾಗಿದ್ದಾನೆ. ಇದೇ ಮಾತನ್ನು ಶ್ರೀಕೃಷ್ಣ ಪರಮಾತ್ಮ ಭಗವದ್ಗೀತೆಯಲ್ಲಿ ಅರ್ಜುನನಿಗೆ ಹೇಳುತ್ತಾನೆ.

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥

"ಹೇ ಅರ್ಜುನಾ, ನನಗೆ ಈ ಮೂರು ಲೋಕಗಳಲ್ಲಿ ಯಾವುದೇ ಕರ್ತವ್ಯವಾದರೂ ಇಲ್ಲ. ಪಡೆಯಲು ಯೋಗ್ಯನಾದ ಯಾವುದೇ ವಸ್ತು ಅಪ್ರಾಪ್ತವಾಗಿದೆ ಎಂಬುದೂ ಇಲ್ಲ. ಆದರೂ ನಾನು ಕರ್ಮದಲ್ಲಿ ವರ್ತಿಸುತ್ತಿದ್ದೇನೆ" ಎಂದು.

ಒಟ್ಟಾರೆ ಈ ಕರ್ಮಭೂಮಿಯಲ್ಲಿ ಕರ್ಮಗಳನ್ನು ಬಿಟ್ಟಿರುವಂತಿಲ್ಲ. ಆದರೆ ಕರ್ತವ್ಯಗಳಲ್ಲಿ ಅತೃಪ್ತರಿರಬೇಕು. ಜೀವನದಲ್ಲಿ ಮಾತ್ರ ಸಂತೃಪ್ತರಿರಬೇಕು. ಇಷ್ಟನ್ನೇ ಶರಣರು, ಸಂತರು, ಮಹಾಂತರು ಮಾಡಿಕೊಂಡು ಬಂದದ್ದು. ಅಂದರೆ ಸದಾ ಅವರು ಸತ್ಕರ್ಮಗಳನ್ನು ಹೆಚ್ಚೆಚ್ಚು ಮಾಡುತ್ತಲೇ ಇದ್ದರು. ಕರ್ಮದಿಂದ ಒದಗುವಂತಹ ಫಲಾಪೇಕ್ಷೆಯನ್ನು ಬಿಟ್ಟಿದ್ದರು. ಆದ್ದರಿಂದ ಅವರ ಕಾಯಕ ಕರ್ಮಯೋಗವಾಗಿತ್ತು.

# ಹಠಯೋಗ

ಯೋಗಸೂತ್ರ ವಿರಚಿತ ಪತಂಜಲಿ ಮಹರ್ಷಿಯ "ಯೋಗಶ್ಚಿತ್ತ ವೃತ್ತಿ ನಿರೋಧ:" ಎಂದು ಹೇಳಿದ್ದಾನೆ. ನಮ್ಮ ಶರೀರದಲ್ಲಿ ಮನಸ್ಸಿದೆ. ಮನಸ್ಸಿನಲ್ಲಿ ಪ್ರಾಣವಿದೆ. ಈ ಮನಸ್ಸು ಪ್ರಾಣ (ಗಾಳಿ) ಇರುವವರೆಗೂ ಇರುವುದು. ಈ ಮನಸ್ಸೇ ಜೀವಾತ್ಮನ ವ್ಯವಹಾರಾದಿಗಳಿಗೆಲ್ಲ ಕಾರಣವಾದದ್ದು. ಆದ್ದರಿಂದ ಮನಸ್ಸಿನ ವೃತ್ತಿ (ಭಾವನೆ)ಯನ್ನು ನಿಯಂತ್ರಿಸಬೇಕಾದರೆ ನಾವು ಮೊದಲು ಸೇವಿಸುತ್ತಿರುವ ಗಾಳಿಯನ್ನು ನಿಯಂತ್ರಿಸಬೇಕು. ಹಾಗೆ ಮಾಡಿದಲ್ಲಿ ಛಿದ್ರಛಿದ್ರವಾಗಿರುವ ಪ್ರಾಣಶಕ್ತಿಯನ್ನು ಒಂದೆಡೆಗೆ ಕೇಂದ್ರೀಕರಿಸಿದಂತಾಗುತ್ತದೆ. ಹೀಗೆ ಮಾಡುವುದರಿಂದ ಜೀವಾತ್ಮನ ಇಚ್ಛಾಶಕ್ತಿಯು ಪ್ರಬಲವಾಗುವುದು. ಈ ಹಠಯೋಗದ ಮರ್ಮವನ್ನು ಬಸವಣ್ಣ ಹೀಗೆ ಹೇಳಿದ್ದಾನೆ.

**ಕುಳಿತಲ್ಲಿ ಎರಡು ನಿಂದಲ್ಲಿ ನಾಲ್ಕು ನಡೆನುಡಿಯಲ್ಲಿ ಎಂಟು**
**ಅರೆನಿದ್ದೆಯಲ್ಲಿ ಹದಿನಾರು ರತಿಸಂಗದಲ್ಲಿ ಮೂವತ್ತೆರಡು ರೇಚಕ**
**ತದರ್ಧಪೂರಕ**
**ಹೊರಗು ವೊಳಗಾದೊಡೆ ಕೂಡಲಸಂಗಯ್ಯನಲ್ಲಿ ಸಂಯೋಗ**

ಉಸಿರಾಡುವಾಗ ನಾವು ಒಳತೆಗೆದುಕೊಳ್ಳುವ ಗಾಳಿಯ ಪ್ರಮಾಣಕ್ಕಿಂತ ಹೊರಹಾಕುವ ಗಾಳಿಯ ಪ್ರಮಾಣ ಹೆಚ್ಚಿರುತ್ತದೆ. ಇದು ಜೀವಾತ್ಮರ ಮನಸ್ಸಿನ ಸಮತೋಲನತೆಯನ್ನು ಹಾಳು ಮಾಡುತ್ತದೆ. ಇದರಿಂದ ಕೋಪತಾಪಗಳು ಉದ್ವೇಗಗೊಂಡು ಮನಸ್ಸಿನ ಏಕಾಗ್ರತೆಗೆ ಭಂಗ ತರುವುದಾಗಿದೆ. ಆದ್ದರಿಂದ ಈ ಕ್ರಿಯೆಯು ವಿರುದ್ಧವಾಗಿ ನಡೆಯುವಂತೆ (ಅಂದರೆ ಒಳ ತೆಗೆದುಕೊಳ್ಳುವಂತಹ ಉಸಿರಿನ ಪ್ರಮಾಣವು ಹೆಚ್ಚಾಗಿಸುವಂತೆ) ಮಾಡುವುದೇ ಹಠಯೋಗದ ಲಕ್ಷಣ. ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮ ಐದನೇ ಅಧ್ಯಾಯದಲ್ಲಿ ಈ ಹಠಯೋಗವನ್ನು ಸಾಧಕನಾದವನು ಹೇಗೆ ಸಾಧಿಸಿ, ಹೇಗೆ ಮುಕ್ತನಾದ ಎಂಬುದನ್ನು ಹೀಗೆ ಹೇಳಿದ್ದಾನೆ.

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋ: ।**
**ಪ್ರಾಣಾಪಾನೌ ಸಮೌಕೃತ್ವಾ ನಾಸಾಭ್ಯಂತರಚಾರಿಣೆ ॥**
**ಯತೇಂದ್ರೀಯಮನೋಬುದ್ಧಿರ್ಮುನಿರ್ಮೋಕ್ಷ ಪಾರಾಯಣ: ।**
**ವಿಗೇತೇಚ್ಛಾಭಯಕ್ರೋಧೋ ಯ: ಸದಾ ಮುಕ್ತ ಏವ ಸ: ॥**

ಹೊರಗಿನ ವಿಷಯ ಭೋಗಗಳನ್ನು ಚಿಂತಿಸದೆ ಇದ್ದು, ಹೊರಗೆಯೇ ತ್ಯಜಿಸಿ, ಮತ್ತು ಕಣ್ಣುಗಳ ದೃಷ್ಟಿಯನ್ನು ಭ್ರೂಮಧ್ಯದಲ್ಲಿ ಸ್ಥಿರವಾಗಿರಿಸಿ, ಹಾಗೂ ಮೂಗಿನಲ್ಲಿ ಸಂಚರಿಸುವ ಪ್ರಾಣ ಮತ್ತು ಅಪಾಯವಾಯುವನ್ನು ಸಮಾನವಾಗಿಸಿ, ಯಾರ ಇಂದ್ರೀಯಗಳು, ಮನಸ್ಸು ಬುದ್ಧಿ ಗೆಲ್ಲಲ್ಪಟ್ಟಿವೆಯೋ, ಅಂತಹ ಯಾವ ಮೋಕ್ಷ ಪಾರಾಯಣನಾದ ಮುನಿಯು! ಇಚ್ಛೆ, ಭಯ ಮತ್ತು ಕ್ರೋಧಗಳಿಂದ ರಹಿತನಾಗಿದ್ದನೋ, ಅವನು ಸದಾ ಮುಕ್ತನಾಗಿದ್ದಾನೆ.

ಹೊರಗಿನ ವಿಷಯಾದಿಗಳ ಕಡೆ ಗಮನ ಕೊಡದೆ ಕಣ್ಣುಗಳನ್ನು ಭ್ರೂಮಧ್ಯೆದಲ್ಲಿ ನಿಲ್ಲಿಸಬೇಕು. ಅಂದರೆ ಕಣ್ಣುಗಳು ಎತ್ತೆತ್ತಲೋ ನೋಡುವುದರಿಂದ ಸಹಜವಾಗಿ ಧ್ಯಾನದಲ್ಲಿ

ವಿಘ್ನಗಳುಂಟಾಗುವುವು. ಹಾಗೆ ಪೂರ್ತಿ ಮುಚ್ಚಿದರೂ ಅರ್ಥವಿಲ್ಲ. ನಿದ್ರೆಗೆ ವಶವಾಗುವ ಭಯವಿರುತ್ತದೆ. ಆದ್ದರಿಂದ, ಅರೆಗಣ್ಣು ಮುಚ್ಚಿ ದೃಷ್ಟಿಯನ್ನು ದ್ವಿದಳದ ಆಜ್ಞಾಚಕ್ರದಲ್ಲಿ ಕೇಂದ್ರೀಕರಿಸಬೇಕು. ಹಾಗೂ ಆಧಾರಾದಿ ಸಹಸ್ರಾರುವಿನ ಚಕ್ರ ಇರುವುದರ ಪರ್ಯಂತರ, ಸಮಸ್ತ ಚಕ್ರಗಳು ಸರಳರೇಖೆಯಲ್ಲಿರುವಂತೆ ಕುಳಿತಿರಬೇಕು. ಸಾಧಕನಾದವನಿಗೆ ಮೊದಲು ಇದು ತಿಳಿದಿರಬೇಕು. ಹೀಗೆ ಪಾಲಿಸಬೇಕು ಸಹ.

ಮತ್ತೆ ಪ್ರಾಣ ಮತ್ತು ಅಪಾನಗಳನ್ನು ಸಮಾನಗೊಳಿಸಬೇಕೆಂದು ಹೇಳಿದ್ದಾನೆ. ಅಂದರೆ ಸ್ವಾಭಾವಿಕವಾಗಿ ಪ್ರಾಣ ಮತ್ತು ಅಪಾನದ ಗತಿಯು ವಿಷಮವಾಗಿರುತ್ತದೆ. ಒಮ್ಮೆ ಎಡಮೂಗಿನಲ್ಲಿ, ಒಮ್ಮೆ ಬಲಮೂಗಿನಲ್ಲಿ ನಡೆಯುತ್ತಿರುತ್ತದೆ. ಎಡಮೂಗಿನಲ್ಲಿ ನಡೆಯುವಾಗ ಇಡಾ ನಾಡಿಯಲ್ಲಿ ನಡೆಯುವುದೆಂದೂ, ಬಲಮೂಗಿನಲ್ಲಿ ನಡೆಯುವಾಗ ಪಿಂಗಳನಾಡಿಯಲ್ಲಿ ನಡೆಯುವುದೆಂದು ದಾರ್ಶನಿಕರು ಹೇಳುವರು. ಇಂತಹ ಸ್ಥಿತಿಯಲ್ಲಿ ವಾಯುವಿನ ಸಂಚಾರವಿರುವುದರಿಂದ ಮನುಷ್ಯರ ಚಿತ್ತವು ಚಂಚಲವಾಗಿರುತ್ತದೆ. ಈ ವಿಷಮ ಸ್ಥಿತಿಯನ್ನು ಎರಡೂ ಮೂಗಿನ ಸೊಳ್ಳೆಯಲ್ಲಿ ಸಮಾನವಾಗಿ ಸಂಚರಿಸುವಂತೆ ಮಾಡುವುದೇ ಹಠಯೋಗದ ಒಂದು ಮಾರ್ಗವಾಗಿದೆ.

ಸಮಾನಗೊಳಿಸುವುದು ಹೀಗೆ, ಎಡಮೂಗಿನಿಂದ ಅಪಾನವನ್ನು ಒಳಗೆ ಸೆಳೆದುಕೊಂಡು ಪ್ರಾಣವಾಯುವನ್ನು ಬಲಮೂಗಿನಿಂದ ಹೊರಗೆ ಬಿಡಬೇಕು. ಮತ್ತೆ ಅಪಾನವನ್ನು ಬಲಮೂಗಿನಿಂದ ಒಳಗೆ ಸೆಳೆದುಕೊಂಡು ಪ್ರಾಣವಾಯುವನ್ನು ಎಡಮೂಗಿನಿಂದ ಹೊರಗೆ ಬಿಡಬೇಕು. ಹೀಗೆ ಪ್ರಾಣ ಮತ್ತು ಅಪಾನವನ್ನು ಸಮಾನಗೊಳಿಸುವ ಅಭ್ಯಾಸ ಮಾಡುವಾಗ ಪರಮಾತ್ಮನ ನಾಮವನ್ನು (ಗುರು ಉಪದೇಶಿಸಿರುವಂತಹ ಮಹಾಮಂತ್ರವನ್ನೂ) ಜಪ ಮಾಡುತ್ತಿರಬೇಕು. ಈ ಜಪಸಂಖ್ಯೆ (ಸಮಯ) ಒಳ ಉಸಿರು ತೆಗೆದುಕೊಳ್ಳುವಾಗಲೂ ಮತ್ತೆ ಉಸಿರನ್ನು ಹೊರಗೆ ಬಿಡುವಾಗಲೂ ಸಮನಾಗಿರಬೇಕು. ಹೀಗೆ ಅಭ್ಯಾಸ ಮಾಡುತ್ತಾ ಮಾಡುತ್ತಾ ಅವೆರಡರ ಗತಿಯನ್ನು ಸಮಗೊಳಿಸಬೇಕು. ಹೀಗೆ ಸಮಗೊಳಿಸಿದಂತಹ ಸಾಧಕರ ಇಂದ್ರೀಯು, ಮನಸ್ಸು ಮತ್ತು ಬುದ್ಧಿ ನಿಯಂತ್ರಣದಲ್ಲಿರುತ್ತವೆ. ಅದು ಮೋಕ್ಷ ಪ್ರಾಪ್ತಿಗೆ ಕಾರಣ.

**ಸೂಚನೆ :** ಯಾವುದಕ್ಕೂ ಈ ಹಠಯೋಗದ ಮಾರ್ಗವನ್ನು ಗುರುಮುಖೇನ ತಿಳಿದು ಆಚರಿಸುವುದು ಸೂಕ್ತ. ಅವರಾದರು ನಿಮ್ಮ ವಯಸ್ಸು ಹಾಗೂ ಶರೀರದ ಸ್ಥಿತಿಗನುಗುಣವಾಗಿ ಉಪದೇಶ ನೀಡುವರು. ಯಾಕೆಂದರೆ ಈ ಹಠಯೋಗದಿಂದ ಎಷ್ಟು ಒಳ್ಳೆಯದಿದೆಯೋ ಅಷ್ಟೇ ತೊಂದರೆಗಳಿವೆ. ಹಠದಿಂದ ಘಟಕ್ಕೂ ತೊಂದರೆಗಳಾಗುವ ಸಾಧ್ಯತೆಗಳಿವೆ. ಅದಕ್ಕಾಗಿ ಗುರುಕರುಣೆ ಅತ್ಯವಶ್ಯ.

ಬಸವಣ್ಣ ಹಿಂದಿನ ವಚನದಲ್ಲಿ ಹೇಳುತ್ತಾನೆ, ಉಸಿರಾಟದ ಸಂದರ್ಭದಲ್ಲಿ ರೇಚಕ ಕ್ರಿಯೆಯ ಅರ್ಧಭಾಗ ಪೂರಕಕ್ರಿಯೆಯು ನಡೆಯುವುದೆಂದು. ಅಂದರೆ ನಾವು ತೆಗೆದುಕೊಳ್ಳುವ ಒಳ ಉಸಿರಿನ ಪ್ರಮಾಣಕ್ಕಿಂತ ಹೊರ ಉಸಿರಿನ ಪ್ರಮಾಣವು ಹೆಚ್ಚಿರುತ್ತದೆ. ಹೌದು, ಸಹಜ ಕ್ರಿಯೆಯಿದು. ಈ ಕ್ರಿಯೆಯನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ಗೊತ್ತಾಗುತ್ತದೆ. ಯಾವೊಬ್ಬ

ವ್ಯಕ್ತಿಯು ಭಾವಾವೇಶ (ಉದ್ವೇಗ)ಕ್ಕೊಳಗಾದಾಗ ಹೊರ ಉಸಿರು ಹೆಚ್ಚಾಗಿ ಹಾಕುತ್ತಾ ಬುಸ್ ಬುಸ್ ಎನ್ನುತ್ತಿರುತ್ತಾನೆ. ಆಗ ಅಂತಹ ವ್ಯಕ್ತಿಯನ್ನು ಸ್ವಲ್ಪ ಸುಧಾರಿಸಿಕೊ ಎಂದು ಹೇಳಿ ಕೂಡಿಸುತ್ತೇವೆ. ಹಾಗೆ ಕುಳಿತ ಸ್ವಲ್ಪ ಸಮಯದ ನಂತರ, ಆ ಹೊರ ಉಸಿರು ಹಾಕುವ ಕ್ರಿಯೆ ಸ್ವಲ್ಪ ಸುಧಾರಿಸುವುದು. ಅದರಿಂದ ಸ್ವಲ್ಪ ಸಮಾಧಾನವು ಸಿಗುವುದು. ಇದನ್ನೇ ಬಸವಣ್ಣ ಹೇಳುತ್ತಾನೆ. 'ಹೊರಗು ವೊಳಗಾದೊಡೆ ಕೂಡಲಸಂಗಯ್ಯನಲ್ಲಿ ಸಂಯೋಗ' ಎಂದು. ಅಂದರೆ ಒಳತೆಗೆದುಕೊಳ್ಳುವ ಉಸಿರಿನ ಪ್ರಮಾಣ ಹೆಚ್ಚಾಗಬೇಕು. ಹೊರಬಿಡುವ ಪ್ರಮಾಣ ಕಡಿಮೆಯಾಗಬೇಕೆಂದು. ಏಕೆಂದರೆ ನಮ್ಮ ಶರೀರದೊಳಗೆ ಸುಮಾರು ಎಪ್ಪತ್ತೆರಡು ಸಾವಿರ ನಾಡಿಗಳಿವೆ. ಕೇನೋಪನಿಷತ್ತಿನ ಪ್ರಕಾರ ಉಪನಾಡಿಗಳ ಸಂಖ್ಯೆ ಇನ್ನೂ ಹೆಚ್ಚಾಗುವುದು. ಅದರ ಪರಿಚಯದ ಶ್ಲೋಕ ಹೀಗಿದೆ.

> ಹೃದಿ ಹ್ಯೇಷ ಆತ್ಮಾ । ಅತ್ರೈತದೇಕ ಶತಂ ನಾಡೀನಾಂ ತಾಸಾಂ ಶತಂ
> ಶತಮೇಕೈಕಸ್ಯಾಂ ದ್ವಾಸಪ್ತತಿರ್ದ್ವಾಸಪ್ತತಿ: ಪ್ರತಿಶಾಖಾನಾಡೀಸಹಸ್ರಾಣಿ
> ಭವಂತ್ಯಾಸು ವ್ಯಾನಶ್ಚರತಿ ॥

ಈ ಆತ್ಮ ಹೃದಯದಲ್ಲಿ (ವಾಸಿಸುವನು). ಇಲ್ಲಿ ನೂರೊಂದು ನಾಡಿಗಳಿವೆ. ಅವುಗಳ ಒಂದೊಂದರಲ್ಲಿ ನೂರು ನೂರು ಇವೆ. ಒಂದೊಂದು ಶಾಖೆಯಲ್ಲೂ ಎಪ್ಪತ್ತೆರಡು ಸಾವಿರ ನಾಡಿಗಳಿರುವುವು. ಅವುಗಳಲ್ಲಿ ವ್ಯಾನ ಸಂಚರಿಸುವುದು. ಇದು ಶ್ಲೋಕದ ಅರ್ಥ.

ಈ ಉಪನಿಷತ್‌ನ ಸಾರವನ್ನು ವಿಸ್ತರಿಸಿ ಹೇಳಿರುವಂತಹ ಸೋಮನಾಥಜೀಯವರು ಈ ಶ್ಲೋಕದ ಅರ್ಥವನ್ನು ಹೀಗೆ ವಿಶ್ಲೇಷಿಸಿದ್ದಾರೆ. ಒಂದೊಂದರಲ್ಲಿ ನೂರು ನೂರು ಇವೆ. ಈ ಒಂದೊಂದರಲ್ಲಿ ಎಪ್ಪತ್ತೆರಡು ಶಾಖೆಗಳಿವೆ. ಅಂದರೆ ಒಟ್ಟು ಏಳು ಲಕ್ಷದ ಇಪ್ಪತ್ತೇಳು ಸಾವಿರದ ಇನ್ನೂರು (೭,೨೭,೨೦೦) ಆಗುವುವು. ಇಂದಿನ ವೈಜ್ಞಾನಿಕ ದೃಷ್ಟಿಯಿಂದ ನೋಡಿದರೆ ಇದು ಸತ್ಯಕ್ಕೆ ಸಮೀಪ ಇರುವಂತೆ ಕಾಣುವುದು. ಈ ನಮ್ಮ ದೇಹದಲ್ಲಿರುವ ನಾಡಿಗಳನ್ನೆಲ್ಲ ಒಂದರ ಮುಂದೆ ಮತ್ತೊಂದನ್ನು ಇಡುತ್ತಾ ಬಂದರೆ ಮೂರುವರೆ ಲಕ್ಷ (೩,೫೦,೦೦೦) ಮೈಲಿಗಳಾಗುತ್ತವೆ. ಇದು ನಮ್ಮ ಭೂಮಿಯ ಸುತ್ತಳತೆಗಿಂತ ಹದಿನಾಲ್ಕು ಪಾಲು ಜಾಸ್ತಿಯಾಗುವುದು ಎಂದು ವಿಶ್ಲೇಷಿಸಿದ್ದಾರೆ. (1 ಮೈಲಿ = 1.62 ಕಿ.ಮೀ.)

ಇಲ್ಲಿ ನಾವು ಗಮನಿಸಬೇಕಾದ ವಿಷಯವೆಂದರೆ ನಾವು ಒಳ ಉಸಿರು ಕಡಿಮೆ ತೆಗೆದುಕೊಳ್ಳುವುದರಿಂದ ಈ ಎಲ್ಲಾ ನಾಡಿಗಳಲ್ಲಿ (ಅಂದರೆ ೭೨೭೨೦೦ ನಾಡಿಗಳಲ್ಲಿ) ವ್ಯಾನ ವಾಯುವಿನ ಸಂಚಾರವು ಸರಿಯಾದ ರೀತಿಯಲ್ಲಿ ನಡೆಯುತ್ತಿಲ್ಲ. ಆದ್ದರಿಂದ ಮನುಷ್ಯರಲ್ಲಿ ಶಾಂತಿ ದುರ್ಲಭವಾಗಿದೆ. ಆದರೆ ಹಠಯೋಗ ಸಾಧಕನಲ್ಲಿ ಮಾತ್ರ. ಈ ಎಲ್ಲಾ ನಾಡಿಗಳಲ್ಲಿ ವ್ಯಾನ ವಾಯುವಿನ ಸಂಚಾರ ನಡೆಯುವ ಸಾಧ್ಯತೆಗಳಿವೆ. ಇದಕ್ಕೆ ಭೀಷ್ಮ ಪಿತಾಮಹರೇ ಸಾಕ್ಷಿ.

ಕುರುಕ್ಷೇತ್ರ ಮಹಾಯುದ್ಧದಲ್ಲಿ ಒಂಬತ್ತು ದಿನಗಳ ಪರ್ಯಂತರ ಘನಘೋರ ಯುದ್ಧ ಮಾಡಿದಂತಹ ಭೀಷ್ಮ ಪಿತಾಮಹರಿಗೆ ಹತ್ತನೇ ದಿನದ ಯುದ್ಧದಲ್ಲಿ ಅವರೆದುರು ಶಿಖಂಡಿಯನ್ನು ತಂದು ನಿಲ್ಲಿಸಿದರು. ಭೀಷ್ಮರು ಶಿಖಂಡಿಯೊಂದಿಗೆ ಯುದ್ಧ ಮಾಡಲಾರದೆ ಸುಮ್ಮನಿದ್ದಾಗ ಕೃಷ್ಣನ

ಅಪ್ಪಣೆಯ ಮೇರೆಗೆ ಅವರ ಮೇಲೆ ಅರ್ಜುನನು ಬಾಣಗಳ ಸುರಿಮಳೆ ಸುರಿಸಿದನು. ಅರ್ಜುನನ ಬಾಣಗಳಿಂದ ಪೀಡಿತರಾದ ಭೀಷ್ಮಚಾರ್ಯರು ಶರಶಯ್ಯೆದಲ್ಲಿ ಬಿದ್ದುಬಿಟ್ಟರು. ಬೀಳುವಾಗ ಸೂರ್ಯನನ್ನು ನೋಡಿದರು. ಅವನು ದಕ್ಷಿಣಾಯನದಲ್ಲಿದ್ದ. ಅದಕ್ಕಾಗಿ ಅವರಂದು ಪ್ರಾಣ ತ್ಯಾಗ ಮಾಡಲಿಲ್ಲ. ಪ್ರಾಣತ್ಯಾಗಕ್ಕಾಗಿ ಅಂದಿನಿಂದ ಐವತ್ತೆಂಟು ದಿನಗಳ ಪರ್ಯಂತರ ಉತ್ತರಾಯಣಕ್ಕಾಗಿ ದಾರಿ ಕಾಯ್ದರು. ಸೂರ್ಯನು ಉತ್ತರಾಯಣ ಪ್ರವೇಶಿಸಿದ. ಭೀಷ್ಮಚಾರ್ಯರು ಪ್ರಾಣ ತ್ಯಾಗ ಮಾಡಲು ನಿಶ್ಚಯ ಮಾಡಿದರು. ಆಗ ಶ್ರೀಕೃಷ್ಣ ಪರಮಾತ್ಮನಿಗೆ ವಂದಿಸಿ ಹೀಗೆ ಹೇಳಿದರು, "ಹೇ ಪುರುಷೋತ್ತಮ ಈಗ ನನಗೆ ಹೋಗಲು ಅಪ್ಪಣೆಯನ್ನು ಕೊಡು. ನಾನಾದರೂ ಮಂದಬುದ್ಧಿಯವನಾದ ದುರ್ಯೋಧನನಿಗೆ ತುಂಬಾ ತಿಳಿಹೇಳಿದ್ದೆ.

ಯತಃ ಕೃಷ್ಣಸ್ತತೋ ಧರ್ಮೋ ಯತೋ ಧರ್ಮಸ್ತತೋಜಯಃ ।

"ಎಲ್ಲಿ ಶ್ರೀಕೃಷ್ಣನಿದ್ದಾನೋ ಅಲ್ಲೇ ಧರ್ಮವಿದೆ. ಎಲ್ಲಿ ಧರ್ಮವಿದೆಯೋ ಅಲ್ಲಿ ವಿಜಯವಿದೆಯೆಂದು. ಆದರೆ ಆ ಮೂರ್ಖನಿಗೆ ನನ್ನ ಮಾತು ಅರ್ಥವಾಗಲಿಲ್ಲ. ನೀನು ಪುರಾಣ ಪುರುಷನಿದ್ದೀಯಾ. ನಿನ್ನ ಬಗ್ಗೆ ನಾನು ಅರಿತಿದ್ದೇನೆ." ಮತ್ತೆ ಹೇಳುವರು!

ಸ ಮಾಂ ತ್ವಮನುಜಾನೀಹಿ ಕೃಷ್ಣ ಮೋಕ್ಷ್ಯೇ ಕಲೇವರಮ್ ।
ತ್ವಯಾಹಂ ಸಮನುಜ್ಞಾತೋ ಗಚ್ಛೇಯಂ ಪರಮಾಂ ಗತಿಮ್ ॥

"ಹೇ ಕೃಷ್ಣಾ, ನಾನು ಶರೀರ ತ್ಯಾಗ ಮಾಡುವಂತೆ ನೀನು ನನಗೆ ಆಜ್ಞೆಯನ್ನು ಕೊಡು. ನಿನ್ನ ಆಜ್ಞೆಯಂತೆ ಶರೀರವನ್ನು ತ್ಯಾಗ ಮಾಡಿ ನಾನು ಪರಮಗತಿಯನ್ನು ಪಡೆಯುವೆನು" ಎಂದು ಕೇಳಿಕೊಂಡಾಗ, ಭಗವಂತನು ಅಪ್ಪಣೆ ಕೊಡುವನು.

ಭೀಷ್ಮ ಪಿತಾಮಹರ ಆಗ ಯೋಗದ ಮೂಲಕ ವಾಯುವನ್ನು ತಡೆದು, ಕ್ರಮಶಃ ಪ್ರಾಣಗಳನ್ನು ಮೇಲಕ್ಕೆ ಹತ್ತಿಸತೊಡಗಿದರು. ಆ ಪ್ರಾಣವಾಯುವು ಅವರ ಶರೀರದ ಕೆಳಭಾಗದ ಒಂದೊಂದೇ ಅಂಗವನ್ನು ಬಿಟ್ಟು ಮೇಲಕ್ಕೆ ಹೇಗೆ ಹೇಗೆ ಹೋಗುತ್ತಿತ್ತೋ ಶರಮಂಚಕ್ಕಿದ್ದ ಆಯಾ ಅಂಗಕ್ಕಿದ್ದ ಬಾಣಗಳೂ ಸಹ ಒಂದೊಂದಾಗಿ ಕೆಳಬಿದ್ದವು. ಹೀಗೆ ಕ್ಷಣಮಾತ್ರದಲ್ಲಿ ಭೀಷ್ಮರ ಶರೀರದಿಂದ ಎಲ್ಲಾ ಬಾಣಗಗಳು ಕೆಳಗುದುರಿದವು. ಶರೀರದ ಮೇಲೆ ಒಂದೂ ಗಾಯವೂ ಕೂಡಾ ಉಳಿಯಲಿಲ್ಲ. ಮತ್ತೆ ಪ್ರಾಣವು ಬ್ರಹ್ಮರಂಧ್ರವನ್ನು (ನೆತ್ತಿಯನ್ನು) ಭೇದಿಸಿ ಮೇಲಕ್ಕೆ ಹೊರಟುಹೋಯಿತು. ಬ್ರಹ್ಮರಂಧ್ರದಿಂದ ಹೊರಟ ಆ ತೇಜಸ್ಸು ಆಕಾಶದಲ್ಲಿ ವಿಲೀನವಾಗುತ್ತಿರುವುದನ್ನು ಅಲ್ಲಿದ್ದ ಎಲ್ಲರೂ ನೋಡಿ ನಮಸ್ಕರಿಸಿದರು.

ಹಠಯೋಗ ಸಾಧನೆಯ ಸಿದ್ಧಿಪುರುಷರಿವರು, ಭೀಷ್ಮ ಪಿತಾಮಹರು. ಗ್ರಾಮೀಣ ಜನರು ತಮ್ಮ ಭಾಷಾಶೈಲಿಯಲ್ಲಿ ಹೀಗೆ ಹೇಳುತ್ತಾರೆ. "ನೆತ್ಯಾಗ ಹೋಗಾ ಜೀವ ಕಣ್ಣಾಗ ಹೋಗ್ಯೈತಿ, ಅದ್ಕ ಕಣ್ ತಕ್ಕಂಡೈತಿ", "ಬಾಯಾಗ ಹೋಗ್ಯೈತಿ ಅದಕ ಬಾಯ್ತಕ್ಕಂಡೈತಿ" ಹೀಗೆಲ್ಲಾ ಹೇಳುವರು. ಗಾದೆಯೆಂಬುದು ವೇದಕ್ಕೆ ಸಮಾನ. ಇದು ಸತ್ಯ, ಯಾಕೆಂದರೆ ಯಾವ ಜೀವಾತ್ಮನು ಮೊದಲು ಬ್ರಹ್ಮಸ್ಥಾನದ (ಅಳ್ಳೆತ್ತಿಯ) ಮೂಲಕ ಪ್ರವೇಶವಾಗಿರುತ್ತಾನೋ! ಹಾಗೆ

ಅದೇ ಬ್ರಹ್ಮಸ್ಥಾನದ ಮೂಲಕ ಹೊರಹೋಗಬೇಕೆಂಬುದು ಈ ಗಾದೆ ಮಾತಿನ ಅರ್ಥ. ಇದು ಪ್ರತಿಯೊಬ್ಬರಿಗೂ ಸಾಧ್ಯವಿಲ್ಲದ ಮಾತು. ಯಾಕೆಂದರೆ ಯಾರೊಬ್ಬರು ಯಾವುದಾದರೊಂದು ಯೋಗದ ಮೂಲಕ ಸಿದ್ಧಿಯನ್ನು ಪಡೆದಿರುತ್ತಾರೋ! ಅಂತಹ ಶರಣ, ಸಂತ, ಮಹಾಂತರಿಗೆ ಮಾತ್ರ ಈ ದಶಮ (೧೦ನೇ) ದ್ವಾರದಿಂದ ಅಥವಾ ಹೆಚ್ಚುವರಿ ಬಾಗಿಲಿನ (special gate) ಮೂಲಕ ಪ್ರಾಣವಾಯು ಹೊರಹೋಗಲು ಸಾಧ್ಯ. ಸಾಧಕರಲ್ಲದವರ ಪ್ರಾಣವು ಇರುವ ಒಂಬತ್ತು ದ್ವಾರಗಳಲ್ಲಿ ಯಾವುದಾದರೂ ಒಂದು ದ್ವಾರದ ಮೂಲಕ ಹೊರಹೋಗುವುದು. ಗಂಡಸರಿಗೆ ಒಂಬತ್ತು ದ್ವಾರಗಳಿದ್ದರೆ, ಹೆಂಗಸರಿಗೆ ಕುಚಗಳಲ್ಲಿರುವ ಮತ್ತೆರಡು ದ್ವಾರಗಳು ಹೆಚ್ಚಾಗಿರುವುವು ಎನ್ನುತ್ತಾರೆ ನಮ್ಮ ದಾರ್ಶನಿಕರು.

ಗ್ರಾಮೀಣ ಭಾಷೆಯಲ್ಲಿ 'ಗಾಳಿಚೇಷ್ಟೆ' ಎಂಬ ಮಾತೊಂದಿದೆ. ಅದು ಭೂತಚೇಷ್ಟೆಗಷ್ಟೇ ಅನ್ವಯಿಸುವುದಿಲ್ಲ. ನಮ್ಮ ಶರೀರಕ್ಕೂ ಅನ್ವಯಿಸುವುದು. **"ಜೀವ ಇರುವವರೆಗೂ ಈ ಶರೀರ ಶಿವ. ಜೀವ ಹೋದ ನಂತರ ಅದು ಶವ!"** ಎಂಬಂತೆ. ಎಲ್ಲರಲ್ಲಿರುವ ಗಾಳಿ ಒಂದೇ ಆಗಿದ್ದರೂ ಒಬ್ಬೊಬ್ಬರನ್ನು ಒಂದೊಂದು ರೀತಿ ಆಡಿಸುತ್ತಿರುವುದು. ಆದ್ದರಿಂದ ಈ ಗಾಳಿಯನ್ನು ನಿಯಂತ್ರಿಸುವುದೇ ಹಠಯೋಗ ಮಾರ್ಗ.

ಈ ಹಠಯೋಗದಲ್ಲಿ ರೇಚಕ, ಪೂರಕ, ಕುಂಭಕಗಳೆಂಬ ಕ್ರಿಯಾಮಾರ್ಗಗಳಿವೆ. ಅಲ್ಲದೆ ಕುಂಭಕದಲ್ಲೂ ಅಂತರ್ ಕುಂಭಕ ಮತ್ತು ಬಹಿರ್ ಕುಂಭಕಗಳೆಂಬ ಕ್ರಿಯಾಮಾರ್ಗಗಳಿವೆ. ಆದರೆ ಸಿದ್ಧಿ ಪಡೆದಿರುವಂತಹ ಗುರುವಿನ ಮಾರ್ಗದರ್ಶನ ಹೇಗೆ ಸಿಗುತ್ತೋ ಹಾಗೆ ಪರಿಪಾಲಿಸಿಕೊಂಡು ಹೋಗುವುದು ಸದ್ಭಕ್ತನಾದವನ ಕರ್ತವ್ಯವು.

# ಮಂತ್ರಯೋಗ

"ಮನನಾತ್ತ್ರಾಯತೇ ಇತಿ: ಮಂತ್ರ:" ಮನಸ್ಸಿಗೆ ಯಾವುದು ಆನಂದವನ್ನು ಕೊಡುವುದೋ ಅದು ಮಂತ್ರ. ಬೀಜಾಕ್ಷರಿಸಹಿತವಾದ ಮಹಾಮಂತ್ರಗಳನ್ನು ನಾವು ಜಪಿಸುವಾಗ, ಅದರ ಪ್ರಭಾವವು ನಮ್ಮ ಅವ್ಯಕ್ತ ಚೇತನದ ಮೇಲೆ ಬೀಳುವುದು. ಅವ್ಯಕ್ತ ಚೇತನವೆಂದರೆ ಅತೃಪ್ತ ಭಾವನೆಗಳು. ಮನಸ್ಸು ವ್ಯಕ್ತಚೇತನ. ಯಾಕೆಂದರೆ ನಾವು ಅದನ್ನು ಇದೆ ಎಂದು ಒಪ್ಪಿಕೊಂಡಿರುವುದರಿಂದ ಮಂತ್ರ ಜಪಿಸುವುದರಿಂದ ಮೆದುಳಿನ ನರನಾಡಿಗಳಲ್ಲೆಲ್ಲ, ನವಚೇತನದ ಪ್ರಾದುರ್ಭಾವವುಂಟಾಗುವುದು. ಅಂದರೆ ಮನಸ್ಸಿನ ಚಾಂಚಲ್ಯ ದೂರವಾಗುವುದು. ಇಚ್ಛಾಶಕ್ತಿ ಪ್ರಬಲಗೊಳ್ಳುವುದು. ಜ್ಞಾನಶಕ್ತಿ ವೃದ್ಧಿಸುವುದು. ಕೆಟ್ಟಕೆಟ್ಟ ವಿಚಾರಗಳು ದೂರವಾಗುವುದರಿಂದ ರಕ್ತದೊತ್ತಡದಂತಹ ಕಾಯಿಲೆಗಳು ದೂರವಾಗುವುವು. ಬೀಜಾಕ್ಷರಿಗಳು ನರನಾಡಿಗಳನ್ನು ಪ್ರಚೋದಿಸುವುವು. ಇದರಿಂದ ಅವುಗಳಲ್ಲಿ ರಕ್ತ ಸಂಚಾರ ಸರಾಗವಾಗಿ ನಡೆಯುವುದು. ಹೃದಯ ಮತ್ತು ಶ್ವಾಸಕೋಶಗಳ ಮೇಲೆ ಸಕಾರಾತ್ಮಕ ಪ್ರಭಾವ ಬೀರುವುದು. ಮುಖದಲ್ಲಿ ದಿವ್ಯತೇಜಸ್ಸು ಪ್ರಜ್ವಲಿಸುವುದು. ಇಷ್ಟೆಲ್ಲ ವೈಜ್ಞಾನಿಕ ಸತ್ಯವು.

ಆಧ್ಯಾತ್ಮಿಕವಾಗಿ ಹೀಗೆ ಹೇಳಲಾಗಿದೆ. 'ಅಂತೇ ಯಾ ಮತಿ ಸಾಗತಿಃ' ಎಂದು. ಅಂದರೆ ಜೀವಾತ್ಮ ದೇಹ ತ್ಯಾಗ ಮಾಡುವ ಸಂದರ್ಭದಲ್ಲಿ ಯಾವುದರ ಸ್ಮರಣೆಯನ್ನು ಮಾಡುತ್ತಿರುತ್ತಾನೋ ಮುಂದೆ ಅದೇ ಗತಿ ಪ್ರಾಪ್ತಿಯಾಗುವುದು. ಲೌಕಿಕದ ವಿಷಯಾದಿಗಳ ಮೇಲೆ ಚಿಂತಿಸುತ್ತ ದೇಹ ತ್ಯಜಿಸಿದರೆ, ಪುನ: ಭವಚಕ್ರದಲ್ಲಿ ತಿರುಗುವನು. 'ಶಿವ–ಹರಿ' ಎಂಬ ದೇವನಾಮ ಸ್ಮರಣೆ ಮಾಡುತ್ತಿದ್ದರೆ ಭಗವಂತನ ಸಾನಿಧ್ಯ ಪ್ರಾಪ್ತಿಯಾಗುವುದು. ಇದು ಶಾಸ್ತ್ರ ಸಮ್ಮತ. ಪ್ರಾಕೃತಿಕ ಬಂಧನದಲ್ಲಿ ಸಿಲುಕಿರುವ ಜೀವಾತ್ಮನಿಗೆ ಇದು ಅಷ್ಟು ಸುಲಭದ ಮಾತಲ್ಲ. 'ಸ್ವಭಾವೋ ದುರಿತ ಕ್ರಮು:' ಎಂದಿರುವಂತೆ ಈ ಪ್ರಾಕೃತಿ ಸ್ವಭಾವಗಳನ್ನು ದೂರು ಮಾಡಿಕೊಳ್ಳುವುದು ಕಷ್ಟಸಾಧ್ಯ. ಏಕೆಂದರೆ ಬಹಳಷ್ಟು ಜನ ಪುರಾಣಕ್ಕೆ ಬಂದಿರುತ್ತಾರೆ. ಪುರಾಣಿಕರಾದವರು ಆಗಾಗ ಶಿವನಾಮ ಮತ್ತು ಜೈಕಾರಗಳನ್ನು ಮಾಡಿಸುತ್ತಾರೆ. ಆದರೆ ಅಭ್ಯಾಸವಿಲ್ಲದ ಅವರು ಶಿವನಾಮ ಸ್ಮರಣೆ ಮಾಡಲು ಸಂಕೋಚಪಟ್ಟುಕೊಳ್ಳುವರು. ಯಾಕೆಂದರೆ! ಕೆಲವೊಂದು ದುರಾಚಾರ ದುರ್ವಿಚಾರಗಳು ನಮ್ಮ ಸ್ವಭಾವದಿಂದ ದೂರ ಸರಿಯುವುದು ಕಷ್ಟಸಾಧ್ಯ.

ಸುಸಂಸ್ಕೃತ ಮನೆತನದ ಒಬ್ಬ ಹುಡುಗನಿದ್ದ. ಬಹಳಷ್ಟು ಓದಿದ್ದ. ಹಾಗೆ ಬೆಂಗಳೂರಿನಲ್ಲೂ ದೊಡ್ಡ ನೌಕರಿಯಿತ್ತು. ಆತನೆಂದೂ ತಂದೆತಾಯಿಗಳ ಮಾತು ಮೀರಿದವನಲ್ಲ. ಆದ್ದರಿಂದ ಅವರ ಒತ್ತಡಕ್ಕೆ ಮಣಿದು ಹೆಚ್ಚು ಓದಿರದ ಹಳ್ಳಿಯ ಹುಡುಗಿಯೊಬ್ಬಳನ್ನು ಮದುವೆಯಾಗಿರುತ್ತಾನೆ. ಅವಳು ಮಾತ್ರ ಬಹಳ ಸುಂದರಿ. ಆದರೆ ಅವಳಿಗೆ ನಗರದ ಜನರಂತೆ ಆಡಂಬರದ ಉಡುಗೆತೊಡುಗೆಗಳ ಅಭ್ಯಾಸವಿರುವುದಿಲ್ಲ.

ಒಮ್ಮೆ ಅವರಿಬ್ಬರೂ ಒಂದು ದೊಡ್ಡ ಸಮಾರಂಭಕ್ಕೆ ಹೋಗಬೇಕಾಗಿತ್ತು. ಆದ್ದರಿಂದ ಅವಳನ್ನು ಬ್ಯೂಟಿಪಾರ್ಲರ್ ಒಂದಕ್ಕೆ ಕರೆದುಕೊಂಡು ಹೋಗಿ, ನಗರದವಳಂತೆ ಅಲಂಕಾರ

ಮಾಡಿಸಿಕೊಂಡು ಸಮಾರಂಭಕ್ಕೆ ಕರೆದುಕೊಂಡು ಹೋದ. ಆ ಸಮಾರಂಭದಲ್ಲಿ ಇವನ ಹೆಂಡತಿಯ ಸೌಂದರ್ಯಕ್ಕೆ ಸರಿದೂಗುವ ಮತ್ತೊಬ್ಬ ಹೆಣ್ಣು ಕಾಣಿಸಲಿಲ್ಲ. ಅದಕ್ಕಾತ ಮತ್ತಷ್ಟು ಸಂತೋಷಪಟ್ಟುಕೊಂಡ. ತನ್ನ ಸ್ನೇಹಿತರಲ್ಲಿ ಅವಳ ಬಗ್ಗೆ ಬಹಳಷ್ಟು ಹೇಳಿಕೊಳ್ಳಹತ್ತಿದ. ಅವಳು ಹಳ್ಳಿಯವಳಾಗಿದ್ದರೂ ಅದನ್ನು ಅವರ ಮುಂದೆ ತೋರಿಸಿಕೊಳ್ಳದೆ "ನನ್ನ ಹೆಂಡತಿ ಹುಬ್ಬಳ್ಳಿಯವಳು. ಅವಳಿಗೆ ಹಳ್ಳಿ ಎಂದರೇನು ಗೊತ್ತಿಲ್ಲ". ಹಾಗೆ, ಹೀಗೆ ಬುರುಡೆ ಬಿಡುತ್ತಿದ್ದ.

ಅದರಲ್ಲಿದ್ದ ಒಬ್ಬ ಹೇಳಿದ! "ಹೌದು ಹೌದು ನೀನೇಕೆ ಸುಳ್ಳು ಹೇಳ್ತೀಯಾ? ನಿನ್ನ ಹೆಂಡತಿಯನ್ನು ನೋಡಿದರೇನೇ ಗೊತ್ತಾಗ್ತೈತಿ. ಅವಳು ಪಟ್ಟಣದವಳೋ? ಹಳ್ಳಿಯವಳೋ? ಎಂತೆಂಬುದು" ಎಂದ.

ಅದಕ್ಕವನು, "ಅದು ಹೇಗೆ?" ಎಂದು ಕೇಳಿದ.

"ಅಲ್ನೋಡು ನಿನ್ನ ಹೆಂಡತಿ ಕೈಯೊಳಗಿರುವ ಬಳೆ ನೋಡಿದ್ರೆ ಗೊತ್ತಾಗ್ತೈತಿ. ಯಾಕಂದ್ರ ಆ ಬಳಿಗೆ ಪಿನ್ನು ಹಾಕೊಂಡಿರೋ ಸಂಸ್ಕೃತಿಯೇ ಹೇಳ್ಕೊಡ್ತೈತಿ" ಅಂದಿದ್ದ. ಆಗಲೇ ಅವನ ಮುಖ ಬಾಡಿತ್ತು. ಯಾಕೆಂದರೆ ನಮಗಂಟಿಕೊಂಡಿರುವ ಸ್ವಭಾವಗಳನ್ನು ದೂರ ಮಾಡುವುದು ಕಷ್ಟ ಸಾಧ್ಯ.

ಇದಕ್ಕಿನ್ನೊಂದು ದೃಷ್ಟಾಂತ. ಒಬ್ಬ ಕಾಡಿನಲ್ಲಿ ಒಂದು ದೊಡ್ಡ ಮರವೊಂದನ್ನು ಹತ್ತಿದ್ದ. ತುತ್ತತುದಿಯಲ್ಲಿದ್ದ, ಭಯಂಕರ ಬಿರುಗಾಳಿ ಬೀಸಿತ್ತು. ಮರ ಅಲ್ಲಾಡಿತು. ಅವನು ಕೆಳಗೆ ಬೀಳುವ ಭಯದಲ್ಲಿದ್ದ. ಈ ದೃಶ್ಯವನ್ನು ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ಶಿವಪಾರ್ವತಿಯರು ನೋಡಿದರು. ಆಗ ಪಾರ್ವತಿ ಕೇಳಿದಳು. "ಶಿವ ಅವನು ಬೀಳುವುದು ಖಚಿತ. ಆದ್ದರಿಂದ ಅವನು ನೆಲಕ್ಕೆ ಬೀಳುವಾಗ ಏನೆನ್ನುತ್ತಾ ಬೀಳುತ್ತಾನೆ?" ಎಂದು.

ಪರಮಾತ್ಮನದಕ್ಕೆ "ಶಿವ ಶಿವಾ ಎನ್ನುತ್ತಾ ಬೀಳುತ್ತಾನೆ" ಎಂದು ಹೇಳಿದ.

ಪಾರ್ವತಿ ಒಪ್ಪಲಿಲ್ಲ. "ಅವನು 'ಅಮ್ಮಾ' ಎನ್ನುತ್ತಾ ಬೀಳುತ್ತಾನೆ. ಇದು ಸತ್ಯ. ಆದರೆ ನಮ್ಮಿಬ್ಬರಲ್ಲಿ ಒಂದು ಷರತ್ತು. ಅವನು 'ಅಮ್ಮಾ' ಎನ್ನುತ್ತಾ ಬಿದ್ದರೆ ನಾನವನನ್ನು ಕಾಪಾಡುತ್ತೇನೆ. 'ಶಿವಾಶಿವಾ' ಎನ್ನುತ್ತಾ ಬಿದ್ದರೆ ನೀನವನನ್ನು ಕಾಪಾಡುವಂತಿ ಸರಿನಾ?" ಎಂದು ಕೇಳಿದಳು. ಶಿವನದಕ್ಕೆ ಒಪ್ಪಿಕೊಂಡ.

ಅವ ಬಿದ್ದ. ಬೀಳುವಾಗ ಅವನು 'ಶಿವಶಿವಾ' ಎನ್ನಲಿಲ್ಲ, 'ಅಮ್ಮಾ' ಎಂದೂ ಕೂಗಲಿಲ್ಲ. ಎಲ್ಲವನ್ನು ಬಿಟ್ಟು 'ಸತ್ನೆಪ್ಪೋ' ಎಂದು ಕೂಗಿಕೊಂಡ. ಯಾವುದಕ್ಕೂ ಸಂಸ್ಕಾರವಿರಬೇಕು. ಜೊತೆಗೆ ಅಭ್ಯಾಸವನ್ನು ಮಾಡಬೇಕು. ಕುಂತರೂ, ನಿಂತರೂ, ಎದ್ದರೂ, ಮಲಗಿದರೂ 'ಶಿವಶಿವಾ' ಎನ್ನುವುದಾಗಲಿ 'ಹರಿ ಹರಿ' ಎನ್ನುವುದಾಗಲಿ ಅಭ್ಯಾಸ ಕೆಡವಿಕೊಳ್ಳಬೇಕು.

ಒಬ್ಬ ಬ್ರಾಹ್ಮಣನಿದ್ದ. ಆತನು ಸದಾ ಮಂತ್ರಯೋಗಿ. ಕುಂತರೂ, ನಿಂತರೂ, ಓಡಾಡಿದರೂ, ಮಲಗಿದರೂ 'ರಾಮ, ರಾಮ' ಎಂಬ ಮಂತ್ರ ಪಠಿಸುತ್ತಿದ್ದ. ಆತ ಬಹಿರ್ದೆಸೆಗೆ ಹೋಗಿದ್ದ ಸಂದರ್ಭದಲ್ಲಿ ಜನಿವಾರವನ್ನು ಕಿವಿಗೆ ಹಾಕಿಕೊಳ್ಳುವುದರ ಬದಲು ತನ್ನ ನಾಲಿಗೆಗೆ ಸುತ್ತಿಕೊಂಡಿದ್ದ. ಇದನ್ನು ನೋಡಿದ ಆಚಾರ್ಯರೊಬ್ಬರು 'ಹೀಗೇಕೆ ಜನಿವಾರವನ್ನು ಕಿವಿಯ

ಬದಲು ನಾಲಿಗೆಗೆ ಸುತ್ತಿಕೊಂಡಿರುವೆ?" ಎಂದರು ಕೇಳಿದರು. ಅದಕ್ಕೆ ಆ ಬ್ರಾಹ್ಮಣ ಹೇಳಿದ. "ನನ್ನ ಬಾಯಿಯಲ್ಲಿ ರಾಮ ಮಂತ್ರ ನಿಲ್ಲುತ್ತಿಲ್ಲ. ಆದ್ದರಿಂದ ಈ ಸಂದರ್ಭದಲ್ಲಿ ಅದನ್ನು ನುಡಿಯಬಾರದೆಂದು ನಾನು ಹೀಗೆ ಮಾಡುತ್ತಿರುವುದು" ಎಂದು ಹೇಳಿದ್ದ. ಅದಕ್ಕೆ ಆಚಾರ್ಯರು "ನೀನೆಂಥಾ ದಡ್ಡ, ಶಾಸ್ತ್ರಗಳು 'ಅಂತೇ ಯಾ ಮತಿ: ಸಾ ಗತಿ:' ಎಂದು ಹೇಳುವೆ. ಸಾವು ಈ ಸಂದರ್ಭದಲ್ಲಿ ಬರಬಾರದೆಂದೇನೂ ಇಲ್ಲ. ಅದು ಯಾವಾಗ ಬೇಕಾದರೂ ಬರಬಹುದು. ಆದ್ದರಿಂದ ಆ ಸಾವೆಂಬುದು ನಿನಗೆ ಈ ಸಂದರ್ಭದಲ್ಲಿ ಬಂದುದಾದರೆ ಇಲ್ಲಿಯವರೆಗೂ ನೀ ಸಾಧಿಸಿದ ನಿನ್ನ ಸಾಧನೆಯಲ್ಲ ವ್ಯರ್ಥವಾಗಿಬಿಡುವುದು. ನೀನು ಮುಕ್ತಿ ಕಾಣದೆ ಮತ್ತೆ ಈ ಭವಚಕ್ರದಲ್ಲಿ ತಿರುಗಬೇಕಾದೀತು" ಎಂತೆಂಬ ಜ್ಞಾನೋಪದೇಶ ಮಾಡಿದರು.

ವ್ಯಕ್ತಿಯೊಬ್ಬ ಫೋಟೋ ತೆಗೆಸಿಕೊಳ್ಳಲು ಹೋಗಿರುತ್ತಾನೆ. ಫೋಟೋಗ್ರಾಫರ್ ಕ್ಲಿಕ್ ಮಾಡುವಾಗ ಇವ ಕಣ್ಣು ಬಡೆದಿರುತ್ತಾನೆ. ಫೋಟೋ ತೊಳೆದಾದ ಮೇಲೆ ಫೋಟೋಗ್ರಾಫರ್ ಅವನ ಭಾವಚಿತ್ರ ಅವನ ಕೈಯಲ್ಲಿ ಕೊಟ್ಟಾಗ ಅವ ಅದನ್ನು ನೋಡಿ! "ಏನಿದು? ನನ್ನನ್ನು ಕುರುಡನನ್ನಾಗಿ ಮಾಡಿರುವೆಯಲ್ಲ?" ಎಂದು ಪ್ರಶ್ನಿಸುತ್ತಾನೆ. ಅದಕ್ಕುತ್ತರವಾಗಿ ಫೋಟೋಗ್ರಾಫರ್ ಹೇಳುತ್ತಾನೆ. "ನಾನೇನು ಮಾಡಲಿ, ನಾನು ಫೋಟೋ ಕ್ಲಿಕ್ ಮಾಡುವಾಗಲೇ ನೀನು ಕಣ್ಣು ಮುಚ್ಚಿದ್ದೀಯಾ. ಆದ್ದರಿಂದ ಕುರುಡನಾಗಿರುವೆ" ಎಂದು ಹೇಳುವನು.

ನಾವಾದರೂ ಅಷ್ಟೇ. ಜೀವನದಲ್ಲಿ ಸಾಧನೆ ಮಾಡಿ ಕೊನೆಗಾಲದಲ್ಲಿ ಕೈಬಿಟ್ಟರೆ ಮತ್ತೆ ಭವಬಂಧನ ತಪ್ಪಲಾರದು. ಯಾಕೆಂದರೆ ಮುಕ್ತಿ ಸಾಧನೆಗೆ ಮಂತ್ರಯೋಗಕ್ಕಿಂತಲೂ ಸುಲಭವಾದ ಮಾರ್ಗ ಮತ್ತೊಂದಿಲ್ಲ. ಈ ಮಂತ್ರ ಹೊರಗೆ ಕೇಳಿಸುವಂತೆ ಅಲ್ಲದಿದ್ದರೂ ಮನಸ್ಸಿನಲ್ಲಿ ಜಪ ನಡೆಯುತ್ತಿದ್ದರೆ ಸಾಕು. ಅದು ಶ್ರೇಷ್ಠವಾದುದು.

ನಮ್ಮ ಬಾಯಿಯ ಮೂಲಕ ಹೊರಬಂದ ಶಬ್ದ ತರಂಗಗಳ ನಾದೋಚ್ಚಾರದ ಮಹಾಮಂತ್ರವು, ಪ್ರಕೃತಿಯಲ್ಲಿ (ಪರದಲ್ಲಿ) ಲೀನವಾಗಿ ಮತ್ತೆ ಅದೇ ಪರವಾಣಿ ಹಿಂದಿರುಗಿ ಬಂದು, ನಮ್ಮ ಭಾವನೆಯೊಳಗೆ ನಾದ ರೂಪವಾಗಿ ನುಡಿಯುತ್ತಿರಬೇಕು. ಈ ಸಾಧನೆ ಏಕಾಂತದಲ್ಲಿ ನಡೆಯುತ್ತಿರಬೇಕು.

ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ಮಹಾ ಶಿವಶರಣ ಉರಿಲಿಂಗ ಪೆದ್ದಿ. ಈತ ಮೊದಮೊದಲು ಮಹಾನ್ ಕಳ್ಳ. ಅದೊಂದು ದಿನ ರಾತ್ರಿ ಈತ ಕಳ್ಳತನಕ್ಕೆಂದು ಉರಿಲಿಂಗ ಶಿವಾಚಾರ್ಯರ ಮಹಾಮಠಕ್ಕೆ ಹೋಗಿರುತ್ತಾನೆ. ಮಠದ ಮಾಳಿಗೆ ಹತ್ತಿ ಗವಾಕ್ಷಿ (ಬೆಳಕಿಂಡಿ) ಯಿಂದ ಒಳನೋಡುತ್ತಾನೆ. ಶಿವಾಚಾರ್ಯರು ಮಠಕ್ಕೆ ಬಂದಿದ್ದ ಭಕ್ತರಿಗೆ ಲಿಂಗಾಂಗ ಸಾಮರಸ್ಯದ ಉಪದೇಶವನ್ನು ಮಾಡಿ ನಂತರ ಸ್ನಾನಮಾಡಿ ಲಿಂಗಪೂಜೆಗೆ ಕೂಡುತ್ತಾರೆ. ಆಗ ಶ್ರೀಗಳು ಲಿಂಗವನ್ನೇ ನೋಡುತ್ತಾ ಶಿವಯೋಗದಲ್ಲಿ ಮೈಮರೆತು ಬಿಡುತ್ತಾರೆ.

ಮೇಲಿನಿಂದ ಇದೆಲ್ಲವನ್ನು ನೋಡುತ್ತಿದ್ದ ಪೆದ್ದಿಯ ಮನಸ್ಸು ಪರಿವರ್ತನೆಯಾಗುತ್ತದೆ. ಮರುದಿನ ಗುರುಗಳನ್ನು ಹುಡುಕಿಕೊಂಡು ಮಠಕ್ಕೆ ಬರುವನು. ಗುರುಗಳು ಮಠದಲ್ಲಿರುವುದಿಲ್ಲ. ಹೊಲದಲ್ಲಿರುತ್ತಾರೆ. ಅಲ್ಲಿಗೆ ಹೋಗಿ, ಗುರುಗಳಲ್ಲಿ ಹೀಗೆ ಕೇಳುತ್ತಾನೆ. "ನನಗೂ ದೀಕ್ಷೆ ಕೊಡಿ, ನನಗೂ ದೀಕ್ಷೆ ಕೊಡಿ" ಎಂದು ಮತ್ತೆ ಮತ್ತೆ ಕೇಳುತ್ತಲೇ ಅವರನ್ನು ಹಿಂಬಾಲಿಸುತ್ತಾನೆ.

ಹೀಗೆ ಬಹಳ ಹೊತ್ತು ಪೀಡಿಸುತ್ತಾನೆ.

ಆಗ ಗುರುಗಳಿಗೆ ಎಲ್ಲಿಲ್ಲದ ಸಿಟ್ಟು ಬರುವುದು. ಕೂಡಲೆ ನೆಲಕ್ಕೆ ಬಾಗಿ ಕಲೊಂದನ್ನು ಕೈಗೆತ್ತಿಕೊಳ್ಳುವರು. ಅದು ಬರಿ ಕಲ್ಲಾಗಿರುವುದಿಲ್ಲ, ಕಪ್ಪಾಗಿ ದುಂಡಾಗಿರುವ ಸಣ್ಣ ಗುಂಡು ಅದಾಗಿತ್ತು. ಅದನ್ನು ತೆಗೆದುಕೊಂಡು ಸಿಟ್ಟಿನಿಂದ 'ಘೇದಗಡ್ ಜಾ' ಎನ್ನುತ್ತಾ ಪೆದ್ದಿಯ ಕಡೆ ಎಸೆವರು. (ಘೇದಗಡ್ ಜಾ ಎಂಬುದು ಮರಾಠಿಗರ ಭಾಷೆ. ಹಾಗೆಂದರೆ 'ಏ ಹೋಗ್ತಿಯೋ ಇಲ್ಲೋ' ಎಂಬರ್ಥವು) ಕೂಡಲೆ ಪೆದ್ದಿ ಗುರುಗಳು ಎಸೆದ ಆ ಗುಂಡನ್ನು ಕೈಯಲ್ಲಿ ಹಿಡಿದುಕೊಂಡು ಗುಂಡಿಗೂ, ಗುರುಗಳಿಗೂ ನಮಸ್ಕರಿಸಿ ಮನೆಗೆ ಹೋಗಿಬಿಡುವನು.

ಅವನ ಭಾವನೆಗೆ ಅದೇ ದೀಕ್ಷೆ. ಗುರುಗಳು ಎಸೆದ ಆ ಚಿಕ್ಕ ಗುಂಡೇ ಇಷ್ಟಲಿಂಗ. 'ಘೇದಗಡ್ ಜಾ' ಎಂಬುದು ಗುರು ಉಪದೇಶಿಸಿದ ಮಂತ್ರ. ಹೀಗೆ ಭಾವಿಸಿಕೊಂಡು ತನ್ನ ಮುಗ್ಧ ಭಕ್ತಿಯಿಂದ ಅದನ್ನೇ ಪೂಜಿಸಿದ. ಆ ಮಂತ್ರವನ್ನೇ ಜಪಿಸಿದ. ಕೊರಳಲ್ಲಿ ಆ ಗುಂಡನ್ನೇ ಧರಿಸಿಕೊಂಡು ಶಿರೋವ್ರತ ಪರಿಪಾಲಿಸಿದ.

ಅಲ್ಲಿನ ರಾಜನೊಬ್ಬ ಪ್ರಜೆಗಳ ಹಿತರಕ್ಷಣೆಗಾಗಿ ಒಂದು ದೊಡ್ಡ ಕೆರೆ ಕಟ್ಟಿಸುತ್ತಿದ್ದ. ಆ ಕೆರೆಯ ಮಧ್ಯದಲ್ಲಿ ದೊಡ್ಡ ಬಂಡೆಯೊಂದು ಹಾಸಿಗೆಯಂತೆ ಹರವಿಕೊಂಡಿತ್ತು. ಎಷ್ಟೇ ಪ್ರಯತ್ನ ಮಾಡಿದರೂ ಆ ಬಂಡೆ ಹೊಡೆದು ಹಾಕಲು ಸಾಧ್ಯವಾಗಲಿಲ್ಲ. ಕೂಲಿಕಾರರು ರಾಜನಿಗೆ ಈ ಸುದ್ದಿ ತಿಳಿಸಿದರು. ರಾಜನಾಗ ಉರಿಲಿಂಗ ಶಿವಾಚಾರ್ಯರಲ್ಲಿಗೆ ಬಂದು ಆ ವಿಷಯವನ್ನು ಅವರ ಗಮನಕ್ಕೆ ತಂದ. ಕೂಡಲೇ ಶ್ರೀಗಳು ರಾಜನೊಂದಿಗೆ ಕೆರೆಯ ಕಡೆಗೆ ನಡೆದರು. ತಮ್ಮ ಪರುಷಹಸ್ತವನ್ನು ಆ ಬಂಡೆಗೆ ಮುಟ್ಟಿ "ಈಗ ಹೊಡೆಯಿರಿ" ಎಂದು ಕೂಲಿಕಾರರಿಗೆ ಹೇಳಿದರು. ಆದರೆ ಬಂಡೆ ಎಳ್ಳಷ್ಟು ಚೂರಾಗಲಿಲ್ಲ.

ಅಲ್ಲಿಯೇ ಇದ್ದು ಇದನ್ನೆಲ್ಲ ಗಮನಿಸುತ್ತಿದ್ದ ಉರಿಲಿಂಗ ಪೆದ್ದಿ ಗುರುಗಳಲ್ಲಿಗೆ ಬಂದು ಗುರುಗಳ ಪಾದಕ್ಕೆ ನಮಸ್ಕರಿಸಿ, "ಸದ್ಗುರುವೇ ನೀವು ನನಗೆ ಆಶೀರ್ವದಿಸಿದರೆ ಸಾಕು. ಈ ಬಂಡೆಯನ್ನು ಹೊಡೆದು ಹಾಕುತ್ತೇನೆ" ಎಂದು ಕೇಳಿಕೊಂಡ. ಗುರುಗಳದಕ್ಕೆ ಅಪ್ಪಣೆ ಕೊಟ್ಟರು. ಆ ಕೂಡಲೇ ಉರಿಲಿಂಗ ಪೆದ್ದಿ ತನ್ನ ಕೊರಳಲ್ಲಿದ್ದ (ನಕಲಿ) ಲಿಂಗಕ್ಕೆ ನಮಸ್ಕರಿಸಿ ಪುನ: ಗುರುಗಳ ಪಾದಕ್ಕೂ ನಮಸ್ಕರಿಸಿ ಆ ಹಾಸು ಬಂಡೆಯ ಮೇಲೆ ನಿಂತುಕೊಂಡು ಮಹಾಭಕ್ತಿಯಿಂದ 'ಘೇದಗಡ್ ಜಾ' ಎಂದು ಕುಪ್ಪಳಿಸಿ ಎಗರಿದ. ಆ ಕೂಡಲೇ ಆ ಹಾಸುಬಂಡೆ ಚೂರುಚೂರಾಗಿ ಹೋಯಿತು. ಇದನ್ನು ಕಂಡ ಅಲ್ಲಿಯ ಜನರು ಜೈಕಾರ ಹಾಕಿದರು.

ಮಂತ್ರ ಮೂಲಂ ಗುರೋರ್ವಾಕ್ಯಂ ಪೂಜಾಮೂಲಂ ಗುರೋರ್ಪಾದಮ್ ।
ಧ್ಯಾನಮೂಲಂ ಗುರೋರ್ಮೂರ್ತಿ: ಮುಕ್ತಿಮೂಲಂ ಕೃಪಾ: ॥

ಹೀಗೆ ಗುರುವಿನ ಬಾಯಿಯಿಂದ ಬಂದದ್ದನ್ನೇ ಮಂತ್ರವೆಂದು ಭಾವಿಸಿದ. ಅಸಲಿ ಮಂತ್ರವೋ? ನಕಲಿ ಮಂತ್ರವೋ? ಎಂದು ಭೇದ ಮಾಡದೆ ಅದನ್ನೇ ಮಹಾಭಕ್ತಿಯಿಂದ ಜಪ ಮಾಡಿದ್ದ. ಅವನ ಭಕ್ತಿಗೆ ಅದು ಸಿದ್ಧಿಯಾಗಿತ್ತು. ಅದಕ್ಕಾಗಿ ಆ ಬಂಡೆ ಚೂರುಚೂರಾಯಿತು.

ನಾವು ನಾಟಕೀಯ ಭಕ್ತರು. ಉರಿಲಿಂಗಪೆದ್ದಿ ಮುಗ್ಧತೆಯ ಸದ್ಭಕ್ತ. ಗುರುಗಳುಪದೇಶಿಸಿದ

ಅಸಲಿ (Original) ಮಂತ್ರವನ್ನು ನಕಲಿ (Duplicate) ಆಗಿಸುವ ನಾವುಗಳೆಲ್ಲಿ? ನಕಲಿ ಮಂತ್ರವನ್ನೇ ಅಸಲಿಯಾಗಿಸಿದಂತಹ ಉರಿಲಿಂಗಪೆದ್ದನೆಲ್ಲಿ? ಹೀಗೆ ನಮ್ಮನ್ನು ನಾವು ಅವಲೋಕಿಸಿಕೊಂಡರೆ ಇದಕ್ಕಿಂತ ಮಹತ್ತರವಾದದ್ದು ಮತ್ತೊಂದಿಲ್ಲ.

ಮಂತ್ರವನ್ನು 'ಅಕ್ಷರಬ್ರಹ್ಮ' ಎನ್ನುತ್ತಾರೆ. ಅ+ಕ್ಷರ=ಅಕ್ಷರ. 'ಕ್ಷರ' ಎಂದ ನಾಶ. ಅಕ್ಷರವೆಂದರೆ ನಾಶವಲ್ಲದ್ದು. ಅವಿನಾಶಿ ಪರಶಿವಬ್ರಹ್ಮ. ಅಕ್ಷರವನ್ನು ಲಕ್ಷ ಸಲ ಜಪಿಸಬೇಕಂತೆ. ಆಗದು ಸಿದ್ಧಿಯಾಗಿ ಫಲ ಕೊಡುವುದು. ಅದಕ್ಕೆಂದೇ ಅಷ್ಟೋತ್ತರ ಶತ (೧೦೮) ಜಪ, ಸಹಸ್ರ (೧೦೦೦) ಜಪ, ಲಕ್ಷ (೧೦೦೦೦೦) ಜಪಗಳನ್ನು ಮಾಡುವುದು, ಮಾಡಿಸುವುದು.

ಒಂದು ಊರಿನಲ್ಲಿ ಒಬ್ಬ ಮುದುಕಿ ಇದ್ದಳು. ಒಮ್ಮೆ ಆಕೆಗೆ ಏನೋ ಒಂದು ದೊಡ್ಡ ಕಷ್ಟ ಬಂದೊದಗಿತ್ತು. ಅದಕ್ಕವಳು ಭಗವಂತನಲ್ಲಿ "ಭಗವಂತಾ ನೀ ನನ್ನ ಕಷ್ಟ ಪರಿಹಾರ ಮಾಡಿದರೆ ಒಂದು ಸಾವಿರ ಜನರಿಗೆ ಊಟ ಹಾಕಿಸುತ್ತೇನೆ" ಎಂದು ಹರಕೆ ಹೊತ್ತಳು. ಕ್ರಮೇಣ ಅವಳ ಕಷ್ಟಗಳೂ ಸಹ ದೂರಾದವು. ಆಗ ಅವಳು ಹರಕೆ ತೀರಿಸಬೇಕಾಗಿತ್ತು. ಆದರೆ ಅವಳಿಗೆ ಅಷ್ಟೊಂದು ಜನರಿಗೆ ಅನ್ನ ಹಾಕುವಷ್ಟು ಹಣದ ಅನುಕೂಲತೆ ಆಗಲಿಲ್ಲ. ಮತ್ತೆ ಈ ಚಿಂತೆ ಅವಳನ್ನು ಕಾಡಹತ್ತಿತು. ಮಹಾತ್ಮರೊಬ್ಬರಲ್ಲಿ ತನ್ನ ಚಿಂತೆಯನ್ನು ಹೇಳಿಕೊಂಡಳು. ಅದಕ್ಕವರು, "ನೋಡು ತಾಯಿ, ನಾನು ನಿನಗೆ ಪರಿಹಾರ ಮಾರ್ಗವೊಂದನ್ನು ಸೂಚಿಸುತ್ತೇನೆ. ಹಾಗೇ ನೀ ಮಾಡು. ನಾಥ ಪರಂಪರೆಯ ಏಕನಾಥರೊಬ್ಬರಿಗೆ ನೀನೊಂದುದಿನ ಊಟ ನೀಡಿ ಅವರನ್ನು ತೃಪ್ತಿಪಡಿಸಿದರೆ ಸಾಕು. ನೀನು ಸಾವಿರ ಜನರಿಗಷ್ಟೇ ಅಲ್ಲ, ಲಕ್ಷೋಪಲಕ್ಷ ಜನರಿಗೆ ಊಟ ಹಾಕಿ ಸಂತೃಪ್ತಿಗೊಳಿಸಿದ ಫಲ ಸಿಗುತ್ತದೆ. ಯಾಕೆಂದರೆ ಅವರು ಪ್ರತಿನಿತ್ಯ ವಿಷ್ಣು ಸಹಸ್ರನಾಮಾವಳಿಯನ್ನು ಹೇಳುತ್ತಾರೆ. ಆದ್ದರಿಂದ ಅವರಲ್ಲಿ ಅಂತಹ ಶಕ್ತಿಯಿದೆ. ನೀನು ಅಷ್ಟುಮಾಡು" ಎಂದು ಹೇಳಿ ಕಳಿಸಿದರು.

ಮಹಾತ್ಮರ ಮಾತು ಕೇಳಿದ ಆ ಮುದುಕಿ ಏಕನಾಥರ ಬಳಿಗೆ ಬಂದು ವಿಷಯವನ್ನೆಲ್ಲ ತಿಳಿಸಿದಳು. ಆ ಮುದುಕಿಯ ಪ್ರಾಮಾಣಿಕತೆ, ಭಕ್ತಿ ಹಾಗೂ ಶ್ರದ್ಧೆಯನ್ನು ಕಂಡ ಆ ಏಕನಾಥರು ಒಪ್ಪಿಗೆ ಕೊಟ್ಟರು. ಮುದುಕಿ ಅಡುಗೆಯನ್ನು ಮಾಡಿಕೊಂಡು ಏಕನಾಥರ ಬಳಿಗೆ ಬಂದು ವಂದಿಸಿ ಭಕ್ತಿಯಿಂದ ಊಟ ಬಡಿಸಿದಳು. ಏಕನಾಥರಾದರೂ ವಿಷ್ಣು ಸಹಸ್ರನಾಮಾವಳಿಗಳನ್ನು ಹೇಳುತ್ತಲೇ ಊಟ ಮಾಡಿ ಮುಗಿಸಿ ಕೈತೊಳೆದುಕೊಂಡರು. ಮುದುಕಿಯಾಗ "ಸ್ವಾಮಿ, ಎಲೆಯ ಎತ್ತಲು ಅಪ್ಪಣೆ ಕೊಡಿರಿ" ಎಂದು ಪ್ರಾರ್ಥಿಸಿಕೊಂಡಳು.

ಏಕನಾಥರಾಗ, "ಸಾವಿರ ಮುಖದಿಂದ ಭಗವಂತನೇ ಬಂದು ಉಂಡಿದ್ದಾನೆ. ಸಾವಿರ ಜನ ಊಟ ಮಾಡಿರುವ ಪುಣ್ಯ ನಿನಗೆ ಸಿಕ್ಕಿದೆ. ಇನ್ನು ನಿನ್ನ ಹರಕೆ ತೀರಿತು. ಎಂಜಲೆಲೆಯನ್ನು ಎತ್ತಬಹುದು" ಎಂದು ಹೇಳಿದರು. ಮುದುಕಿ ಎಂಜಲೆಲೆಯನ್ನು ಎತ್ತಿದಳು. ಅದರ ಕೆಳಗೆ ಮತ್ತೊಂದು ಇತ್ತು. ಹೀಗೆ ಸಾವಿರ ಆಗುವವರೆಗೂ ಎಲೆಗಳನ್ನು ಎತ್ತಿ ಎತ್ತಿ ಹೊರಗೆ ಹಾಕಿ ಬಂದಳು. ಇದನ್ನು ಕಂಡ ಏಕನಾಥರಿಗೂ ಸಹ ಆಶ್ಚರ್ಯವಾಯಿತು. "ಹೇ ಮುದುಕಿ ನೀನು ಧನ್ಯಳಾದೆ" ಎಂದು ಆಶೀರ್ವದಿಸಿದರು.

ವೀರಶೈವ ಸಿದ್ಧಾಂತದ ಪ್ರಕಾರ ಭಕ್ತನಾದವನು ಜಂಗಮಕ್ಕೆ ದಾಸೋಹ ಮಾಡುವ

ಸಂದರ್ಭದಲ್ಲಿ ಊಟವನ್ನೆಲ್ಲ ಬಡಿಸಿದ ನಂತರ ಜಂಗಮಕ್ಕೆ ಅರ್ಪಿತವಾಗಲಿ ಎಂಬ ಉದ್ದೇಶದಿಂದ ಶ್ರೀ ಗುರುಗಳ ಮುಂದೆ ಸಾಷ್ಟಾಂಗ ನಮಸ್ಕಾರವನ್ನು ಹಾಕುತ್ತಾನೆ. ಅದಕ್ಕೆ ಪ್ರತಿಯಾಗಿ ಶ್ರೀಗುರುವಾದವನು ಭಕ್ತನನ್ನು ಹೀಗೆ ಹರಸಿ ಆಶೀರ್ವದಿಸುತ್ತಾನೆ.

**ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರ: ।**

**ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ ॥ (ಸಿ.ಶಿ.)**

ಶಿವಯೋಗಿಯೊಬ್ಬ ತೃಪ್ತಿಯಾದರೆ ಶಿವನೇ ತೃಪ್ತನಾಗುವನು. ಶಿವನು ತೃಪ್ತಿಯಿಂದ ಶಿವಸ್ವರೂಪವಾದ ಚರಾಚರಾತ್ಮಕ ಜಗತ್ತು ತೃಪ್ತಿಹೊಂದುವುದು. ಇಂತಹ ಪುಣ್ಯ ಸದ್ಭಕ್ತನಿಗೆ ದೊರಕುವುದು ಎಂಬ ಆಶೀರ್ವಾದ ಇದಾಗಿದೆ.

ಪ್ರಕೃತಿಯಲ್ಲಿ ನಾನಾ ಬಗೆಯ ಗಿಡಮರಗಳಿವೆ. ಆದರೆ ಯಾವ್ಯಾವ ಗಿಡಮೂಲಿಕೆಗಳಿಂದ ಯಾವ್ಯಾವ ರೋಗಗಳನ್ನು ಕಳೆಯುವ ಶಕ್ತಿ ಇದೆ ಎಂಬುದು ನಾಟಿವೈದ್ಯರಿಗೆ ಮಾತ್ರ ಗೊತ್ತು. ಹಾಗೆ! 'ಅ' ದಿಂದ 'ಕ್ಷ' ವರೆಗೆ ೫೨ ಅಕ್ಷರಗಳಲ್ಲಿ ಯಾವ್ಯಾವ ಅಕ್ಷರಗಳಿಂದ ಯಾವ್ಯಾವ ದೇವತೆಗಳ ಮಂತ್ರ ಆಗುವುದೆಂಬುದು ನಮ್ಮ ಋಷಿಗಳಿಗೆ ಗೊತ್ತಿತ್ತು. ಅದನ್ನು ಅವರು ಅನುಸರಿಸಿದರು, ಆ ಮಾರ್ಗ ನಮಗೆ ತೋರಿದರು. ಅದರಂತೆ ನಡೆದು ಗುರುವಾದರು. ಆ ಫಲ ಪಡೆದ ಗುರು ನಮಗೆ ಅನುಗ್ರಹ ಕೊಡುವನು. ಈ ಗುರುವಿನ ಅನುಗ್ರಹ ಮೊದಲು ಪ್ರತಿಯೊಬ್ಬರಿಗೂ ಅತ್ಯವಶ್ಯ.

**ಸಪ್ತಕೋಟಿಷು ಮಂತೇಷು ಮಂತ್ರ: ಪಂಚಾಕ್ಷರೋ ಮಹಾನ್**

ಏಳು ಕೋಟಿ ಮಂತ್ರಗಳಲ್ಲಿ ಶಿವ ಪಂಚಾಕ್ಷರ ಮಹಾಮಂತ್ರವೇ ಶ್ರೇಷ್ಟವಾದದ್ದು ಎಂದು ಹೇಳಲಾಗಿದೆ. ಒಟ್ಟಾರೆ ಅವರವರ ಪರಂಪರೆಗನುಸಾರವಾಗಿ ಅವರವರ ಗುರು ಉಪದೇಶಿಸಿದಂತಹ ಮಂತ್ರವೇ ಅವರವರಿಗೆ ಶ್ರೇಷ್ಟವು. ಪ್ರಣವ ಪಂಚಾಕ್ಷರಿ ಮಹಾಮಂತ್ರ ಜಪದ ಬಗ್ಗೆ ಷಣ್ಮುಖ ಸ್ವಾಮಿಗಳು ಹೀಗೆ ಹೇಳುತ್ತಾರೆ.

**ಅರಿಯದೆ ಒಂದು ವೇಳೆ 'ನಮ: ಶಿವಾಯ' ಎಂದೊಡೆ**
**ಮರೆದು ಮಾಡಿದ ಹಿಂದೇಳು ಜನ್ಮದ**
**ಕರ್ಮ ಕಟ್ಟು ಹರಿದು ಹೋಯಿತ್ತು ನೋಡಾ**
**ಅರಿದೊಂದು ವೇಳೆ 'ಓಂ ನಮ: ಶಿವಾಯ' ಎಂದೊಡೆ**
**ದುರಿತ ಸಂಕುಳವೆಲ್ಲ ದೂರಾಗಿಹವು ನೋಡಾ**
**ಇದು ಕಾರಣ 'ಓಂ ನಮ: ಶಿವಾಯ' 'ಓಂ ನಮ: ಶಿವಾಯ'**
**ಎಂಬ ಮಂತ್ರವನ್ನು ಜಪಿಸಿ ನಾನಾ ಭವದ ಬಳ್ಳಿಯಬೇರು ಕಿತ್ತೊಗೆದೆನಯ್ಯ**
**ಅಖಂಡೇಶ್ವರಾ**

ಗುರು ಉಪದೇಶಿಸಿರುವಂತಹ ಅಕ್ಷರ ಬ್ರಹ್ಮವೆಂಬ ಮಹಾಮಂತ್ರವನ್ನು ಶ್ರದ್ಧೆ ಹಾಗೂ ಭಕ್ತಿಗಳಿಂದ ಜಪಿಸಬೇಕು. ಆ ನಾದಬ್ರಹ್ಮ ಸದಾ ನಮ್ಮ ಭಾವದಲ್ಲಿ ನಲಿದು ನರ್ತಿಸಬೇಕು, ಅದು ಮಂತ್ರಯೋಗ.

# ಶಿವಯೋಗ

ವೀರಶೈವನಾದವನು ತನ್ನ ಇಷ್ಟಲಿಂಗದೊಂದಿಗೆ ಶಿವಯೋಗ ಮಾಡುವನು. ಹಾಗಾದರೆ ವೀರಶೈವನೆಂದರೆ ಯಾರು? ಈ ಬಗ್ಗೆ ಸ್ಕಂದ ಪುರಾಣದಲ್ಲಿ ವ್ಯಾಸ ಮಹರ್ಷಿಗಳು ಹೀಗೆ ಹೇಳುತ್ತಾರೆ.

ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ ವಿನ್ಯಸ್ಯ ತಲ್ಲೀನ ಮನ: ಪ್ರಚಾರ: ।
ಬಾಹ್ಯಕ್ರಿಯಾ ಸಂಕುಲ ನಿಷ್ಪ್ರಹಾತ್ಮಾ ಸಂಪಜಯತ್ಯಂಗ ಸ ವೀರಶೈವ ॥

ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡು ಪ್ರತಿನಿತ್ಯ ಅದನ್ನು ಪೂಜಿಸುವವನೇ ನಿಜವಾದ ವೀರಶೈವ.

ಆ ಶಿವಪೂಜೆ ಮಾಡುವುದು ಹೇಗೆ? ಈ ಬಗ್ಗೆ ಸೂಕ್ಷ್ಮ ತಂತ್ರದಲ್ಲಿ ಹೀಗೆ ಹೇಳಲಾಗಿದೆ.

ಕರಸ್ಥಲ ಗತಂ ಲಿಂಗಂ ವಾಮತ: ಕೃತ ಗೋಮುಖಂ ।
ಕನಿಷ್ಟಾನಾಮಿಕಾಗ್ರಾಭ್ಯಾಂ ಶಿವಲಿಂಗಂ ಚ ಗೋಮುಖಂ ॥
ಅಂಗುಷ್ಠಾಗ್ರೇಣ ಚೈವಂ ಹಿಸಂಸ್ಪಶೇದಚೇನಾ ವಿಧೌ ।
ಭಾವಪ್ರಾಣೇಷ್ಟೇ ಲಿಂಗಾನಿ ಪೂಜಯೇದಕ ಭಾವತ: ॥
ಪ್ನಥಗ್ಭಾವಂನ ಕುರ್ವೀತ ಪ್ರಾಣಲಿಂಗಂ ಪುರೋಯತ: ।

ವಾಮ (ಎಡ) ಹಸ್ತದಲ್ಲಿ ಇಷ್ಟಲಿಂಗವನ್ನು ಅಂಗುಷ್ಠದ ಕಡೆಗೆ ಗೋಮುಖ ಮಾಡಿ ಕನಿಷ್ಟಕಾ ಅನಾಮಿಕಗಳಿಂದ ಲಿಂಗದ ಮಸ್ತಕ ಹಾಗೂ ಅಂಗುಷ್ಠದಿಂದ ಗೋಮುಖದ ಸ್ಪರ್ಶವಾಗುವಂತೆ ಹಿಡಿದುಕೊಂಡು ತನ್ನ ದೃಷ್ಟಿಗೆ ನೇರವಾಗಿ ಹನ್ನೆರಡು ಅಂಗುಲದ (ಒಂದು ಅಡಿ) ಅಂತರದಲ್ಲಿ ಲಿಂಗವನ್ನಿರಿಸಿ ಮೊದಲು ಶಾಂಭವೀ ಮುದ್ರೆಯಿಂದ ಅಂದರೆ ದೃಷ್ಟಿಯನ್ನು ಇಷ್ಟಲಿಂಗದಲ್ಲಿಟ್ಟು ಅಂತರಂಗದಲ್ಲಿ ಮನೋವೃತ್ತಿಯಿಂದ ಪ್ರಾಣಲಿಂಗ ಹಾಗೂ ಭಾವಲಿಂಗಗಳನ್ನು ಅನುಲಕ್ಷಿಸಿ ಅರ್ಥಾನು ಸಂಧಾನಪೂರ್ವಕವಾಗಿ ಪಂಚಾಕ್ಷರಿ ಮಹಾಮಂತ್ರವನ್ನು ಜಪಿಸಬೇಕು. ಸಾಧಕನು ನಿರ್ನಿಮೇಷ ದೃಷ್ಟಿಯ ಸಂಬಂಧದಿಂದ ಇಷ್ಟಲಿಂಗಕಾಂತಿಯಿಂದಾರ್ಭವಿಸಿದ ಸೂಕ್ಷ್ಮವಾದ ವಿದ್ಯುತ್ ವಾಮಹಸ್ತದ ಅಂಗುಷ್ಠ ಹಾಗೂ ಅನಾಮಿಕ ಅಂಗುಲಿಗಳ ಮೂಲಕ ಹೃದಯ ಮತ್ತು ಬ್ರಹ್ಮರಂಧ್ರದವರೆಗೆ ಹರಿದು ಅಲ್ಲಿನ ಚಕ್ರಗಳನ್ನು ಜಾಗೃತಗೊಳಿಸಿ, ಪ್ರಾಣಲಿಂಗ ಮತ್ತು ಭಾವಲಿಂಗಗಳ ಅನುಸಂಧಾನದ ಯೋಗ್ಯತೆಯನ್ನುಂಟು ಮಾಡುವುದರಿಂದ ಸಾಧಕನ ಬುದ್ಧಿ ಮನಸ್ಸು ಮತ್ತು ದೃಷ್ಟಿಗಳು ಏಕಮಾತ್ರದಲ್ಲಿ ತ್ರಿಲಿಂಗಾನು ಸಂಧಾನದಲ್ಲಿ ತತ್ಪರಗಳಾಗುತ್ತವೆ.

ಇದಕ್ಕೆ ಶಿವಯೋಗ ಶಾಂಭವೀ ಮುದ್ರಾಯೋಗ, ದೃಷ್ಟಿಯೋಗ ಎಂದು ಕರೆಯುವರು. ಈ ಯೋಗ ಯಾವಾಗಲೋ ಒಮ್ಮೆ ಮಾಡಿದಾಕ್ಷಣ ಫಲ ಸಿಕ್ಕುಬಿಡುವುದಿಲ್ಲ. ಫಲ ಸಿಗುವ ಪರ್ಯಂತರ ಯೋಗ ನಡೆಯುತ್ತಲೇ ಇರಬೇಕು. ಮುಂದದು ತನ್ನಿಂದ ತಾನೇ ನಡೆದುಕೊಂಡು ಹೋಗುತ್ತಿರುತ್ತದೆ. ಈ ಯೋಗದಲ್ಲಿ ಜ್ಞಾನಕ್ರಿಯೆ ನಾದಬ್ರಹ್ಮ, ನಿಶ್ಯಬ್ದ ಬ್ರಹ್ಮ ಇತ್ಯಾದಿಗಳೆಲ್ಲವದಕ್ಕೂ ಪ್ರಾಧಾನ್ಯತೆಯಿದೆ.

ಜಪಾನ್ ದೇಶದ ಓರ್ವಗುರು ಸತ್ಯದರ್ಶನ ಕಂಡಾತ. ಒಂದು ದಿನ ಅವರ ಶಿಷ್ಯನೊಬ್ಬ ಹೀಗೆ ಕೇಳುತ್ತಾನೆ. "ನಿಮ್ಮನ್ನು ದಾರ್ಶನಿಕರು ಪರಮ ಸತ್ಯ ಕಂಡವರು ಎಂದೆಲ್ಲಾ ಜನ ಹೇಳಿಕೊಳ್ಳುತ್ತಾರೆ. ನೀವು ಅಂತಹದ್ದೇನನ್ನು ಕಂಡಿರುವಿರಿ? ಯಾಕೆಂದರೆ ನೀವು ಗುರುವಾಗುವ ಮೊದಲು ಹೇಗಿದ್ದಿರೋ ಹಾಗೇ ಇರುವಿರಿ. ಅದೇ ದೇಹ, ಅದೇ ನುಡಿ, ಅದೇ ನಡೆ. ಏನೂ ವ್ಯತ್ಯಾಸವಾಗಿಲ್ಲ. ಯಾಕೆ ಹಾಗೆ ಹೇಳುವರು?" ಎಂದು ಪ್ರಶ್ನಿಸಿದ.

ಗುರುಗಳು ಹೇಳಿದರು. "ನೀ ಹೇಳುವುದು ನಿಜವಿದೆ. ನಾ ಮೊದಲಿನಂತೆಯೇ ನಡೆಯುತ್ತೇನೆ, ನುಡಿಯುತ್ತೇನೆ, ಮಾಡುತ್ತೇನೆ, ಕೇಳುತ್ತೇನೆ. ಅದರಂದು ರೂಪವನ್ನಷ್ಟೆ ನೋಡುತ್ತಿದ್ದೆ, ಶಬ್ದವನ್ನಷ್ಟೆ ಕೇಳುತ್ತಿದ್ದೆ. ಆದರಿಂದು ಶಬ್ದದೊಂದಿಗೆ ನಿಶ್ಶಬ್ದವನ್ನೂ ಸ್ವಲ್ಪಸ್ವಲ್ಪ ಕೇಳುತ್ತಿದ್ದೇನೆ. ಹಾಗೆ ರೂಪದೊಂದಿಗೆ ನಿರೂಪವನ್ನೂ ಸಹ ಸ್ವಲ್ಪ ಸ್ವಲ್ಪ ನೋಡುತ್ತಿದ್ದೇನೆ" ಎಂದರು.

ಸೃಷ್ಟಿಯನ್ನು ಬದಲಿ ಮಾಡುವುದಲ್ಲ, ದೃಷ್ಟಿಯನ್ನು ಬದಲಿ ಮಾಡುವುದೇ ಯೋಗ. ಇದನ್ನೇ ಮಹಾ ಶಿವಯೋಗಿ ಸಾಧಕರಾದಂತಹ ನಿಜಗುಣ ಶಿವಯೋಗಿಗಳು, "ಮಾತು ಮನಗಳಿಂದತ್ತತ್ತ ಮೀರಿದ ಸಾತಿಶಯದ ನಿರುಪಾಧಿಕ ನಿರ್ಮಲ ಜ್ಯೋತಿ ಬೆಳಗುತಿದೆ, ವಿಮಲ ಪರಂಜ್ಯೋತಿ ಬೆಳಗುತಿದೆ" ಎಂದು ಹೇಳಿರುವುದು.

ಚಾಮರಸನು ತನ್ನ ವಚನವೊಂದರಲ್ಲಿ ಶಿವಯೋಗದ ವೈಜ್ಞಾನಿಕತೆಯನ್ನು ಹೀಗೆ ವರ್ಣಿಸಿದ್ದಾನೆ.

ಆಲಿ ನಿಂದೊಡೆ ಸುಳಿದು ಸೂಸುವ ಗಾಳಿ ನಿಲುವುದು
ಗಾಳಿ ನಿಲೆ ಮನ ಮೇಲೆ ನಿಲುವುದು
ಮನವು ನಿಂದೊಡೆ ಬಿಂದು ನಿಂದುಹುದು
ಲೀಲೆಯಿಂದ ಬಿಂದು ನಿಂದೊಡೆ
ಕಾಲಕರ್ಮವ ಗೆದ್ದು ಮಾಯೆಯ
ಹೇಳ ಹೆಸರಿಲ್ಲೆನಿಸಬಹುದ್ಯೆ ಬಸವ ಕೇಳೆಂದಾ ॥

ಕಣ್ಣಿನ ರೆಪ್ಪೆ (ಆಲಿ)ಗಳೆರಡು ಬಡಿಯದಂತೆ ನಿಂತರೆ ಸುಳಿದು ಸೂಸುವ ಗಾಳಿ ನಿಲುವುದು (ಅಂದರೆ ಹಠಯೋಗದ ಕ್ರಿಯೆ ನಡೆಯುವುದು) ಗಾಳಿ ನಿಲೆ ಮನ ನಿಲುವುದು (ಅಂದರೆ ಅಮನಸ್ಕ ಯೋಗ ನಡೆಯುವುದು) ಮನನಿಂದೊಡೆ ಬಿಂದು ನಿಂದಿಹುದು. ಅಂದರೆ ಆತ್ಮದರ್ಶನವಾಗುವುದು. ಇದೇ ಮಾತನ್ನು ಪತಂಜಲಿ ಮಹರ್ಷಿಯು "ತದಾದ್ರಷ್ಟು: ಸ್ವರೂಪೇಽವಸ್ಥಾನಮ್" ಎಂದಿದ್ದಾನೆ. ಅಂದರೆ ಮನಸ್ಸಿನ ವೃತ್ತಿಯು ನಿಂತಿರುವ ಸಮಯದಲ್ಲಿ ಮಾತ್ರವೇ ಆತ್ಮನು ನೈಜಸ್ಥಿತಿಯಲ್ಲಿ ಇರುತ್ತಾನೆ ಎಂತೆಂಬುದಾಗಿದೆ. ಪತಂಜಲಿ ಮಹರ್ಷಿ ಸಂಪೂರ್ಣ ಶ್ಲೋಕ ಹೀಗಿದೆ :

ಅಥಾಯೋಗಾನು ಶಾಸನಮ್ ಯೋಗಶ್ಚಿತ್ತವೃತ್ತಿ ನಿರೋಧ: ।
ತದಾದ್ರಷ್ಟು: ಸ್ವರೂಪೇಽವಸ್ಥಾನಮ್ ವೃತ್ತಿ ಸಾರೂಪ್ಯ ಮಿತರತ್ರ ।

ಯೋಗವೆಂದರೆ ಚಿತ್‌ವೃತ್ತಿಯನ್ನು ನಿರೋಧಿಸುವುದು. ಇಂತಹ ಸಮಯದಲ್ಲಿ ಮಾತ್ರವೇ ಆತ್ಮನು ನೈಜಸ್ಥಿತಿಯಲ್ಲಿರುತ್ತಾನೆ. ಚಿತ್ತದ ವೃತ್ತಿಯು ನಿಯಂತ್ರಣದಲ್ಲಿರುವಾಗ ಆತ್ಮನು ಚಿತ್ರದ ವೃತ್ತಿಯಲ್ಲಿ ಒಂದಾಗಿರುತ್ತಾನೆ.

ವಿದ್ಯಾರ್ಥಿಗಳು ಪುಸ್ತಕಗಳನ್ನು ಓದುತ್ತಾರೆ. ಓದುವ ಸಂದರ್ಭದಲ್ಲಿ ಪುಸ್ತಕ ಒಂದು ಅಡಿ ದೂರದಲ್ಲಿಡುತ್ತಾರೆ. ಆಗವನು ಅದೆಷ್ಟು ಹೊತ್ತು ಪುಸ್ತಕ ಓದುತ್ತಾನೆ ಅದು ಮುಖ್ಯವಲ್ಲ. ಓದುವಾಗ ಆ ಪುಸ್ತಕದ ವಿಷಯದಲ್ಲಿ ಅವನು ಮನಸ್ಸನ್ನು ಎಷ್ಟು ಕೇಂದ್ರೀಕರಿಸುತ್ತಾನೋ ಅದು ಬಹಳ ಮುಖ್ಯ. ಈ ಆಧಾರದ ಮೇಲೆ ಅವನಲ್ಲಿ ಜ್ಞಾನ ವೃದ್ಧಿಸುವುದು. ಇದು ಆ ವಿದ್ಯಾರ್ಥಿಯ ಉತ್ತೀರ್ಣ, ಅನುತ್ತೀರ್ಣ ಹಾಗೂ ಪ್ರಥಮ, ದ್ವಿತೀಯ ದರ್ಜೆಗಳಿಗೆ ಕಾರಣವಾಗುವುದು.

ಕಣ್ಣುಗಳ ಮಧ್ಯದಲ್ಲಿರುವ ಕಪ್ಪು, ಅಕ್ಷರಗಳಲ್ಲಿನ ಕಪ್ಪು. ಈ ಕಪ್ಪು ಕಪ್ಪುಗಳೆರಡರ ಹೋರಾಟ ಹೇಗೆ ನಡೆಯುವುದೋ ಹಾಗೆ ಜೀವಾತ್ಮ ಮತ್ತು ಪರಮಾತ್ಮರಲ್ಲಿ ಒಂದಾಗುವ ಕ್ರಿಯೆ ನಡೆಯುತ್ತಿರಬೇಕು. ಇದು ಭಕ್ತಿ ಮತ್ತು ಶಕ್ತಿಗಳೆರೆಡರ ಹೋರಾಟ. ಇದೇ ದೃಷ್ಟಿಯೋಗ. ಶಾಂಭವಿ, ಮುದ್ರಾಯೋಗ, ಶಿವಯೋಗ.

ಇಲ್ಲಿ ಕೆಲವು ದೃಷ್ಟಾಂತ ಅನಿವಾರ್ಯ. (ಅಪಾರ್ಥ ಕಲ್ಪಿಸಿಕೊಳ್ಳುವುದು ಬೇಡ. ಎಲ್ಲರಿಗೂ ಬೇಗ ಅರ್ಥವಾಗಲೆಂಬ ಉದ್ದೇಶ ಮಾತ್ರ ನಮ್ಮದಾಗಿದೆ.) ಕೆಲವರಲ್ಲಿ ಇಸ್ಪೇಟ್ ಆಟವನ್ನು ಆಡುವ ಚಟವಿರುತ್ತದೆ. ಅವರಾದರೂ ಆ ಗರಿಗಳನ್ನು ತಮ್ಮೆದುರಿನಲ್ಲಿಟ್ಟುಕೊಂಡು ಆ ಗರಿಗಳ ಮೇಲೆ ತಮ್ಮ ಮನಸ್ಸನ್ನು ಕೇಂದ್ರೀಕರಿಸಿ (ಚಿತ್ತದ ವೃತ್ತಿಯನ್ನು ಅವುಗಳಲ್ಲಿರಿಸಿ)ರುತ್ತಾರೆ. ಇದು ಕೆಟ್ಟ ಅಭ್ಯಾಸವೇನೋ ಸರಿ. ಆದರೆ ಇದು ಸಹ ದೃಷ್ಟಿಯೋಗ, ಶಾಂಭವಿ ಮುದ್ರಾಯೋಗ ಎನಿಸುವುದು. ಹೀಗೆ ಕೆಲವರು ಪಟಗಳ ಚಾರ್ಟ್‌ಗಳ ಮೇಲೆ, ಇಸ್ಪೇಟ್ ಗರಿಗಳ ಮೇಲೆ ಮನಸ್ಸನ್ನು ಹೆಚ್ಚೆಚ್ಚು ಕೇಂದ್ರೀಕರಿಸುವುದರಿಂದ ಅವರ ಚಿತ್ತದ ಪರದೆಯ ಮೇಲೆ ಸದಾ ಅವೇ ಎದ್ದು ಕಾಣಿಸುವುವು. ಹೀಗೆ ಈ ದೃಷ್ಟಿಯೋಗದಿಂದ ಕೆಡುಕನ್ನಾದರೂ ಮಾಡಿಕೊಳ್ಳಬಹುದು, ಒಳಿತನ್ನಾದರೂ ಪಡೆದುಕೊಳ್ಳಬಹುದು.

ನಾರದರೊಮ್ಮೆ ಸನತ್ಕುಮಾರರ ಬಳಿಗೆ ಬಂದು, "ನಾನು ಅನೇಕ ವಿದ್ಯೆಗಳನ್ನೇನೋ ಕಲಿತೆನು. ಆದರೆ ಶಾಂತಿ, ಸಮಾಧಾನ, ಸಂತೃಪ್ತಿ ಸಿಗುತ್ತಿಲ್ಲ. ನನಗೆ ಸತ್ಯ ಸಾಕ್ಷಾತ್ಕಾರವಾಗುತ್ತಿಲ್ಲ. ಆದ್ದರಿಂದ ನಾನು ನಿಮ್ಮಲ್ಲಿಗೆ ಶಿಷ್ಯಭಾವದಿಂದ ಆಗಮಿಸಿದ್ದೇನೆ, ನನಗೆ ಸನ್ಮಾರ್ಗ ತೋರಿಸಿರಿ" ಎಂದು ಪ್ರಾರ್ಥಿಸಿಕೊಂಡರು.

ಸನತ್ಕುಮಾರರು ಆಗ ಸುತ್ತ ಹರಡಿರುವ ಬೆಟ್ಟಗಳನ್ನು ಹಾಗೂ ಆಕಾಶವನ್ನು ತೋರಿಸಿ, "ಇವುಗಳನ್ನು ನಿಶ್ಚಲವಾಗಿ ನೋಡುತ್ತಿರಿ, "ಧ್ಯಾಯತೀವ ಅಂತರಿಕ್ಷಂ ಧ್ಯಾಯತೀವದ್ಯೌ" ಎಂಬಂತೆ. ಪೃಥ್ವಿ ಅಂತರಿಕ್ಷ ಆಕಾಶ ಎಲ್ಲವೂ ಧ್ಯಾನಮಗ್ನವಾಗಿರುವಂತೆ ಕಾಣಿಸುವುದಿಲ್ಲವೇ? ಅವುಗಳಂತೆ ನೀವೂ ನಿಶ್ಚಿಂತ-ನಿರ್ಲಿಪ್ತ ನಿಮಗ್ನರಾಗಿರಿ. ಆಗ ಮಾತ್ರ ಸತ್ಯದ ಅನುಭವ ಮತ್ತು ಆನಂದ ದೊರೆಯಲು ಸಾಧ್ಯ. ಈ ಪರಮ ಸತ್ಯವನ್ನು ತೋರಲಾರದ ವಿದ್ಯೆಗಳಾವೂ

ವಿದ್ಯೆಗಳೇ ಅಲ್ಲ" ಹೀಗೆ ನಾರದರಿಗೆ ಯೋಗ ಮರ್ಮವನ್ನು ತಿಳಿಹೇಳಿ ಕಳುಹಿಸಿದರು.

ಶಿವಯೋಗದ ಮಹತ್ವವನ್ನು ಚೆನ್ನಬಸಣ್ಣ ಹೀಗೆ ಹೇಳುತ್ತಾನೆ.

**ಕಂಗಳನೋಟ ಹೃದಯದ ಜ್ಞಾನ**
**ಮನದೊಳಗೆ ಮಾತನಾಡುತಿರ್ದೆನಯ್ಯಾ**
**ಜೇನು ಮಳೆಗಳು ಕರೆದವು, ಅಮೃತ ಮಳೆಗಳು ಸುರಿದವು**
**ಕೂಡಲ ಚೆನ್ನಸಂಗಮನೆಂಬ ರಸಸಾಗರದೊಳಗೋಲಾಡುತಿರ್ದೆನಯ್ಯಾ ||**

ನಿಶ್ಚಲವಾದ ಕಣ್ಣುಗಳ ನೋಟ ಇಷ್ಟಲಿಂಗದ ನಿರೀಕ್ಷಣೆಯಲ್ಲಿತ್ತು. ಭಕ್ತಿಭರಿತವಾದ ಹೃದಯ ಪರಶಿವನ ಸಮರಸ ಜ್ಞಾನದಲ್ಲಿತ್ತು. ಉನ್ಮನದ ಸ್ಥಿತಿಯನ್ನು ಹೊಂದಿದ ಮನಸ್ಸು ಮಂತ್ರಾನುಸಂಧಾನದಲ್ಲಿ ಅವಿರಳವಾಗಿ ಮಗ್ನಗೊಂಡಿತ್ತು. ಇಂತಹ ಸಂದರ್ಭದಲ್ಲಿ ಚೆನ್ನಬಸಣ್ಣನವರು ಅಪಾರವಾದ ಆನಂದವನ್ನು ಅನುಭವಿಸಿದರು. ಹೀಗೆ ಬಾಹ್ಯವನ್ನು ಸಂಪೂರ್ಣವಾಗಿ ಮರೆಯಬೇಕು. ನಮ್ಮ ಹೃದಯವನ್ನರಳಿಸಿಕೊಂಡು ಅಖಂಡಜ್ಞಾನದ ತೇಜೋರಾಶಿಯಾಗಿರುವ ನಮ್ಮ ಇಷ್ಟಲಿಂಗದ ಅನುಸಂಧಾನದಲ್ಲಿ ಅನನ್ಯವಾಗಿ ಬೆರೆಯಬೇಕು. ಇದು ಶಿವಯೋಗ ಸಾಧನೆಯ ರಹಸ್ಯವಾಗಿದೆ. ಇದನ್ನೇ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಹೇಳಲಾಗಿದೆ.

**ಲಿಂಗೇಯಸ್ಯ ಮನೋ ಲೀನಂ ಲಿಂಗಸ್ತುತಿ ಪರಾ ಚ ವಾಕ್ ।**
**ಲಿಂಗಾರ್ಚನ ಪರೌ ಹಸ್ತೌ ಸ ರುದ್ರೋ ನಾತ್ರ ಸಂಶಯ: ॥ (ಸಿ.ಶಿ.)**

ಯಾವನ ಮನಸ್ಸು ಶಿವ(ಇಷ್ಟ)ಲಿಂಗದಲ್ಲಿ ಲೀನವಾಗಿರುವುದೋ, ಯಾವನ ವಾಣಿಯು ಶಿವಲಿಂಗ ಸ್ತುತಿಯಲ್ಲಿ ನಿರತವಾಗಿರುವುದೋ, ಯಾವನ ಹಸ್ತಗಳು ಶಿವಲಿಂಗ ಪೂಜೆಯಲ್ಲಿ ಆಸಕ್ತಗಳಾಗಿರುವವೋ ಅವನೇ ರುದ್ರನು. ಈ ವಿಷಯದಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಯೋಗ ಸಾಧನೆಯಲ್ಲಿ ಪ್ರಾಣ ಸಾಧನೆಗೆ ಅಗ್ರಸ್ತಾನವಿದೆ ಎಂದು ತಿಳಿಸಿದೆಯಷ್ಟೆ. ಶಿವಯೋಗ ಸಾಧನೆಯಲ್ಲಿಯೂ ಸಹ ಪ್ರಾಣಶುದ್ಧಿಗೆ ಒಂದು ವಿಶಿಷ್ಟವಾದ ಸ್ಥಾನವನ್ನು ಸಹ ನೀಡಲಾಗಿದೆ. "ಅಂಗದ ಮೇಲಣ ಲಿಂಗ ಎಲ್ಲಿಯಾದರೂವುಂಟು; ಪ್ರಾಣದ ಮೇಲಣ ಲಿಂಗವಪೂರ್ವವಯ್ಯಾ" ಎಂದು ಚನ್ನಬಸವಣ್ಣ ಹೇಳಿದ್ದಾನೆ. ಪಂಚಭೂತದ ಕಾಯವ ಕಳೆದು ಪ್ರಸಾದ ಕಾಯವ ಮಾಡಿಕೊಳ್ಳುವುದೇ ಇಷ್ಟಲಿಂಗಾನುಸಂಧಾನದ ಉದ್ದೇಶವು.

ಸ್ಥೂಲದಿಂದ ಸೂಕ್ಷ್ಮಕ್ಕೆ, ಸೂಕ್ಷ್ಮದಿಂದ ಅತಿಸೂಕ್ಷ್ಮದಲ್ಲಿ ನೆಲೆಗೊಳ್ಳುವಂತಾಗಬೇಕು. ಅಂದರೆ ಕರಸ್ಥಲದಲ್ಲಿನ ಇಷ್ಟಲಿಂಗ ದೃಷ್ಟಿಯೋಗದ ಮೂಲಕ ಉರಸ್ಥಾನದಲ್ಲಿ ಪ್ರಾಣ (ಜ್ಯೋತಿರ್) ಲಿಂಗದ ದರ್ಶನವಾಗಿ, ಮತ್ತೆ ಮುಂದೆ ಶಿರಸ್ಥಾನದಲ್ಲಿ ಭಾವ(ಚಿದ್ಘಮಲ)ಲಿಂಗವಾಗಿ ತೋರಬೇಕು. ಇದು ಶಿವಯೋಗದ ಪ್ರತಿಫಲವು. ಕೊನೆಯಲ್ಲಿ ಬಸವಣ್ಣನ ವಚನವೊಂದನ್ನು ನೋಡೋಣ.

ಕಂಗಳು ತುಂಬಿದ ಬಳಿಕ ನೋಡಲಿಲ್ಲ
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ
ಮನವು ತುಂಬಿದ ಬಳಿಕ ಪೂಜಿಸಲಿಲ್ಲ
ಮಹಂತ ಕೂಡಲ ಸಂಗಮದೇವನ

ಈ ಜಗತ್ತಿನ ವಿಷಯಾದಿಗಳು ಚಿತ್ತದ ಪರದೆಯ ಮೇಲೆ ಹರಿದಾಡದಂತಾದಾಗ ಮಾತ್ರ ಸತ್ಯ (ಲಿಂಗ)ದ ದರ್ಶನವಾಗುವುದು. "ಸರ್ವಂ ಶಿವಮಯಂ ಜಗತ್" ಎಂಬಂತೆ ಇಂತಹ ಸ್ಥಿತಿ ತಲುಪುವಂತಾಗುವುದುದೇ ಶಿವಯೋಗದ ಉದ್ದೇಶವು. ಇಂತಹ ಸಾಧಕರೇ ಶಿವಯೋಗಿಗಳು.

# ಜೀವನ್ಮುಕ್ತಿ ಸ್ಥಿತರ ಲಕ್ಷಣ

ವೀರಶೈವ ಧರ್ಮದಲ್ಲಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಆರು ಮೆಟ್ಟಿಲುಗಳ (ಷಟ್‌ಸ್ಥಲ) ಸಿದ್ಧಾಂತವನ್ನು ಪ್ರತಿಪಾದಿಸಿದೆ. ಮೊದಲಿನ ಭಕ್ತ ಮತ್ತು ಮಹೇಶ ಸ್ಥಲಗಳು ದ್ವೈತ ಸ್ಥಿತಿಗೆ ಸಂಬಂಧಿಸಿದವು ಹೌದು. ಯಾಕೆಂದರೆ ಯಾರೊಬ್ಬರು ಹುಟ್ಟಿದ ಬಹುದಿನಗಳ ಪರ್ಯಂತರ "ನಾನೇ ಬೇರೆ, ಪರಮಾತ್ಮನೇ ಬೇರೆ' ಎಂಬ ಸ್ಥಿತಿಯನ್ನು ಹೊಂದಿರುತ್ತಾರೆ. 'ಶಿವೋಽಹಂ' 'ಅಹಂ ಬ್ರಹ್ಮಾಸ್ಮಿ', 'ತತ್ವಮಸಿ' ಎಂಬ ಸ್ಥಿತಿ ಯಾರೊಬ್ಬರಿಗೂ ಸೀದಾಸೀದ ಬರಲು ಸಾಧ್ಯವಿಲ್ಲ. ಅದಕ್ಕೆ ಬಹಳ ಪರಿಶ್ರಮವೂ ಬೇಕು.

ಮುಂದೆ ಸದ್ಗುರುವು ದೀಕ್ಷೆಯನ್ನು ಅನುಗ್ರಹಿಸುತ್ತಾನೆ. ಆಗ ಇಷ್ಟಲಿಂಗವೊಂದನ್ನು ಕೊಟ್ಟು 'ಶಿವೋಽಹಂ' ಎಂಬ ಅದ್ವೈತ ಬೋಧನೆ ಕೊಡುತ್ತಾನೆ. ಆದರೆ ಸಾಧಕನಾದವನು ಆ ಕ್ಷಣದಿಂದಲೇ ಅದ್ವೈತ ಸ್ಥಿತಿಯನ್ನು ತಲುಪಲು ಸಾಧ್ಯವಿಲ್ಲ. ಸಾಧನೆಯ ಕೆಲ ಸಂದರ್ಭದಲ್ಲಿ ಅದ್ವೈತ ಭಾವವು ಬಂದಂತಾಗುವುದು. ಮತ್ತೆ ಕೆಲವೊಮ್ಮೆ ದ್ವೈತನೆಂಬ ಭಾವವೂ ಬರುತ್ತಿರುವುದು. ನಿಶ್ಚಲವಾದ ಸ್ಥಿರತೆ ಅಷ್ಟು ಸುಲಭವಾಗಿ ಬಂದುಬಿಡಲು ಸಾಧ್ಯವಿಲ್ಲ. ಆದ್ದರಿಂದ ಈ ಪ್ರಸಾದಿ ಮತ್ತು ಪ್ರಾಣಲಿಂಗಿಗಳೆಂಬ ಸ್ಥಲಗಳು ಇಂತಹ ಸ್ಥಿತಿಯನ್ನು ತಲುಪಿರುವವರ ಕುರುಹುಗಳಾಗಿವೆ. ಅಂದರೆ! ಒಮ್ಮೆ ದ್ವೈತಭಾವ ತಾಳುವನು. ಮತ್ತೊಮ್ಮೆ ಅದ್ವೈತಭಾವ ತಾಳುವನು. ಒಟ್ಟಾರೆ ಈ ಸಂದರ್ಭದಲ್ಲಿ ದ್ವಂದ್ವ ನಿಲುವಿರುತ್ತದೆ.

ಸಾಧನೆಯ ಮಾರ್ಗದಲ್ಲಿ ಹೆಚ್ಚೆಚ್ಚು ನಡೆದಂತೆಲ್ಲಾ ಮುಂದೆ ಶರಣ ಮತ್ತು ಐಕ್ಯವೆಂಬ ಸ್ಥಿತಿಗೆ ಬರುವನು. ಇಂತಹ ಸ್ಥಿತಿಯಲ್ಲಿ ಇರುವವರನ್ನು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ 'ಸ್ಥಿತಪ್ರಜ್ಞರು' ಎಂದು ಕರೆದಿರುವನು.

ನಾವ ಜೀವನ್ಮುಕ್ತಿಯ ಲಕ್ಷಣವನ್ನರಿಯಬೇಕಾದರೆ ಮೊದಲು ಜಾಗ್ರತ್ ಸ್ವಪ್ನ, ಸುಷುಪ್ತಿ ಮತ್ತು ತುರೀಯಗಳೆಂಬ ಪರಶಿವಬ್ರಹ್ಮನಿಗೆ (ಆತ್ಮನಿಗೆ) ಇರುವ ನಾಲ್ಕು ಪಾದ (ಅವಸ್ಥೆ)ಗಳ ವಿಷಯವನ್ನರಿಯಬೇಕು.

ಜಾಗ್ರತ್ : ಜೀವಾತ್ಮನು ಬಾಹ್ಯ ಪ್ರಜ್ಞೆಯುಳ್ಳವನಾಗಿರುವುದು, ಅಂದರೆ ಬಾಹ್ಯ ಪ್ರಪಂಚದಿಂದ ಸಿಗಬಹುದಾದ ಸುಖದು:ಖಗಳನ್ನು ಇಂದ್ರಿಯ, ಮನ ಬುದ್ಧಿಗಳ ಮೂಲಕ ಅನುಭವಿಸುವನು. ಹಾಗೆ ಹೊರ ಪ್ರಪಂಚದಿಂದ ಬರುವ ಸುದ್ದಿ ಸಮಾಚಾರಗಳ ಕಡೆಗೂ ಗಮನ ಕೊಟ್ಟಿರುವನು. ಈ ಜಾಗ್ರತ್ ಅವಸ್ಥೆಯಲ್ಲಿ ವ್ಯವಹಾರಗಳಿಂದಲೇ ಬದುಕು ನಡೆಸುವನು, ಬದುಕಿರುತ್ತಾನೆಯೂ ಸಹ. ಒಟ್ಟಾರೆ ಈ ಭೌತಿಕ ಪ್ರಪಂಚದಿಂದ ವಿಷಯ ವಸ್ತುಗಳನ್ನು ಪಡೆದು ಸುಖ ದುಃಖಗಳನ್ನು ಅನುಭವಿಸುವನು. ಆದರೆ ಪರಮಾನಂದವಂತೂ ಸಿಕ್ಕಿರುವುದಿಲ್ಲ.

ಸ್ವಪ್ನಾವಸ್ಥೆ : ಈ ಅವಸ್ಥೆಯಲ್ಲಿ ಜೀವಾತ್ಮನು ಭೌತಿಕ ಪ್ರಪಂಚದಿಂದ ಯಾವೊಂದು ವಸ್ತು ವ್ಯಕ್ತಿಗಳನ್ನು ಪಡೆದಿರುವುದಿಲ್ಲ. ಅವೆಲ್ಲವುಗಳನ್ನೂ ತನ್ನ ಮನಸ್ಸಿನಲ್ಲಿಯೇ ಸೃಷ್ಟಿಸಿಕೊಂಡಿರುತ್ತಾನೆ.

ಅಷ್ಟೆ ಅಲ್ಲ ಅನುಭವಿಸುತ್ತಿರುತ್ತಾನೆ, ಆದರೆ ಈ ಅವಸ್ಥೆಯಲ್ಲಿ ಶಾರೀರಿಕವಾಗಿ ಯಾವೊಂದು ವಿಷಯವಸ್ತುಗಳ ಸಂಬಂಧವನ್ನು ಪಡೆಯದಿದ್ದರೂ ಸಹ ಜಾಗ್ರತಾವಸ್ಥೆಯಲ್ಲಿ ಅವನನ್ನು ಕಾಡಿಸಿದಷ್ಟೇ. ಆಗಲೂ ಅವುಗಳು ಅವನನ್ನು ಕಾಡಿಸುವುವು. ಅರ್ಥವಿಷ್ಟೇ ಜಾಗ್ರತಾವಸ್ಥೆಯ ಸಂಸ್ಕಾರಗಳು ಸುಪ್ತಭಾವನೆಯಲ್ಲಿ ಉಳಿದುಕೊಂಡಿರುತ್ತವೆ. ಅವು ಈ ಜನ್ಮದವುಗಳಾದರೂ ಆಗಿರಬಹುದು, ಹಿಂದಿನ ಜನ್ಮದಲ್ಲಿ ಅನುಭವಿಸಿದ ಅಥವಾ ಮುಂದೆ ಅನುಭವಿಸ ಬಹುದಾದಂಥವುಗಳಾದರೂ ಇರಬಹುದು. ಅವು ಅವರ ಸುಪ್ತಭಾವನೆಯಲ್ಲಿ ಅಡಗಿರುತ್ತವೆ.

ಜೀವಾತ್ಮನು ತಾನು ಏನೂ ಮಾಡಿಲ್ಲವೆಂದು ಜಾಗ್ರತಾವಸ್ಥೆಯಲ್ಲಿ ಅಂದುಕೊಂಡಿದ್ದರೂ ಸಹ ಸ್ವಪ್ನದಲ್ಲಿ ಭೋಗಿಸಿರುತ್ತಾನೆ, ದು:ಖಿಸಿರುತ್ತಾನೆ, ಒಟ್ಟಾರೆ ಆ ಸುಖ ದು:ಖಗಳನ್ನು ಅನುಭವಿಸಿರುತ್ತಾನೆ.

ಉದಾಹರಣೆಗೆ ಒಂದೇ ಹಾಸಿಗೆಯ ಮೇಲೆ ಇಬ್ಬರು ಮಲಗಿರುತ್ತಾರೆ. ಆದರೆ ಅವರಿಬ್ಬರೂ ಅವರವರ ಕಲ್ಪನಾಲೋಕದಂತೆ ಕನಸು ಕಾಣುತ್ತಿರುತ್ತಾರೆ. ಇಂದ್ರಿಯ ಮನಸ್ಸು ಬುದ್ಧಿಗಳೇನೋ ಎಲ್ಲೆಲ್ಲೋ ಹೇಗ್ಹೇಗೋ ವ್ಯವಹರಿಸುತ್ತಿರುತ್ತವೆ. ಆದರೆ ಶರೀರವೂ ಮಾತ್ರ ಅಲ್ಲೇ ಬಿದ್ದಿರುತ್ತದೆ. ಹಾಸಿಗೆ ಇಬ್ಬರದೂ ಒಂದೇ, ಕನಸು ಬೇರೆ ಬೇರೆ, ಅನುಭವಗಳು ಬೇರೆ ಬೇರೆ. ಅವರಲ್ಲೊಬ್ಬರು ಸುಖಪಡುತ್ತಿದ್ದರೆ, ಮತ್ತೊಬ್ಬರು ದು:ಖಿಸುತ್ತಿರುತ್ತಾರೆ.

**ಸುಷುಪ್ತಾವಸ್ಥೆ :** ಇಲ್ಲಿ ಭಾವನೆಗಳಿರುವುದಿಲ್ಲ. ವಸ್ತು ವ್ಯಕ್ತಿಗಳಾವೂ ಇರುವುದಿಲ್ಲ. ಯಾವೊಂದು ಅನುಭವವೂ ಆಗುತ್ತಿರುವುದಿಲ್ಲ, ಏಕೀಭೂತನು. ಈ ಸಂದರ್ಭದಲ್ಲಿ ಜೀವಾತ್ಮನು ಜಾಗ್ರತ್ ಮತ್ತು ಸ್ವಪ್ನಾವಸ್ಥೆಗಳನ್ನು ಮೀರಿ ಹೋಗಿರುತ್ತಾನೆ. ಇಂದ್ರಿಯ ಮನಸ್ಸು ಬುದ್ಧಿಗಳಾವುವು ಇರುವುದಿಲ್ಲ. ಅಲ್ಲಿರುವುದೊಬ್ಬನೇ! ಯಾವ ಉಪಾಧಿ (ಲಕ್ಷಣ ಅಥವಾ ಗುರುತು) ಗಳನ್ನು ಜಾಗ್ರತ್ ಮತ್ತು ಸ್ವಪ್ನಾವಸ್ಥೆಯಲ್ಲಿ ಧರಿಸಿದ್ದನೋ ಆಗ ಅವೆಲ್ಲವುಗಳನ್ನೂ ಕಳಚಿಕೊಂಡಿರುತ್ತಾನೆ.

**ತುರೀಯ (ಪ್ರಜ್ಞಾನಘನ) ಅವಸ್ಥೆ :** ಈ ಅವಸ್ಥೆ ಜಾಗ್ರತ್, ಸ್ವಪ್ನಾ ಮತ್ತು ನಿದ್ರಾವಸ್ಥೆಗಳನ್ನು ಮೀರಿನಿಂತಹ ಅವಸ್ಥೆಯು. ಇದೊಂದು ರೀತಿ ಎಚ್ಚರದ ನಿದ್ರೆಯು. ಯಾವೊಬ್ಬ ವ್ಯಕ್ತಿ ಸುಷುಪ್ತಾ (ನಿದ್ರಾ)ವಸ್ಥೆಯಿಂದ ಕಳಚಿ ಮತ್ತೆ ಜಾಗ್ರತಾವಸ್ಥೆಗೆ ಬಂದಾಗ ಪುನ: ಆ ಜೀವಾತ್ಮನಿಗೆ ಲೌಕಿಕದ ಸುಖ–ದು:ಖಗಳು, ರಾಗದ್ವೇಷಗಳು ಕಾಡುವುವು. ಆದರೆ ತುರಿಯಾವಸ್ಥೆಯನ್ನು ತಲುಪಿ ಬಂದಂತಹ ಮಹಾಮಹಿಮನಿಗೆ (ಶರಣಸಂತರಿಗೆ) ಅವ್ಯಾವೂ ಮತ್ತೆ ಬಾಧಿಸುವುದಿಲ್ಲ. ಪರಮಾನಂದ ಪುರುಷರವರಾಗಿರುತ್ತಾರೆ. ಇಂಥವರ ಬಗ್ಗೆ ಬಸವಣ್ಣ ಹೇಳುತ್ತಾನೆ. **"ಶರಣ ನಿದ್ರೆಗೈದರೆ ಜಪವೋ, ಶರಣನೆದ್ದಿರ್ದಡೆ ಶಿವರಾತ್ರಿ ಕಣೆಭೋ! ಶರಣ ನಡೆದುದೆ ಪಾವನಭೋ, ನುಡಿದುದೇ ಶಿವತತ್ವಭೋ ಕೂಡಲ ಸಂಗಮದೇವ ಶರಣನ ಕಾಯವೇ ಕೈಲಾಸ ಕಾಣೆಭೋ"** ಇದು ಶರಣರ ಸ್ಥಿತಿ.

ನಿದ್ರಾವಸ್ಥೆಗೂ ತುರೀಯಾವಸ್ಥೆಗೂ ಇರುವ ಭೇದವಿಷ್ಟೇ. ನಿದ್ರಾವಸ್ಥೆಗೆ ಹೋಗಿ ಪುನ: ಜಾಗ್ರತಾವಸ್ಥೆಗೆ ಬಂದಂತಹ ಜೀವಾತ್ಮನಿಗೆ ಜನ್ಮಜನ್ಮಾಂತರಗಳ ಸಂಸ್ಕಾರದ ಬೀಜವು ಸುಟ್ಟು

ಹೋಗಿರುವುದಿಲ್ಲ. ಹಾಗೇ ಉಳಿದಿರುತ್ತವೆ. ಆದ್ದರಿಂದ ಅವರಿಗೆ ಸುಖದು:ಖಗಳು ಹಾಗೂ ರಾಗದ್ವೇಷಗಳು ಮತ್ತೆ ಮತ್ತೆ ಕಾಡುವುವು.

ಒಮ್ಮೆ ತುರೀಯ ಅವಸ್ಥೆಗೆ ಹೋಗಿ ಬಂದಿರುವಂತಹ ಯೋಗಿಗೆ ಸಂಸ್ಕಾರದ ಬೀಜವು ಉಳಿದಿರುವುದಿಲ್ಲ. ಸುಟ್ಟು ಹೋಗಿರುತ್ತದೆ. ಆದ್ದರಿಂದ ಆತನಿಗೆ ಸುಖದು:ಖಗಳು ಅಂಟಿಕೊಂಡಿರುವುದಿಲ್ಲ. ಇದನ್ನೇ ರಾಮಕೃಷ್ಣ ಪರಮಹಂಸರು "ಪ್ರಪಂಚದಲ್ಲಿ ಚಿತ್ರೀಕರಿಸುವ ಕ್ಯಾಮರಾ ಆಗಿರಬೇಡ, ಕನ್ನಡಿ ಆಗಿರು" ಎಂದು ಹೇಳಿರುವರು. ಕ್ಯಾಮರಾ ಎಲ್ಲವನ್ನು ಸೆರೆ ಹಿಡಿಯುತ್ತದೆ. ಆದರೆ ಕನ್ನಡಿ ಮಾತ್ರ ಎಲ್ಲವನ್ನು ನೋಡುತ್ತದೆ. ಯಾವುದನ್ನೂ ಹಿಡಿದುಕೊಳ್ಳುವುದಿಲ್ಲ. ಹೀಗೆ ಜೀವಾತ್ಮರಿಗೂ ಶರಣರಿಗೂ ಇರುವ ವ್ಯತ್ಯಾಸ.

ಒಮ್ಮೆ ಶಶಿಧರ ತರ್ಕಚೂಡಾಮಣಿ ಎಂಬ ಪಂಡಿತೋತ್ತಮ ಶ್ರೀ ರಾಮಕೃಷ್ಣ ಪರಮಹಂಸರನ್ನು ನೋಡಲೆಂದು ಬಂದಿದ್ದ. ಆತ ಅವರನ್ನು ಕುರಿತು, "ಮಹಾತ್ಮರೇ ತಮ್ಮಂತಹ ಯೋಗಿಗಳು ಇಚ್ಛಾಮಾತ್ರದಿಂದ ರೋಗ ನಿವಾರಣೆ ಮಾಡಿಕೊಳ್ಳಲು ಸಮರ್ಥರೆಂದು ಶಾಸ್ತ್ರಗಳು ಹೇಳುತ್ತಿವೆ. ಹಾಗೆ ನೀವೇಕೆ ನಿಮ್ಮ ರೋಗವನ್ನು ನಿವಾರಣೆ ಮಾಡಿಕೊಳ್ಳಬಾರದು?" ಎಂದು ಕೇಳಿದ.

"ನೀನು ಪಂಡಿತನಾಗಿದ್ದರೂ ಇಂತಹ ಮಾತು ಆಡುತ್ತಿರುವೆಯಲ್ಲಾ? ಈ ಮನಸ್ಸು ಸಂಪೂರ್ಣ ಈಶ್ವರಾರ್ಪಿತವಾಗಿದೆ. ಹೀಗಿದ್ದೂ ಅದನ್ನು ಪುನ: ಹಿಂದಕ್ಕೆ ಕರೆದುಕೊಳ್ಳಲೇ?" ಎಂದು ಕೇಳಿದರು. ಪಂಡಿತನೇನೋ ಸುಮ್ಮನಾಗಿಬಿಟ್ಟ. ಆದರೆ ನರೇಂದ್ರ ಮತ್ತು ಇನ್ನುಳಿದ ಭಕ್ತರು ಸುಮ್ಮನಾಗಲಿಲ್ಲ.

ನರೇಂದ್ರನು "ನಮಗಾಗಿಯಾದರೂ ರೋಗವನ್ನು ಗುಣಪಡಿಸಿಕೊಳ್ಳಿರಿ" ಎಂದನು.

ಪರಮಹಂಸರು, "ನಾನೇನೋ ರೋಗವನ್ನು ಬೇಕೆಂದು ಬರಮಾಡಿಕೊಂಡಿದ್ದೇನೆಯೇ? ವಾಸಿಯಾಗಲಿ ಎಂಬುದೂ ಸಹ ನನ್ನ ಆಸೆ. ಆದರೆ ಎಲ್ಲವೂ ಆ ಜಗನ್ಮಾತೆಯ ಕೈಯಲ್ಲಿದೆ" ಎಂದರು.

ನರೇಂದ್ರ "ಹಾಗಾದರೆ ಆಕೆಯನ್ನೇ ಪ್ರಾರ್ಥಿಸಿರಿ" ಎಂದು ಹೇಳಿದ.

ಪರಮಹಂಸರು "ನೀನೇನೋ ಸುಲಭವಾಗಿ ಹೇಳಿಬಿಡುತ್ತೀಯಾ. ಆದರೆ ಈ ನನ್ನ ಬಾಯಿಯಿಂದ ಅಂಥಹ ಪ್ರಾರ್ಥನೆ ಹೊರಡಬೇಕಲ್ಲಾ?" ಎಂದರು.

ನರೇಂದ್ರ "ಇಲ್ಲಾ ಅದೆಲ್ಲ ಆಗದು, ನೀವು ಪ್ರಾರ್ಥಿಸಲೇಬೇಕು" ಎಂದನು.

ಪರಮಹಂಸರು "ಆಗಲಿ ಪ್ರಯತ್ನಿಸುತ್ತೇನೆ" ಎಂದರು.

ಸ್ವಲ್ಪ ಹೊತ್ತಾದ ನಂತರ ನರೇಂದ್ರನು ಪ್ರಾರ್ಥನೆ ಏನಾಯಿತು ಎಂದು ಕೇಳಿದ್ದ. ಅದಕ್ಕೆ ಅವರು "ಊಟ ಮಾಡುವುದಕ್ಕೆ ಆಗುವುದಿಲ್ಲ. ಏನಾದರೂ ಹೊಟ್ಟೆಗೆ ಹೋಗುವಂತೆ ಮಾಡು" ಎಂದು ತಾಯಿಯನ್ನು ಕೇಳಿದೆ. ಆಕೆ ನಿಮ್ಮನ್ನೆಲ್ಲಾ ತೋರಿಸಿ "ಏಕೆ ಈ

ಬಾಯಿಗಳಿಂದಲೂ ನೀನು ಊಟ ಮಾಡುತ್ತಿದ್ದೀಯಲ್ಲಾ'' ಎಂದಳು. ''ನನಗೆ ಅವಮಾನವಾದಂತಾಯಿತು'' ಎಂದಿದ್ದರು. ವಸುದೈವ ಕುಟುಂಬಕಂ'' ಎಂದಿರುವಂತೆ ಅವರು ವಿಶ್ವಕುಟುಂಬಿಗಳು.

ಉಪನಿಷತ್ತಿನಲ್ಲಿ ಬರುವಂತಹ ಒಂದು ಕಥೆಯಿದು. ಗರ್ಗಗೋತ್ರದವನಾದ ಬಾಲಾಕ ಎನ್ನುವವನು ವೇದ ಉಪನಿಷತ್ತುಗಳಲ್ಲಿ ತಂದೆಯನ್ನೇ ಮೀರಿಸಿದ್ದ. ಆದ್ದರಿಂದ ಈತ ಮಹಾ ದುರಂಹಂಕಾರಿಯೇ ಆಗಿದ್ದ. ಈತನೊಮ್ಮೆ ಅಜಾತಶತ್ರು ಮಹಾಜ್ಞಾನಿಯಾದಂತಹ ರಾಜನ ಬಳಿಗೆ ಬಂದು ''ನಾನು ನಿನಗೆ ಬ್ರಹ್ಮೋಪದೇಶ ಮಾಡಲು ಬಂದಿದ್ದೇನೆ'' ಎಂದು ಹೇಳಿದ. ಅಜಾತಶತೃ ಸದ್ವಿನಯದಿಂದ ಎರಡೂ ಕೈಗಳನ್ನು ಜೋಡಿಸಿ ಒಪ್ಪಿಕೊಂಡ. ಬಾಲಾಕನು ಬ್ರಹ್ಮತತ್ವವು ಅಲ್ಲಿದೆ ಇಲ್ಲಿದೆ, ಸೂರ್ಯಚಂದ್ರ, ಆಕಾಶ, ಜಲ, ಅನಿಲ ಇತ್ಯಾದಿ ಎಲ್ಲಾ ಕಡೆಯಲ್ಲೂ ಇದೆ. ಅದೆ ಪರಮಾತ್ಮ! (ಆತ್ಮ). ಅದನ್ನು ನಾನು ಆರಾಧಿಸುತ್ತೇನೆ ಎಂದು ಹೇಳಿದ.

ಅಜಾತಶತೃ ಹೀಗೆ ಹೇಳುವುದನ್ನೆಲ್ಲ ಶಿಷ್ಯಭಾವದಿಂದ ಕೇಳಿದ ನಂತರ ಅಜಾತಶತೃವು ಬಾಲಾಕನನ್ನು ಒಂದು ಜಾಗಕ್ಕೆ ಕರೆದುಕೊಂಡು ಹೋದ. ಅಲ್ಲೊಬ್ಬ ವ್ಯಕ್ತಿ ಮಲಗಿದ್ದ. ಮಲಗಿರುವ ಆ ವ್ಯಕ್ತಿಯನ್ನು ಅಜಾತಶತೃವು ಹೀಗೆ ಎಬ್ಬಿಸಿದ. ''ಹೇ ಬ್ರಹ್ಮನ್, ಹೇ ಸೋಮರಾಜ, ಹೇ ಪಾಂಡರಸಾ ಏಳು, ಎದ್ದೇಳು'' ಎಂದು ಎಚ್ಚರಗೊಳಿಸಿದ. ಆ ವ್ಯಕ್ತಿ ಎದ್ದು ಕುಳಿತ. ನಂತರ ಅಜಾತಶತೃ ಬಾಲಾಕನನ್ನು ''ಇವನು ಇಲ್ಲಿಯವರೆವಿಗೂ ಪ್ರಜ್ಞೆ ಇಲ್ಲದೆ ಮಲಗಿದ್ದ. ಆಗ ಈತನಲ್ಲಿದ್ದ ವಿಜ್ಞಾನಮಯ ಪುರುಷನಾದ ಆತ್ಮನು ಏನಾಗಿದ್ದ? ಏನು ಮಾಡುತ್ತಿದ್ದ? ಈಗೇನಾಗಿದ್ದಾನೆ?'' ಎಂದು ಪ್ರಶ್ನಿಸಿದ!

ಅಷ್ಟು ಜಂಬ ಕೊಚ್ಚಿಕೊಂಡಿದ್ದ ಬಾಲಾಕನಿಗೆ ಈ ರಹಸ್ಯ ತಿಳಿದಿರಲಿಲ್ಲ. ಕೂಡಲೇ ಅವನಲ್ಲಿದ್ದ ಅಹಂಕಾರ ಹುಟ್ಟಡಗಿ ಹೋಯಿತು. ಆಗ ಅಜಾತಶತೃವಿನಲ್ಲಿ ಕ್ಷಮೆ ಕೇಳಿಕೊಂಡು ಅದರ ಉತ್ತರ ತಿಳಿಯಲು ಆತುರನಾದ.

ಅಜಾತಶತೃ ''ಪ್ರತಿಯೊಬ್ಬರಲ್ಲೂ ಈ ಆತ್ಮ ತತ್ವವು ಹೃದಯದಲ್ಲಿ ನೆಲೆಗೊಂಡಿರುತ್ತದೆ. ಪ್ರಾಣಚೇತನವೆಂಬುದು ಆತ್ಮಚೇತನದಲ್ಲಿನ ಒಂದು ವಿಶಿಷ್ಟಚೇತನವು. ಆದ್ದರಿಂದ ಯಾವೊಬ್ಬ ವ್ಯಕ್ತಿಯು ಸುಷುಪ್ತಾವಸ್ಥೆಗೆ ಹೋದಾಗ, ಆ ಪ್ರಾಣಚೇತನವೆಂಬುದು ಆತ್ಮಚೇತನದಲ್ಲಿ ಲೀನವಾಗಿ ಹೋಗುವುದು. ಈ ಕಾರಣ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇವುಗಳು ಪ್ರಾಣ ಸಂಬಂಧಿತವಾದ್ದರಿಂದ ಇವುಗಳೂ ಸಹ ಪ್ರಾಣನೊಂದಿಗೆ ಆತ್ಮನಲ್ಲಿ ಲೀನವಾಗಿರುತ್ತವೆ. ಸುಷುಪ್ತಾವಸ್ಥೆ ಎಂಬುದು ಅತೀಭಾವದ ಅವಸ್ಥೆಯು. ಯಾವಾಗ ವ್ಯಕ್ತಿ ಎಚ್ಚರಗೊಳ್ಳುವನೋ ಆಗ ಮತ್ತೆ ಅವೆಲ್ಲ ಆತ್ಮತತ್ವದಿಂದ ವಿಲೀನ ಹೊಂದುವುವು. ಪುನ: ಕಾರ್ಯನಿರತವಾಗುವುವು. ಇದೇ ಆ ಪರಮಪುರುಷನೆನಿಸಿಕೊಂಡಿರುವ ಆತ್ಮತತ್ವದ ಸ್ಥಿತಿಯು. ಇಂತಹ ಪರಮಜ್ಞಾನವನ್ನು ದೇವೇಂದ್ರನೂ ಸಹ ಪಡೆಯದ ಕಾರಣ ಅವನು ಅಹಂಕಾರಿಯಾಗಿರುವುದು. ಆ ಅಹಂಕಾರತ್ವದಿಂದಲೇ ಪುನ:ಪುನ: ದಾನವರೊಂದಿಗೆ ಪರಾಜಿತನಾಗುತ್ತಿರುವುದು'' ಎಂದು ಉಪದೇಶಿಸಿದ.

ಇಂತಹ ಸುಷುಪ್ತಾವಸ್ಥೆಯನ್ನು ಮೀರಿದ್ದು ತುರೀಯವಸ್ಥೆ. ಇದನ್ನೇ ಐಕ್ಯಸ್ಥಿತಿ ಅಥವಾ ಜೀವನ್ಮುಕ್ತಿ ಸ್ಥಿತಿ ಎಂತೆನ್ನುವುದು. ಇಂತಹ ಸ್ಥಿತಿ ಸರ್ವರಿಗೂ ಸಾಧ್ಯವಿಲ್ಲದ ಮಾತು. ಇದನ್ನೇ ಅಕ್ಕಮ್ಮ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾಳೆ.

ಬಸವಣ್ಣನ ಭಕ್ತಿ; ಚೆನ್ನಬಸವಣ್ಣನ ಜ್ಞಾನ;
ಮಡಿವಾಳಯ್ಯನ ನಿಷ್ಠೆ; ಪ್ರಭುದೇವರ ಜಂಗಮಸ್ಥಲ;
ಅಜಗಣ್ಣನ ಐಕ್ಯಸ್ಥಲ; ನಿಜಗುಣರ ಆರೂಢಸ್ಥಲ;
ಸಿದ್ಧರಾಮಯ್ಯನ ಸಮಾಧಿಸ್ಥಲ; ಇಂತಿವರ
ಕರುಣಪ್ರಸಾದ ಎನಗಾಯಿತ್ತು ಚೆನ್ನಮಲ್ಲಿಕಾರ್ಜುನಯ್ಯಾ

ಅಕ್ಕಮ್ಮನ ವಚನವೊಂದರಲ್ಲಿ ಮಾತ್ರವಲ್ಲ, ಸಕಳೇಶ್ವರ ಮಾದರಸನೆಂಬ ಶರಣನೂ ಸಹ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾನೆ. "ಭಕ್ತನೆಂಬೆನು ಬಸವಣ್ಣನ ಶರಣನೆಂಬೆನು ಪ್ರಭುದೇವರ ಐಕ್ಯನೆಂಬೆನು ಅಜಗಣ್ಣನ ಹಿಂದೆ ಆದವರಿಲ್ಲ, ಇನ್ನು ಮುಂದೆ ಅವರಿಲ್ಲ ಸಕಳೇಶ್ವರದೇವಾ ನಿಮ್ಮ ಶರಣರು ಮೂವರೆ" ಎಂತೆಂದು. ಯಾರ ಮನಸ್ಸು ನಿಂತಿರುತ್ತದೆಯೋ ಅವರಿಗೆ ಭೂತ, ಭವಿಷ್ಯ, ವರ್ತಮಾನಗಳೆಲ್ಲವೂ ಅರ್ಥವಾಗುತ್ತವೆಯಂತೆ.

ಅಜಗಣ್ಣ ತಂದೆ ಶಿವಶರಣನಿಗೆ ಒಬ್ಬ ತಂಗಿ ಇದ್ದಳು. ಆಕೆಯ ಹೆಸರು ಮುಕ್ತಾಯಕ್ಕ. ಮದುವೆ ವಯಸ್ಸು ಬಂದಿದ್ದಳಾದ್ದರಿಂದ ಹುಡುಗನೋರ್ವ ಆಕೆಯನ್ನು ಬಂದು ನೋಡಿಕೊಂಡು ಹೋಗಿದ್ದ. ಅಣ್ಣನಿಗೆ ಇಷ್ಟವಾಗಿತ್ತು. ಆದರೆ ತಂಗಿ, "ಅಣ್ಣಾ ನನಗೆ ಮದುವೆ ಬೇಡ, ನಾನು ಮದುವೆಯಾಗಿ ಗಂಡನ ಮನೆಗೆ ಹೋದರೆ, ನೀನು ಒಬ್ಬನೆ ಆಗಿ ಬಿಡುವೆ. ನಿನ್ನ ಆಪತ್ತು ವಿಪತ್ತುಗಳಿಗೆ ಸಹಾಯಕರಾರೂ ಇಲ್ಲವಾಗುವರು. ನಾನು ಪತಿಯ ಮನೆಯಲ್ಲಿದ್ದಾಗ ನಿನಗೆ ಏನಾದರೂ ತೊಂದರೆಗಳು ಬಂದಾಗ ನನಗೆ ತಿಳಿಯುವುದಾದರೂ ಹೇಗೆ? ನಾನು ಬಂದು ನಿನಗೆ ಸಹಾಯ ಮಾಡುವುದಾದರೂ ಹೇಗೆ? ಆದ್ದರಿಂದ ನನಗೆ ಮದುವೆಯೇ ಬೇಡ" ಎಂದು ಹಠ ಹಿಡಿದಳು.

ಅಜಗಣ್ಣನಾಗ, "ತಂಗೀ ನೀನು ಚಿಂತಿಸಬೇಡ. ನನಗೇನಾದರೂ ತೊಂದರೆ ಬರುತ್ತದೆ ಎಂಬುದಾದರೆ ನಿನಗೆ ಮೊದಲೇ ಅದರ ಸುಳಿವು ಸಿಕ್ಕುವುದು. ಅದು ಹೇಗೆಂದರೆ ನೀನು ಕಡಗೋಲಿನಿಂದ ಮಜ್ಜಿಗೆ ಕಡೆಯುವಾಗ ಅದರೊಳಗಿನ ಬೆಣ್ಣೆ ಕಲ್ಲಾಗುವುದು. ಮತ್ತೆ ನಿನ್ನ ಜಡೆಯ ಮುಡಿ ತಾನಾಗಿಯೇ ಬಿಚ್ಚಿಕೊಳ್ಳುವುದು. ಹಾಗೂ ನೀನುಟ್ಟ ಸೀರೆಯ ನೆರಿಗೆಗಳು ಅವಷ್ಟಕ್ಕವೇ ಕಳಚಿಕೊಳ್ಳುವವು. ಇದು ನನ್ನ ಇಷ್ಟಲಿಂಗದಾಣೆಯೂ ಸತ್ಯ. ಆ ಕೂಡಲೇ ನೀನು ನಿನ್ನ ಪತಿಯೊಂದಿಗೆ ಬಂದುಬಿಡು" ಹೀಗೆಂದು ಹೇಳಿ ತಂಗಿಯನ್ನು ಸಮಾಧಾನಪಡಿಸಿ ಮದುವೆ ಮಾಡಿ ಪತಿಯ ಮನೆಗೆ ಕಳುಹಿಸಿಕೊಟ್ಟ.

ಹೀಗೆ ಬಹಳ ದಿನಗಳೇ ಕಳೆದವು. ಅದೊಂದು ದಿನ ಮುಕ್ತಾಯಕ್ಕನಿಗೆ ಅಜಗಣ್ಣ ತಂದೆ ಹೇಳಿದಂತೆ ಆ ಮೂರು ಘಟನೆಗಳು ಒಂದೇ ದಿನ ನಡೆದು ಹೋದವು. ಗಾಬರಿಯಿಂದ ಮುಕ್ತಾಯಕ್ಕ ಪತಿಯ ಸಂಗಡ ತವರು ಮನೆಗೆ ಬರುವಳು. ಆದರೆ ಅಷ್ಟರೊಳಗೆ ಅಜಗಣ್ಣ

ತಂದೆ ಲಿಂಗೈಕ್ಯನಾಗಿದ್ದ. ಸತಿಪತಿಗಳೀರ್ವರೂ ಅಜಗಣ್ಣನ ಶವಸಂಸ್ಕಾರದ ಕ್ರಿಯೆಯಲ್ಲಿ ಪಾಲ್ಗೊಂಡರು.

ಶರೀರ ವ್ಯಾಮೋಹದಿಂದ ಹೊರಬಂದ "ಶರಣರ ಮರಣ ಮಹಾನವಮಿ। ಆದರೆ ನಮ್ಮಗಳ ಮರಣ ಹೋಳಿ ಹುಣ್ಣಿಮಿ ॥ "

ಸಾಕ್ರೆಟೀಸ್ ಗ್ರೀಸ್ ದೇಶದ ಮಹಾನ್ ತತ್ವಜ್ಞಾನಿ. ಗ್ರೀಸ್ ಆಗಲೂ ಪ್ರಜಾಪ್ರಭುತ್ವದ ದೇಶವಾಗಿತ್ತು. ಆತನ ತತ್ವೋಪದೇಶಕ್ಕೆ ಅನೇಕ ಜನರು ಮಾರು ಹೋಗಿದ್ದರು. ಆತನ ಅನುಯಾಯಿಗಳೂ ಸಹ ಬಹಳ ಮಂದಿಯಾದರು. ಇದೇ ಸರ್ಕಾರದವರ ಕೆಂಗಣ್ಣಿಗೆ ಗುರಿಯಾಗಲು ಕಾರಣರಾದರು. ಆತನ ವಿರುದ್ಧ ಎರಡು ಆರೋಪಗಳು ಹೊರಬಿದ್ದವು. ಒಂದು ಅಥೆನ್ಸ್ ನಗರದ ಯುವಕರ ಮನಸ್ಸನ್ನು ಭ್ರಷ್ಟಗೊಳಿಸಿದ್ದಾನೆಂಬುದು, ಮತ್ತೊಂದು ಧಾರ್ಮಿಕ ನಡವಳಿಕೆಯಲ್ಲಿ ಏನೇನೋ ಹೊಸ ವೈವಿಧ್ಯಗಳನ್ನು ತಂದು ಗ್ರೀಕ್ ದೇವರುಗಳನ್ನು ಕಳಪೆ ಮಟ್ಟಕ್ಕೆ ತಂದಿದ್ದಾನೆಂದು. ಆರೋಪ ಹೊರಿಸಿದ್ದರು.

ನ್ಯಾಯಾಲಯ ಸಾಕ್ರೆಟೀಸ್‌ನಿಗೆ ಮರಣದಂಡನೆ ವಿಧಿಸುವ ಪೂರ್ವ "ನಿನ್ನಲ್ಲಿ ಬೇರೆ ಸಲಹೆಗಳೇನಾದರೂ ಇದ್ದಲ್ಲಿ ಈಗಲೇ ಕೇಳಿಕೊಳ್ಳಬಹುದು" ಎಂದು ಕೇಳಿತು.

ಸಾಕ್ರೆಟೀಸ್ ನ್ಯಾಯದರ್ಶಿಗಳಲ್ಲಿ ಕ್ಷಮೆ ಬೇಡಲಿಲ್ಲ. ತತ್ವಜ್ಞಾನದಲ್ಲಿ ತನ್ನ ಜಾಡನ್ನು ಬಿಡಬೇಕೆಂದು ಅವರೇನಾದರೂ ಆದೇಶಿಸಿದರೆ, ಆಗ ನಾನು ದೇವರ ಆದೇಶವನ್ನು ಬಿಟ್ಟು ಇವರ ಆದೇಶ ಪಾಲಿಸುವುದಕ್ಕಿಂತ ಇವರಿಂದ ಶಿಕ್ಷೆ ಅನುಭವಿಸುವುದೇ ಲೇಸೆಂದುಕೊಂಡು "ಹಣ, ಕೀರ್ತಿ, ಆಸ್ತಿ, ಅಂತಸ್ತುಗಳಿಗಷ್ಟೇ ಪ್ರಾಮುಖ್ಯತೆ ಕೊಟ್ಟು ಸತ್ಯಕ್ಕೆ (ಆತ್ಮಕ್ಕೆ) ವಂಚನೆ ಮಾಡಲಾರೆ" ಎಂಬ ದಿಟ್ಟ ಉತ್ತರಕೊಟ್ಟ.

"ನಿನಗೆ ಸಾವಿನ ಭಯವಿಲ್ಲವೇ" ಎಂದು ಪ್ರಶ್ನಿಸಿದರು.

ಅದಕ್ಕೆ ಸಾಕ್ರೆಟೀಸ್‌ನು "ಇಲ್ಲ, ಅದು ಬಹಳ ಒಳ್ಳೆಯದೆಂದು ಭಾವಿಸಿರುವೆ. ಅದಕ್ಕೆ ಸಾಕಷ್ಟು ಕಾರಣಗಳಿವೆ. ಸಾವು ಎಂಬುದು ಏನೂ ಇಲ್ಲದ ಒಂದು ಶೂನ್ಯಸ್ಥಿತಿ. ಸಂಪೂರ್ಣ ಪ್ರಜ್ಞಾಹೀನತೆಯದು. ಆದ್ದರಿಂದ ಅದೊಂದು ಲಾಭವೇ ಸರಿ" ಎಂಬ ಉತ್ತರ ಕೊಟ್ಟಿದ್ದ. ಈ ಬಗ್ಗೆ ಭಾಗವತದಲ್ಲಿ ಒಂದು ಶ್ಲೋಕವು ಹೀಗಿದೆ.

ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇ: ಪಾರಂಗತ:
ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಾ: ॥

ಈ ಪ್ರಪಂಚದಲ್ಲಿ ಯಾರು ಅತ್ಯಂತ ಮೂಢನೋ ಮತ್ತು ಯಾರು ಬುದ್ಧಿಯನ್ನು ಮೀರಿ ಹೋಗಿರುವನೋ, ಇವರಿಬ್ಬರೂ ಅತ್ಯಂತ ಸುಖಿಗಳಾಗಿರುತ್ತಾರೆ. ಈ ಎರಡು ಅತಿರೇಕಗಳ ನಡುವೆ ಇರುವ ಜನರಿಗೆ ಮಾತ್ರ ಹೇಳತೀರದ ಸಂಕಟವು ಎಂಬ ಅರ್ಥವು.

ಹೌದು ಬುದ್ಧಿಗೆ ಅತೀತನಾದವನೇ ಆತ್ಮಜ್ಞಾನಿ. ಇದೇ ಮಾತನ್ನು ಕಲಿದೇವರು ತನ್ನ

ವಚನದಲ್ಲಿ ಹೀಗೆ ಹೇಳಿದ್ದಾನೆ.

ತನುನಷ್ಟ, ಮನನಷ್ಟ, ನೆನಹುನಷ್ಟ
ಭಾವನಷ್ಟ, ಜ್ಞಾನನಷ್ಟ, ಇಂತೀ
ಪಂಚನಷ್ಟದೊಳಗೆ ನಾ ನಷ್ಟವಾದೆನು
ಆ ನಷ್ಟದೊಳಗೆ ನೀ ನಷ್ಟವಾದೆ
ಕುಲದೇವರದೇವ ಎಂಬ ನುಡಿ
ನಿಶ್ಯಬ್ದಂ ಪರಬ್ರಹ್ಮ ಉಚ್ಯತೇ ಎನ್ನುತ್ತಿದ್ದಿತು

ಶಾರೀರಿಕ ವ್ಯಾಮೋಹ, ಮನಸ್ಸಿನಲ್ಲಿ ಆಸೆಗಳು, ಹಳೆಯ ನೆನಪುಗಳು, ಚಿತ್ ವೃತ್ತಿಯ ವ್ಯವಹಾರಗಳು, ವಿಕಲ್ಪಜ್ಞಾನ ಈ ಐದು (ಪಂಚ) ನಷ್ಟಗಳಾದಾಗ, ಅಹಂಕಾರದ 'ನಾನು' ಅಳಿವುದು. ಜ್ಞಾನದ 'ನಾನು' ಅರಿವಾಗುವುದು. ಆ ನಾನು! ನಿರ್ಬಯಲು, ನಿರಾಕಾರ, ನಿಶ್ಯಬ್ದ, ಆನಂದ, ಅದು ಪರಶಿವಬ್ರಹ್ಮದ ಅರಿವು ಮತ್ತು ಅನುಭಾವ!

ಜೀವನ್ಮುಕ್ತರ ಸ್ಥಿತಿ ಹೇಗಿರುತ್ತದೆ ಎಂಬುದರ ಬಗ್ಗೆ ಶ್ಲೋಕವೊಂದು ಹೀಗಿದೆ.

ವಿಕಲ್ಪರಹಿತ ಜ್ಞಾನಂ; ನಿಷೇಧರಹಿತ ಕ್ರಿಯಾ ।
ಅಲೋಕರಂಜಿತ ರೂಪಂ; ಜೀವನ್ಮುಕ್ತ್ಯಾಸ್ಯ ಲಕ್ಷಣಂ ॥

ವಿಕಲ್ಪವಲ್ಲದ ಜ್ಞಾನಿಯಾಗಿರುತ್ತಾನೆ. ನಿಷಿದ್ಧವಾದ ಯಾವೊಂದು ಕ್ರಿಯೆಗಳನ್ನು ಆಚರಿಸದವನು ಈ ಲೋಕದ ರಂಜನೆಗೆಂದೇ ರೂಪ, ವೇಷ, ಭೂಷಣ, ಭಾಷೆಗಳನ್ನು ಬಳಸದೇ ಇರುವವನು. ಇವೇ ಜೀವನ್ಮುಕ್ತರ ಲಕ್ಷಣಗಳು. ಈ ಜೀವನ್ಮುಕ್ತರ ಲಕ್ಷಣವನ್ನು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಹೇಳಿದೆ!

ಗಚ್ಛನ್ ತಿಷ್ಠನ್ ಸ್ವಪನ್ ವಾಪಿ ಜಾಗ್ರನ್ವಾಪಿ ಮಹಾಮತಿ: ।
ಶಿವಜ್ಞಾನ ಸಮಾಯೋಗಾಚ್ಛಿವಪೂಜಾಪರಸ್ಸದಾ ॥ (ಸಿ.ಶಿ.)

ಯಾವ ಶಿವಯೋಗಿಯು ಪರಶಿವನಲ್ಲಿ ಬೆರೆತು ಒಂದಾಗಿರುತ್ತಾನೆ, ಅವನು ನಡೆಯುತ್ತಿರಲಿ, ನಿಂತಿರಲಿ, ಎಚ್ಚರವಿರಲಿ, ಕನಸು ಕಾಣುತ್ತಿರಲಿ ಹೀಗೆ ಅವನ ಎಲ್ಲಾ ಕ್ರಿಯೆಗಳಲ್ಲಿ ಶಿವಜ್ಞಾನವೇ ಪ್ರಕಾಶಿಸುವುದರಿಂದ ಅವನು ಸದಾ ಲಿಂಗಪೂಜಾರತನೆನಿಸುವನು.

ಪರ ಮತ್ತು ಅಪರಗಳಲ್ಲಿ ಅವಲಂಭಿಸಿ ಇರುವಂತಹ ಭಾವ ಮತ್ತು ಅಭಾವಗಳ ವಿವೇಕರೂಪವಾದ ಭೇದಜ್ಞಾನವು, ಪರಶಿವಬ್ರಹ್ಮ ಸ್ಥಿತಿಯನ್ನು ಪಡೆದಂತಹ ಶಿವಯೋಗಿಗೆ ಇರುವುದಿಲ್ಲ. ಇದನ್ನೇ ವೀರಶೈವಸ್ಥಲದಲ್ಲಿ ಜ್ಞಾನಶೂನ್ಯಸ್ಥಿತಿ ಎಂದು ಹೇಳಿರುವುದು.

# ಸೃಷ್ಠಿ ಮತ್ತು ಮಾಯೆ

"ಶಿವ-ಜೀವ-ಜಗತ್ತು – ಇವುಗಳ ಪರಿಪೂರ್ಣ ಅರಿವೇ ತತ್ವ" ಜಗತ್ತು ಹುಟ್ಟಿದ್ದು ಹೇಗೆ? ಏಕೆ ಹುಟ್ಟಿತು? ಈ ಜಗತ್ತಿನಲ್ಲಿ ಕಂಡುಬರುವ ಚರ, ಅಚರಗಳ ಪಾತ್ರವೇನು? ಇವು ಬಂದಿದ್ದು ಎಲ್ಲಿಂದ? ಮತ್ತೆ ಹೋಗುವುದು ಎಲ್ಲಿಗೆ? ಬಹುಶ: ಆಧ್ಯಾತ್ಮಕ್ಕೆ ಬುನಾದಿ ಈ ಪ್ರಶ್ನೆಗಳೇ ಇರಬೇಕು.

ಸಂತನೊಬ್ಬ ತನ್ನ ತತ್ವದ ಹಾಡಿನಲ್ಲಿ ಹೀಗೆ ಹೇಳುತ್ತಾನೆ. "ಜಲ್ದಿ ನೋಡಿಕೊಳ್ಳೋ ತಮ್ಮಾ ಬಂದಿದ್ದೆಲ್ಲಿ? ಮತ್ತೆ ನೀ ಹೋಗೋದೆಲ್ಲಿ?" ಎಂದು. ಈ ಪದ ಭಜನೆಯಲ್ಲಿ ಹಾಡುವರು. ಹಾಡಿದವರೆಲ್ಲ ಈ ತತ್ವದೊಳಗೆ ಇಣುಕಿ ಬಂದವರೆ. ಬಂದದ್ದೆಲ್ಲಿಂದ? ಹೋಗುವುದೆಲ್ಲಿಗೆ? ಇದರ ಮರ್ಮ ಹಾಡಿದವರೆಲ್ಲರೂ ತಿಳಿದಿದ್ದರೆಂಬುದು ತಪ್ಪು ಕಲ್ಪನೆ. ಕೆಲವೊಬ್ಬರು ತಿಳಿದಿರಬಹುದೂ ಸಹ.

ಅದೊಂದು ದಿನ. ಕುಡುಕನೊಬ್ಬ ಕಂಠಪೂರ್ತಿ ಕುಡಿದಿದ್ದಾನೆ. ರಾತ್ರಿ ೧೨ ಗಂಟೆಯಾದರೂ ಮನೆ ಸೇರಿಲ್ಲ. ಬೀದಿಬೀದಿಗಳಲ್ಲಿ ಬೀಳುತ್ತಾ, ಏಳುತ್ತಾ ಸುತ್ತು ಹಾಕುತ್ತಿದ್ದಾನೆ. ಗಸ್ತಿ ತಿರುಗುತ್ತಿದ್ದ ಪೋಲಿಸರು ಅವನನ್ನು ನೋಡಿ, "ಏಯ್, ಏನಯ್ಯಾ, ಇಷ್ಟೊತ್ತಾದರೂ ಮನೆ ಸೇರದೆ ಗಲ್ಲಿ ಗಲ್ಲಿ ತಿರುಗುತ್ತಿರುವೆ, ಮನೆಗೆ ಹೋಗು ನಡಿ?" ಎಂದರು. ಅದಕ್ಕೆ ಆ ಕುಡುಕ ಹೇಳುತ್ತಾನೆ, "ಸಾರ್ ನನಗೆ ನನ್ನ ಮನಿ ಎಲ್ಲಿದೆ ಎಂದು ಗೊತ್ತಿದ್ರೆ ನಾನ್ಯಾಕೆ ಇಲ್ಲಿ ತಿರುಗುತ್ತಿದ್ದೆ. ಇಷ್ಟೊತ್ತಿಗೆ ಮನೆ ಸೇರ್ತಿದ್ದೆ" ಎನ್ನಬೇಕೆ?

ಇವ ಕುಡುಕ, ಲೌಕಿಕದ ಮನೆ ಗೊತ್ತಿಲ್ಲ. ಇನ್ನ ನಾವು ಲೌಕಿಕದಲ್ಲಿ ಬಲಿತವರು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚವಿಷಯಗಳು ನಮ್ಮನ್ನು ಆವರಿಸಿ ಅವು ಮತ್ತು ತರಿಸಿವೆ. ಈ ಮತ್ತು ಅರಿವು ಬಂದಾಗಿನಿಂದ ಹಿಡಿದು, ಮರಣ ಬರುವವರೆಗೂ ಇಳಿಯಲಾರದಂಥದ್ದು. ಅಂದಮೇಲೆ ಆ ನಮ್ಮ ಅಲೌಕಿಕದ ಮನೆ ಹೇಗೆ ತಿಳಿದೀತು. ಈ ಅರುವಿಗೆ ಒಬ್ಬ ಗುರು ಬೇಕೇಬೇಕು. ಆ ಅರಿವಿನವರು ಹೇಳುತ್ತಾರೆ, "ಅಲ್ಲಿದೆ ನಮ್ಮನೆ, ಇಲ್ಲಿ ಬಂದಿರುವೆ ಸುಮ್ಮನೆ" ಎಂದು. ಡಿ.ವಿ.ಜಿ.ಯವರು ಹೇಳುತ್ತಾರೆ, "ಬೆತ್ತಲೆಯೆ ನೀಂ ಬಂದೆ, ಬೆತ್ತಲೆಯೇ ನೀಂ ಪೋಪೆ, ವಸ್ತ್ರ ವಸ್ತುಗಳೆಲ್ಲ ನಡುವೆ ಮೂರು ದಿನ, ಚಟ್ಟಕ್ಕೆ ನಿನ್ನೇರಿಪ ಮುನ್ನ ನೀನರಿತು, ಕಿತ್ತೆಸೆಯೋ ಕಂತೆಗಳ" ಆಧ್ಯಾತ್ಮದ ತಿರುಳನ್ನು ಬಹು ಮಾರ್ಮಿಕವಾಗಿ ಹೇಳಿದ್ದಾರೆ. 'ನಾನು, ನನ್ನದು' ಎನ್ನುವುದೆಲ್ಲ ತಾತ್ಕಾಲಿಕ ಸಂಬಂಧಗಳು. ಶಾಶ್ವತವಾದವುಗಳಲ್ಲ. ಆದರೂ ಮನುಷ್ಯನ ಆಸೆಗೆ ಕೊನೆಯಿಲ್ಲ.

ಬಹುಷ: ಆಸೆಯಲ್ಲಿ ಅಗ್ರಗಣ್ಯನೆಂದರೆ ಅಲೆಗ್ಸಾಂಡರ್. ಅವನ ಮಹದಾಸೆ ಇಡೀ ವಿಶ್ವವನ್ನೇ ಗೆಲ್ಲಬೇಕೆಂಬುದಾಗಿತ್ತು. ಇರುವಷ್ಟು ಸಾಧನೆಯನ್ನೂ ಸಹ ಮಾಡಿದ. ಆದರೆ ಅವನು ಸಾಯುವ ಪೂರ್ವ ತನ್ನ ದುರಾಸೆಯ ಬಗ್ಗೆ ಪಶ್ಚಾತ್ತಾಪಪಟ್ಟ. ಆಗ ಅವನಿಗೆ ಆದುದು ಅಲೌಕಿಕ ಪ್ರಜ್ಞೆ (ಆತ್ಮಜ್ಞಾನ).

ಸಾಯುವ ಮುನ್ನ ತನ್ನ ಸೇನಾಧಿಪತಿಯನ್ನು ಹತ್ತಿರ ಕರೆದು! "ನಾನು ಸಾಯುವುದು ಖಚಿತ. ನಾ ಸತ್ತ ನಂತರ ನೀನು ನನ್ನ ಮೂರು ಮಾತುಗಳನ್ನು ನಡೆಸಿಕೊಡಬೇಕು" ಎಂದು ಕೇಳಿದ.

"ಆಗಲಿ ಪ್ರಭು" ಎಂದ ಸೇನಾಧಿಪತಿ.

"ಒಂದು! ನಾ ಸತ್ತ ಮೇಲೆ ನನ್ನ ಸಿದಿಗಿಯನ್ನು ವಿಶ್ವದ ಅತಿ ಪ್ರಮುಖರೆನಿಸಿದ ನಾಲ್ಕು ಜನ ವೈದ್ಯರು ಸ್ಮಶಾನಕ್ಕೆ ಹೊತ್ತುಕೊಂಡು ಒಯ್ಯಬೇಕು! ಎರಡನೆಯದಾಗಿ ನನ್ನ ಕೈಗಳೆರಡನ್ನು ಸಿದಿಗಿಯ ಹೊರಗೆ ಬಿಟ್ಟು ಕಟ್ಟಿರಬೇಕು! ಮೂರನೆಯದಾಗಿ ನಾ ಗಳಿಸಿರುವಂತಹ ಭೌತಿಕ ಸಂಪತ್ತನ್ನು ನನ್ನ ಶವ ಯಾತ್ರೆಯ ಜೊತೆ ಜೊತೆಯಲ್ಲಿ ಈ ಭೂಮಿಯ ಮೇಲೆ ಚೆಲ್ಲುತ್ತಾ ಹೋಗಬೇಕು. ಈ ಮೂರು ಮಾತುಗಳನ್ನು ನಡೆಸಿಕೊಟ್ಟರೆ ಸಾಕು!" ಎಂದು.

"ನಿಮ್ಮಾಜ್ಞೆಯಂತೆ ನಡೆಸಿಕೊಡುವೆ ಮಹಾಪ್ರಭು! ಇದಕ್ಕೆಲ್ಲ ಕಾರಣವೇನೆಂದು ಕೇಳಬಹುದೇ?" ಎಂದು ಪ್ರಶ್ನಿಸಿದ.

"ಒಂದನೆಯದು! ಈ ಪ್ರಪಂಚಕ್ಕೆ ಹುಟ್ಟಿಬಂದ ಪ್ರತಿಯೊಬ್ಬರು ಒಂದಿಲ್ಲ ಒಂದು ದಿನ ಸಾಯಲೇಬೇಕು! ಇದು ನಿಶ್ಚಿತ. ಈ ಸಾವನ್ನು ತಡೆಯುವಂತಹ ಯಾವೊಬ್ಬ ವೈದ್ಯನೂ ಇನ್ನು ಹುಟ್ಟಿಬಂದಿಲ್ಲ. ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದ ವೈದ್ಯಲೋಕ ಈ ಸತ್ಯವನ್ನರಿತು ಕರ್ಮತತ್ಪರರಾಗಲಿ. ಎರಡನೆಯದಾಗಿ ನಾನು ಇಡೀ ವಿಶ್ವವನ್ನೇ ಕೊಳ್ಳೆಹೊಡೆದು ಏನೆಲ್ಲಾ ಸಂಪತ್ತನ್ನು ಸಂಪಾದಿಸಿದೆ. ಆದರೆ! ಈ ಅಲೆಗ್ಸಾಂಡರ್ ಕೊನೆಗೆ ಏನನ್ನೂ ಕೊಂಡೊಯ್ಯಲಿಲ್ಲ. ಬರೀ ಕೈಯಿಂದ ಹೋಗುತ್ತಿದ್ದಾನೆ ಎಂಬುದು ಜಗತ್ತಿಗೆ ಗೊತ್ತಾಗಲಿ. ಕೊನೆಯದಾಗಿ ನಾನು ಹುಟ್ಟಿ ಬಂದ ನಂತರವೇ ನಾ ಸಂಪಾದಿಸಿದ ಸಂಪತ್ತನ್ನೆಲ್ಲಾ ಈ ಭೂಮಿಯಿಂದಲೇ ಪಡೆದುಕೊಂಡೆ. ಪುನ: ಅದನ್ನು ಈ ಭೂಮಿಗೇನೇ ಕೊಟ್ಟು ಬಿಡೋಣವೆಂಬುದಕ್ಕೆ ಸಾಕ್ಷಿಯಾಗಿ. ಆ ನನ್ನ ಶವಯಾತ್ರೆಯಲ್ಲಿ ಭೂಮಿಗೆ ಚೆಲ್ಲಿಸಿಬಿಡು ಎಂದು ಹೇಳುತ್ತಿರುವುದು" ಹೀಗೆ ಜಗತ್ತನ್ನೇ ಗೆಲ್ಲಬೇಕೆಂಬ ಮಹದಾಸೆಯುಳ್ಳ ಅಲೆಗ್ಸಾಂಡರ್ ಇಡೀ ಜಗತ್ತಿಗೇ ಸಂದೇಶವೊಂದನ್ನು ಸಾರಿದ.

"ಮುಷ್ಠಿ ಬಾಂದ್‌ಕು ಆಯೇಗಾ! ಹಾತ್ ಪಸಾರ್ಕು ಜಾನೇಗಾ" ಎಂಬ ಮಹಾಲೋಕೋಕ್ತಿಯೊಂದಿದೆ. ಹುಟ್ಟಿ ಬಂದಂತಹ ಪ್ರತಿಯೊಂದೂ ಮಗುವೂ ತನ್ನ ಎರಡೂ ಕೈಗಳನ್ನು ಮುಷ್ಠಿ ಮಾಡಿಕೊಂಡೇ ಮಾತೃ ಗರ್ಭದಿಂದ ಈ ಭೂಗರ್ಭಕ್ಕೆ ಜನಿಸಿ ಬರುವುದು. ಅಂದರೆ ಅದರ ಅರ್ಥ! ತಾನು ಹಿಂದಿನ ಜನ್ಮಗಳಲ್ಲಿ ಮಾಡಿರುವಂತಹ ಪಾಪಪುಣ್ಯಗಳನ್ನು ಹೊತ್ತು ತಂದಿದೆ ಎಂತೆಂಬುದು. ಅದೇ ಶರೀರಕ್ಕೆ ಸಾವು ಬಂದಾಗ ಆ ಕೈಗಳೆರಡೂ ಮುಷ್ಠಿ ಮಾಡಿಕೊಂಡಿರುವುದಿಲ್ಲ. ಕೈ ಚಾಚಿರುತ್ತವೆ. ಆಗದು ಬರಿಯ ಕೈ. ಇಂತಹ ಅರಿವು ಸಾಧನೆಗೂ ಮೀರಿದ ನಮ್ಮ ಅವಸಾನದ ಕಾಲದಲ್ಲಿ ಬಂದುದಾದರೆ ಪ್ರಯೋಜನವೇನು? ಈ ಆಸೆಯೇ ಭವದ ಬಂಧನಕ್ಕೆ ಕಾರಣವು. ಸಾಧಿಸುವ ವಯಸ್ಸಿನಲ್ಲಿ ಮೆರೆಯುತ್ತೇವೆ. ಸಾಯುವ ಸಂದರ್ಭದಲ್ಲಿ ಅರಿಯುತ್ತೇವೆ.

ಬುದ್ಧ ಹೇಳಿದ, "ಆಸೆಯೇ ದು:ಖಕ್ಕೆ ಮೂಲ" ಎಂದು. ಬುದ್ಧ ಹೇಳಿರುವ ಈ ಸಂದೇಶವನ್ನು ಹಗುರವಾಗಿ ಹೇಳುವವರು ಬಹಳರು. ಅದರ ಒಳಮರ್ಮ ಅರಿತು ಹೇಳುವವರು ವಿರಳರು. ಬುದ್ಧ ಹೊರ ಪ್ರಪಂಚಕ್ಕೆ ಕಾಲಿಡುತ್ತಿದ್ದಂತೆ, ಅವ ಕಂಡದ್ದು, ಒಬ್ಬ ರೋಗಿಯನ್ನು, ಮತ್ತೋರ್ವ ಹಣ್ಣುಹಣ್ಣಾದ ಮುದುಕನನ್ನು. ಕೊನೆಗೆ ಒಂದು ಹೊತ್ತೊಯ್ಯುತ್ತಿದ್ದ ಶವವನ್ನು. ಈ ಎಲ್ಲವೂ ದು:ಖದ ಸಂಗತಿಗಳೇ. ಹಾಗೆ ಪ್ರಪಂಚವನ್ನು ನೋಡಿದ ಯಾರೂ ಸುಖಿಗಳಾಗಿ ಕಂಡುಬರಲಿಲ್ಲ. ಸುಖವಿಲ್ಲ ಎಂದ ಮೇಲೆ ಈ ಜಗತ್ತು ಮತ್ತು ಜೀವರಾಶಿಗಳಿದ್ದೂ ಪ್ರಯೋಜನವಿಲ್ಲ. ಆ ಸುಖ ಎಲ್ಲೋ ಅಡಗಿರಬೇಕು, ಆ ನಿರಂತರ ಸುಖಕ್ಕೆ ಏನೋ ಅಡ್ಡವಾಗಿರಬೇಕು. ಇದಕ್ಕೆ ಕಾರಣ ಹುಡುಕಲು ರಾಜನಾಗಿದ್ದ ಬುದ್ಧ ನಾಡುಬಿಟ್ಟ. ಕಾಡು ಸೇರಿದ. ಬೋಧಿವೃಕ್ಷದ ಕೆಳಗೆ ಹನ್ನೆರಡು ವರ್ಷ ಕುಳಿತ. ತಪಸ್ಸು ಮಾಡಿದ. ಕೊನೆಗೆ ಆತನ ಅಂತರ್ಬೋಧೆಯಲ್ಲಿ ಉತ್ತರ ಧ್ವನಿಸಿತು. "ಆಸೆಯೇ ದು:ಖಕ್ಕೆ ಮೂಲ" ಎಂಬುದು.

ಬುದ್ಧ ಈ ಪರಮ ಸತ್ಯವನ್ನರಿಯಲು ಹನ್ನೆರಡು ವರ್ಷ ತಪಸ್ಸು ಮಾಡಿದ. ಬುದ್ಧನ ಆ ಸಂದೇಶದ ಮರ್ಮವನ್ನರಿಯಲು ನಾವು ಕೊನೆ ಪಕ್ಷ ಹನ್ನೆರಡು ದಿನಗಳಾದರೂ ಚಿಂತನ-ಮಂಥನ ಮಾಡಬೇಕಲ್ಲವೆ? ಅದಕ್ಕೆ ರಾಮಕೃಷ್ಣ ಪರಮಹಂಸರು ಹೇಳುತ್ತಿದ್ದರು. "ಕೈಯಲ್ಲಿ ಭಂಗಿ ಹಿಡಿದುಕೊಂಡು ಭಾಂಗ್ ಭಾಂಗ್ ಎಂದರೆ ಮತ್ತೇರುವುದಿಲ್ಲ, ಸೇದಿದರೆ ಮಾತ್ರ ಮತ್ತೇರುವುದು" ಎಂದು.

ಬುದ್ಧನನ್ನೊಮ್ಮೆ ಒಬ್ಬ ಶಿಷ್ಯ ಹೀಗೆ ಕೇಳಿದ! "ಪ್ರಭು ಜಗತ್ತಿನಲ್ಲಿನ ಎಲ್ಲಾ ಸಮಸ್ಯೆಗಳಿಗೂ ನೀವು ಪರಿಹಾರ ಕೊಟ್ಟಿರುವಿರಿ. ಆದರೆ ಎಂದೆಂದೂ ನೀವು ಜಗತ್ತಿನ ಸೃಷ್ಟಿ ಮತ್ತು ಭಗವಂತನ ಇರುವಿಕೆಯ ಬಗ್ಗೆ ಎಲ್ಲೂ ಏನನ್ನೂ ಹೇಳಿಯೇ ಇಲ್ಲ ಯಾಕೆ?" ಎಂದು ಪ್ರಶ್ನಿಸಿದ. ಕೂಡಲೇ ಬುದ್ಧ ಒಂದು ದೃಷ್ಟಾಂತದ ಮೂಲಕ ಹೀಗೆ ಹೇಳಿದ್ದ. "ಕಾಡಿನಲ್ಲಿ ಇಬ್ಬರು ಗೆಳೆಯರು ಹೋಗುತ್ತಿರುತ್ತಾರೆ. ಎತ್ತಲಿಂದಲೋ ಒಂದು ಬಾಣ ಬಂದು ಒಬ್ಬನ ಕಾಲಿಗೆ ನಾಟುವುದು. ಮತ್ತೊಬ್ಬ ನಾಟಿದ ಬಾಣವನ್ನು ಕಿತ್ತಿದರೆ, ರಕ್ತಸ್ರಾವ ಹೆಚ್ಚಾಗಬಹುದೆಂದು ಭಾವಿಸಿ ಅವನನ್ನು ಹೊತ್ತುಕೊಂಡು ಪಂಡಿತರಲ್ಲಿಗೆ ಬರುವನು. ಆಗ ಪಂಡಿತರೇನು ಮಾಡಬೇಕು? ಚಿಕಿತ್ಸೆ ಮಾಡಬೇಕೇ? ಬದಲಿಗೆ ನಿನಗೆ ಬಿಟ್ಟಿರುವ ಬಾಣ ಎತ್ತಲಿಂದ ಬಂದಿತು, ಹೇಗೆ ಬಂದಿತು, ಬಂದದ್ದು ನಿನಗೆ ಕಾಣಲಿಲ್ಲವೆ, ಬಿಟ್ಟವರು ಯಾರಿರಬಹುದು? ಶೂದ್ರರೇ? ವೈಶ್ಯರೇ? ಕ್ಷತ್ರಿಯರೇ? ಬ್ರಾಹ್ಮಣರೇ? ಇಲ್ಲವಾದರೆ ನಿನಗಾರಾದರೂ ಶತ್ರುಗಳಿದ್ದರೆ? ಅವರೇನಾದರೂ ಹೀಗೆ ಮಾಡಿರಬಹುದೇ? ಹೋಗಲಿ ನಿನಗೆ ತಾಗಿರುವ ಬಾಣದ ವೇಗ ಎಷ್ಟು ಪ್ರಮಾಣದಲ್ಲಿತ್ತು? ಹೀಗೆ ಇವನ್ನೆಲ್ಲ ಕೇಳುತ್ತಾ ಕಾಲಹರಣ ಮಾಡುವನೇ? ಇಲ್ಲ! ಬಂದವನು ರೋಗಿ. ಅವನಿಗೆ ನೋವಿದೆ, ಆದ್ದರಿಂದ ಅವನ ನೋವು ಉಪಶಮನ ಹೊಂದಬೇಕು. ಅದಕ್ಕೆ ಚಿಕಿತ್ಸೆ ಬೇಕು. ಪ್ರಯುಕ್ತ ಆ ಸಂದರ್ಭದಲ್ಲಿ ಪಂಡಿತ ಚಿಕಿತ್ಸೆಯನ್ನಷ್ಟೇ ಮಾಡುವನು. ಹಾಗೆ ನಾವೆಲ್ಲ ಈ ಪ್ರಪಂಚಕ್ಕೆ ಬಂದಿದ್ದೇವೆ. ಈ ಪ್ರಪಂಚ ದು:ಖಮಯವಾಗಿದೆ. ಆದ್ದರಿಂದ ನಾವು ದು:ಖದಿಂದ ಹೇಗೆ ಮುಕ್ತರಾಗಬೇಕು. ಪರಿಹಾರವೇನು? ಆನಂದ ಎಲ್ಲಿದೆ? ಹೇಗೆ ಪಡೆಯಬೇಕು? ಇಷ್ಟು

ತಿಳಿದರೆ ಸಾಕಲ್ಲವೆ?" ಎಂದು ಹೇಳಿ ಬುದ್ಧ ಮೌನಕ್ಕೆ ಶರಣಾಗಿದ್ದ.

ಸೃಷ್ಟಿ ಮತ್ತು ಭಗವಂತನಿಗೆ ಇರುವಿಕೆಯ ಬಗ್ಗೆ ಬುದ್ಧ ಏನನ್ನೂ ಹೇಳಿಲ್ಲ. ಅಂದರೆ ಬುದ್ಧನಿಗೆ ಏನೂ ತಿಳಿದಿಲ್ಲವಂತಲ್ಲ. ಎಲ್ಲಾ ತಿಳಿದಿದ್ದರೂ ಹೇಳುವ ಗೋಜಿಗೆ ಹೋಗಲಿಲ್ಲ. ಯಾಕೆಂಬುದಕ್ಕೆ ನಿಜಗುಣ ಶಿವಯೋಗಿಗಳ ಈ ಮಾತು ಸಾಕು. **ಪರಿಪಕ್ವವಲ್ಲದ ಮಂದಮತಿಗಳಿಗೆ ಬೋಧಿಪೆನೆಂಬ ಛಲವ್ಯಾಕೋ ಮನುಜ**" ಎಂಬುದನ್ನು. ಶರಣರು, ಸಂತರು, ಮಹಾಂತರು ಪರಮಸತ್ಯವನ್ನು ಲೋಕಕ್ಕೆ ತಿಳಿಸಿದರು. ಅದು ವಾಚನದ ಮುಖಾಂತರವಲ್ಲ. ಲೇಖನದ ಮುಖಾಂತರ. ವಾಚನವಾದರೂ ಹರಟೆಯಾಗಿರದೆ, ಕಾಯಕ (ಪ್ರವಚನ)ದ ರೂಪವಾಗಿತ್ತು. ಲೇಖನ ವಾಚನ ಅಂದಿಗಷ್ಟೇ ಮೀಸಲಾಗಿರದೆ ಇಂದು ನಮಗೂ, ಮುಂದಿನವರಿಗೂ ಉಪಯೋಗವಾಗಿರುವುವು. ಇದೊಂದು ಪರಂಪರಾಗತಿವಾಗಿ ನಡೆದುಕೊಂಡು ಬಂದಂತಹ ಕಾರ್ಯವಾಗಿದೆ.

ಜಗತ್ತಿನಲ್ಲಿ ಸೃಷ್ಠಿಯ ಬಗ್ಗೆ ಬಹಳಷ್ಟು ಗೊಂದಲಗಳಿವೆ. ಆದರೆ ವೇದಾಗಮಗಳಲ್ಲಿ ಮಾತ್ರ ಗೊಂದಲಗಳಿಲ್ಲ. ಇದನ್ನೊಪ್ಪದ ಬಹಳರು ಏನೇನೋ ಹೇಳುತ್ತಾರೆ. ಈ ಸೃಷ್ಟಿ ಹೇಗಾಯಿತೆಂದು ವಿಜ್ಞಾನಿಗಳು ಹೇಳುತ್ತಾರೆ. Big Bang Theory (ಬಿಗ್ ಬ್ಯಾಂಗ್ ಥೇರಿ) ಈ ಉದಾಹರಣೆ ಸಹಿತ. ಅಂದರೆ ಸೂರ್ಯನಿಗೆ ಬಲವಾದ ಹೊಡೆತವೊಂದು ಬಿತ್ತು. ಅದರಿಂದ ಸೂರ್ಯನಲ್ಲಿ ಒಂದು ದೊಡ್ಡ ಘರ್ಷಣೆಯಾಯಿತು. ಈ ಪ್ರಭಾವದಿಂದ ಸೂರ್ಯನಿಂದ ಒಂದು ತುಣುಕು ಸಿಡಿದು ಬಿತ್ತು. ಅದೆಷ್ಟೋ ಸಹಸ್ರ ವರ್ಷಗಳ ನಂತರ ಆ ತುಣುಕು ತಣ್ಣಗಾಯಿತು. ಆ ತುಣುಕು 'ಭೂಮಿ' ಎನಿಸಿಕೊಂಡಿತು. ಇಷ್ಟೇ ವಿಜ್ಞಾನಿಗಳು ಸೃಷ್ಠಿಯ ಬಗ್ಗೆ ಹೇಳಿರುವುದು. ಜೀವ, ಜಲ, ಗಿಡಮರ ಇತ್ಯಾದಿಗಳ ಸೃಷ್ಠಿಯ ಬಗ್ಗೆ ಸ್ಪಷ್ಟೀಕರಣ ಕಂಡುಬಂದಿಲ್ಲ. ಇಷ್ಟಾದರೂ ಅವರ ನಿರ್ಧಾರ ಅಂತಿಮವಾದದ್ದಲ್ಲ. ಇನ್ನೂ ಸಂಶೋಧನೆಯಲ್ಲಿದ್ದಾರೆ. ಆಗಾಗ ತೀರ್ಮಾನ ಬದಲಿಸಿದರೂ ಆಶ್ಚರ್ಯಪಡಬೇಕಾಗಿಲ್ಲ.

ನಾವಿಲ್ಲಿ ಗಮನಿಸಬೇಕಾದ ಅಂಶ. ಸೂರ್ಯನಿರುವುದು ಒಬ್ಬನಲ್ಲ. ಬ್ರಹ್ಮಾಂಡದಲ್ಲಿ ಅಗಣಿತ ಸೂರ್ಯರಿದ್ದಾರೆ. ಇದು ವೈಜ್ಞಾನಿಕವಾಗಿ ಸತ್ಯವೂ ಸಹ. ಅಂದರೆ ಜಗದ ಸೃಷ್ಠಿಗೆ ಸೂರ್ಯನೇ ಮೂಲ ಚೇತನನಲ್ಲ. ಹೊಡೆತ ಬಿದ್ದ ಸೂರ್ಯನನ್ನೇ ಮೂಲ ಚೇತನನೆಂದು ಒಪ್ಪಿಕೊಂಡರೆ ಬ್ರಹ್ಮಾಂಡದಲ್ಲಿರುವ ಇನ್ನುಳಿದ ಸೂರ್ಯರು (ನಕ್ಷತ್ರಗಳು) ಏನಾಗಬೇಕು? ಈ ಬಗ್ಗೆ ಇಷ್ಟು ಪ್ರಶ್ನೆಗಳು ಸಾಕು. ವಿಪರೀತಕ್ಕೆ ಹೋಗುವುದು ಬೇಡ.

ಕೆಲವರು ಜಗತ್ ಸೃಷ್ಠಿಯ ಬಗ್ಗೆ ಹೀಗೂ ಹೇಳುವರು. ಸುಮಾರು ೪೦೦-೫೦೦ ಕೋಟಿ ವರ್ಷಗಳ ಪರ್ಯಂತರ ಜಗತ್ತಿನಲ್ಲಿ ಏನೇನೂ ಇರಲಿಲ್ಲ. ಬಯಲು ಮಾತ್ರ ಇತ್ತು. ಇಷ್ಟನ್ನು ಮಾತ್ರ ನಾವು ಒಪ್ಪಿಕೊಳ್ಳಲೇಬೇಕು. ಇದು ವೈಜ್ಞಾನಿಕ ಹಾಗೂ ಧಾರ್ಮಿಕ ಸತ್ಯವೂ ಸಹ. ಆಮೇಲೆ ಭೂಮಿ ಕಾಣಿಸಿಕೊಂಡಿತು. ಹೇಗೆ ಕಾಣಿಸಿಕೊಂಡಿತೆಂಬ ವಿವರಣೆಗಳಿಲ್ಲ. ಇರಲಿ, ಸುಮಾರು ೧೦೦ ಕೋಟಿ ವರ್ಷಗಳ ಪರ್ಯಂತರ ಅದು ಒಂದೇ ಇದ್ದು, ತಪಸ್ಸು ಮಾಡಿತು. ಅದು ತಪಸ್ಸು ಮಾಡಿದುದರ ಉದ್ದೇಶ ತಾನು ಶಬ್ದ, ರಸ, ಗಂಧವಾಗಬೇಕೆಂದು. ಯಾಕೆಂದರೆ

ಮೊದಲೇ ಆ ಭೂಮಿಯಲ್ಲಿ ಸ್ಪರ್ಶವಿತ್ತು, ರೂಪವಿತ್ತು. ಮುಂದೆ ತಪಸ್ಸಿನ ಫಲವಾಗಿ 'ಅಮಿಬಾ' ಎಂಬ ಏಕಕೋಶ ಜೀವಿ ಕಾಣಿಸಿಕೊಂಡಿತು. ಆ ಏಕಕೋಶ ಜೀವಿಯನ್ನು ಭೂಮಿ ಕಾವುಕೊಟ್ಟು, ಉಣಿಸಿ, ಕುಡಿಸಿ ರಕ್ಷಣೆ ಮಾಡಿತು. ಇದು ಕೋಟಿ ಕೋಟಿ ವರ್ಷ ಹೀಗೆ ನಡೆದ ನಂತರ, ಆ ಅಣು (ಅಮಿಬಾ) ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿತು. ಇದು ಕೆಲವರ ಅಭಿಪ್ರಾಯ.

ಜಡವಾದಿಗಳ (Materialists) ಅಭಿಪ್ರಾಯವೇ ಬೇರೆ. ಇವರು ದೇಹಗಳಿಲ್ಲದ ಜೀವವನ್ನು ಒಪ್ಪುವುದಿಲ್ಲ. ಅವರ ಪ್ರಕಾರ 'ಜೀವ' ಎಂಬುದು ಭ್ರಾಂತಿ (ಭ್ರಮೆ)ಯಂತೆ! ಧಾರ್ಮಿಕವಾದಿಗಳು 'ಜೀವ'ವನ್ನು ಒಂದು ಚೇತನವೆಂದು ಒಪ್ಪಿಕೊಂಡಿರುವರು. "ದೇಹದಲ್ಲಿ ಜೀವ ಇರುವವರೆಗೂ ಶಿವ. ಜೀವ ಹೋದ ನಂತರ ಶವ" ಎನ್ನುವರು. ಆದರೆ ಜಡವಾದಿಗಳು ಈ ಜೀವ ಚೇತನವೆನ್ನುವುದು ಕೇವಲ ತಾತ್ಕಾಲಿಕವಾಗಿ ವ್ಯಕ್ತವಾಗುವಂತಹ ಒಂದು ಭೌತಿಕ ಶಕ್ತಿ (Physical force). ಅದು ಸತ್ತನಂತರ ಶರೀರ ತಣ್ಣಗಾಗುವುದು. ಅರ್ಥಾತ್ ದೀಪದೊಳಗಿನ ಎಣ್ಣೆ ಮುಗಿದ ನಂತರ ದೀಪ ಆರಿ ಹೋಗುವಂತೆ, "ಆರಿದ ದೀಪ ಎಲ್ಲಿಗೆ ಹೋಯಿತು?" ಎಂದು ಕೇಳಿದರೆ ಅವರು ಹೇಳುವುದು, ಅದು ಎಲ್ಲಿಗೂ ಹೋಗಿಲ್ಲ. ಇಲ್ಲವಾಯಿತು ಅಷ್ಟೆ ಎನ್ನುವರು. ಮತ್ತೆ ಕೆಲವೊಬ್ಬರಲ್ಲಿ ಏನಾದರೂ ತಾತ್ವಿಕ ವಿಷಯಗಳ ಬಗ್ಗೆ ಕೇಳಿದರೆ, ಅವರಿಂದ ಸಿಗಬಹುದಾದಂತಹ ಉತ್ತರ 'ಅಕಾಸ್ಮಾತ್' ಎಂತೆಂಬುದು.

ಜೀವಶಾಸ್ತ್ರಜ್ಞರ (Biologist) ಅಭಿಪ್ರಾಯವೇ ಬೇರೆಯಾದದ್ದು. ಇವರದು ಭೂಮಿ, ಜಲ, ಅನಿಲ, ಚರ, ಅಚರ ಇತ್ಯಾದಿಗಳ ವಿಷಯ ಪ್ರಾರಂಭದಲ್ಲಿಲ್ಲ. ಇವರು ಪ್ರಾರಂಭಿಸುವುದು ಆದಿಮಾನವನಿಂದ. ಅದು ಒಬ್ಬರೋ, ಇಬ್ಬರೋ, ಹೆಣ್ಣೋ, ಗಂಡೋ ಇತ್ಯಾದಿಗಳ ಪರಿಪೂರ್ಣ ಮಾಹಿತಿ ತಿಳಿದು ಬಂದಿಲ್ಲ. ಆದರೂ ಅವರು ಹೇಳುವುದು, ಆದಿಮಾನವ ತನ್ನ ವೀರ್ಯದಿಂದ ತನ್ನಂತೆ ಮತ್ತೊಬ್ಬರನ್ನು ಸೃಷ್ಟಿಸಿದ. ಮತ್ತೊಬ್ಬ, ಇನ್ನೊಬ್ಬನನ್ನು, ಇನ್ನೊಬ್ಬರು ಇನ್ನೊಬ್ಬರನ್ನು ಸೃಷ್ಟಿಸಹತ್ತಿದರು. ಹೀಗೆ ಸೃಷ್ಟಿಯ ಕಾರ್ಯ ಮುಂದುವರೆಯಿತು. ಆದಿಮಾನವನಂತೆ, ಅವನ ವೀರ್ಯವಂತೆ. ಇಂತಹ ತೀರ್ಮಾನಗಳನ್ನು ನಾವು ನಂಬಬೇಕು. ನಂಬದೇ ಬೇರೇನಾದರೂ ಶಾಸ್ತ್ರಗಳ ರೀತಿಯಲ್ಲಿ ಹೇಳಹೋದರೆ ಇವರಿಂದ ನಮಗೆ ಸಿಗಬೇಕಾದಂತಹ ಬಹುಮಾನ, ಅವೈಜ್ಞಾನಿಕರು, ಮೌಢ್ಯರು ಎಂತೆಂಬ ಪಟ್ಟ.

ಒಂದು ಕಥೆಯಿಲ್ಲಿ ನೆನಪಿಗೆ ಬರುತ್ತಿದೆ. ಬಾಲವಾಡಿ ಶಾಲೆ (Baby sitting school). ಒಮ್ಮೆ ಮಿಸ್ ಮಕ್ಕಳಿಗೆ ಹೀಗೆ ಹೇಳುವರು, "ಮಕ್ಕಳೇ ಇಂದು ಹುಣ್ಣಿಮೆ. ರಾತ್ರಿ ಚಂದ್ರ ಸುಂದರವಾಗಿ ಕಾಣಿಸುತ್ತಾನೆ. ನೀವು ನಿಮ್ಮಿಮ್ಮ ತಾಯಿಯರನ್ನು ಕೇಳಿ, ಚಂದಿರನನ್ನು ನೋಡಿರಿ" ಎಂತೆಂದು. ಅಂದು ರಾತ್ರಿ ಮಕ್ಕಳೆಲ್ಲ ಅವರವರ ತಾಯಂದಿರನ್ನು ಕೇಳಿ ಚಂದಿರನನ್ನು ನೋಡಿದರು. ಮರುದಿನ ಮಕ್ಕಳು ಶಾಲೆಗೆ ಬಂದರು. ಮಿಸ್ ಕೇಳಿದರು, "ಮಕ್ಕಳೇ ನೀವು ನಿನ್ನೆ ಚಂದ್ರಾಮನನ್ನು ನೋಡಿದಿರಾ?" ಎಂದು. ಮಕ್ಕಳೆಲ್ಲ ಒಟ್ಟಿಗೆ 'ಹೂಂ ಮಿಸ್' ಎಂದು ಕೂಗಿದವು. ಒಂದು ಮಗು ಮಾತ್ರ ಎದ್ದು ನಿಂತು, "ಮಿಸ್ ನಾನು ಚಂದ್ರಾಮನನ್ನು ಜೊತೆಯಲ್ಲೇ ಕರೆತಂದಿರುವೆ" ಎಂದಿತು. ಮಿಸ್‌ಗೆ ಆಶ್ಚರ್ಯವಾಯಿತು. ಜೊತೆಗೆ ಕುತೂಹಲವೂ ಹೆಚ್ಚಿತು. ಕೂಡಲೆ "ಬಾ

ಪುಟ್ಟಾ ತೋರಿಸು" ಎಂದು ಕರೆದರು. ಮಗು ಮಿಸ್ ಬಳಿಗೆ ಬಂದು ತನ್ನ ಬಲಗೈನ ತೋರುಬೆರಳನ್ನು ಮೇಲ್ಮಾಡಿ ಮೇಲೆ ತೋರಿಸುತ್ತಾ! "ಅದೋ ಮಿಸ್ ಚಂದ್ರಾಮ ಅಲ್ಲಿದ್ದಾನೆ" ಎಂದಿತು. ಮಗುವಿನ ಭಾವನೆಯಲ್ಲಿದ್ದ ಚಂದ್ರಾಮನ್ಯಾರೆಂಬುದನ್ನು ಅರ್ಥಮಾಡಿಕೊಳ್ಳುವುದು ಮಿಸ್‌ಗೆ ಬಹಳ ಕಷ್ಟವೇ ಆಯಿತು. ಕೊನೆಗೆ ಅರ್ಥವೂ ಆಯಿತು. ಮಗು ತೋರಿಸಿದ್ದು ತನ್ನ ಬೆರಳನ್ನು. ಏಕೆಂದರೆ ತನ್ನ ತಾಯಿ ಚಂದ್ರಾಮನನ್ನು ತೋರಿಸಲು ಬಳಸಿದ್ದ ಬೆರಳನ್ನೇ ಮಗು ಆ ಬೆರಳನ್ನೇ ಚಂದ್ರಾಮನೆಂದು ಭಾವಿಸಿತ್ತು. ಆದ್ದರಿಂದ ಹಾಗೆ ತೋರಿಸಿತು.

ಇಲ್ಲಿ ಕೇಂದ್ರಗಳು ಎರಡು. ಒಂದು ತೋರಿಸುವ ಬೆರಳು, ಮತ್ತೊಂದು ನೋಡುವಂತಹ ಚಂದ್ರಾಮ. ಒಂದು ನೋಡಲು ಬೇಕಾಗುವಂತಹ ಸಾಧನವು. ಮತ್ತೊಂದು ನೋಡಬೇಕಾದಂತಹ ವಸ್ತು. ಅಥವಾ ಮುಟ್ಟಬೇಕಾದಂತಹ ಗುರಿ. ಗುರಿ ತಲುಪಲು ಸಾಧನ ಬೇಕು. ಆದರೆ ಸಾಧನವೇ ಗುರಿಯಲ್ಲ. ಹಾಗೆ ಸೃಷ್ಟಿಯ ಮೂಲ ತಿಳಿಯಬೇಕಾದರೆ, ಹಲವು ಸಾಧನಗಳು ಬೇಕೇಬೇಕು. ಆದರೆ ಆ ಸಾಧನಗಳೇ ಅಂತಿಮ ಉತ್ತರಗಳಲ್ಲ.

ಒಬ್ಬ ಅನುಭಾವಿ ಹೇಳುತ್ತಾನೆ. **"ಬಲಿತ ಲೌಕಿಕಂಗೆ ಸತಿ ಪುತ್ರಾದಿಗಳೇ ಬ್ರಹ್ಮ"** ಎಂದು. ತನಗಾದ ಅನುಭವ ಬೇರೊಬ್ಬರಿಗಾಗಬಾರದೆಂದೂನೂ ಅಲ್ಲ. ಇಲ್ಲಿ ಜಗತ್ತೇ ನಿಗೂಢವಾಗಿದೆ. ಯಾವೊಂದರ ಗುಟ್ಟನ್ನೂ ಅಷ್ಟು ಸುಲಭವಾಗಿ ಬಿಟ್ಟು ಕೊಟ್ಟಿಲ್ಲ. ಅದಕ್ಕಾಗಿಯೇ ಶರಣರು, ಸಂತರು, ಮಹಾಂತರು, ನಿಗೂಢ ಸತ್ಯವನ್ನರಿಯಲು ಧ್ಯಾನ, ಜಪ, ತಪಸ್ಸಾದಿಗಳನ್ನು ಅನೇಕನೇಕ ವರ್ಷಗಳ ಕಾಲ ಮಾಡಿದರು. ಆದರೆ ಲೌಕಿಕದಲ್ಲಿ ಬಲಿತ ಕೆಲವರು ಶಬ್ದಾದಿ ಪಂಚವಿಷಯಗಳ ಕ್ಷಣಿಕ ಸುಖವನ್ನೇ ಆನಂದವೆಂದು ಭಾವಿಸಿರುವರು. ಬಹುಶ: ಇವರಿಗೆ ತಿಳಿದಿರಲಿಕ್ಕಿಲ್ಲ. ಯೌವನ ಎಂಬುದು ಬಾರದಿದ್ದರೆ ಆ ಕ್ಷಣಿಕ ಸುಖವನ್ನಾದರೂ ಹೇಗೆ ಪಡೆಯುತ್ತಿದ್ದೆವು ಎಂಬುದು? ಶಾಸ್ತ್ರಗಳ ತೀರ್ಮಾನಗಳಾವೂ ಕಾಕತಾಳೀಯವಲ್ಲ. ವೈಜ್ಞಾನಿಕವಾದವು. ಸೃಷ್ಟಿಯ ಬಗ್ಗೆ ತೈತ್ತರೀಯ ಉಪನಿಷತ್ ಹೀಗೆ ಹೇಳಿದೆ. "ತಸ್ಮಾದ್ವಾ ಏತಸ್ಮಾದಾತ್ಮನಾ ಆಕಾಶ: ಸಂಭೂತ: । ಆಕಾಶದ್ವಾಯು: । ವಾಯೋರಗ್ನಿ, ಅಗ್ನೇರಾಪ: । ಅದ್ಭುಪೃಥ್ವೀ । ಪೃಥಿವ್ಯಾ ಓಷಧಯ: । ಓಷಧಿಭ್ಯೋऽನ್ನಂ । ಅನ್ನಾತ್ ಪುರುಷಾ: । ಸ ವ ಏಷ ಪುರುಷೋऽನ್ನ ರಸಮಯ: ॥"

ಆಕಾಶ (ಬಯಲು) ಕ್ಕಿಂತಲೂ ಸೂಕ್ಷ್ಮವಾದ ಪರಶಿವ ಬ್ರಹ್ಮವು. ಅದು ಮೊದಲು ಒಂದೇ ಇತ್ತು. ಅದು ಏಕಮೇವಾದ್ವಿತೀಯವೆಂಬಂತೆ. ಮುಂದೆ ಹೀಗೆಲ್ಲ ಆಗುತ್ತಾ ಬಂದಿತು. ಆ ಪರಶಿವಬ್ರಹ್ಮವು ಮುಂದೆ ಆಕಾಶವಾಯಿತು. ಅದುವೇ ವಾಯು, ಅಗ್ನಿ, ಅಪ್ಪು (ನೀರು), ಪೃಥ್ವಿ ಎಂಬ ಪಂಚಮಹಾಭೂತಗಳಾಯಿತು. ಪೃಥ್ವಿಯ ಮೇಲೆ ಮತ್ತದು ಗಿಡಮರಗಳಾಗಿ ಕಂಡಿತು. ಆ ಗಿಡಮರಗಳಲ್ಲಿ ಅನ್ನವಾಗಿ ಕಾಣಿಸಿಕೊಂಡಿತು. ಆ ಅನ್ನ ಮುಂದೆ ಸಪ್ತಧಾತುಗಳಾಗಿ ಪರಿವರ್ತನೆಯಾಗುತ್ತಾ ಬಂದಿತು. ಆ ಸಪ್ತಧಾತುವುಗಳಲ್ಲಿ ಕೊನೆಯವುಗಳಾದ ಶುಕ್ರ-ಶೋಣಿತಗಳಿಂದ ಜೀವಾತ್ಮ ಹುಟ್ಟಿಕೊಂಡ. ಈ ಜೀವಾತ್ಮನು ಅನ್ನದಿಂದಲೇ ಹುಟ್ಟಿ, ಅನ್ನದಿಂದಲೇ ಜೀವಿಸಿ, ಕೊನೆಗೆ ಅನ್ನವನ್ನೇ ಸೇರಿಬಿಡುವುದರಿಂದ ನಮ್ಮ ದಾರ್ಶನಿಕರು ಅನ್ನವನ್ನೇ 'ಬ್ರಹ್ಮ'

ಎಂದು ಕರೆದಿರುವುದು.

ವೈಜ್ಞಾನಿಕವಾಗಿ ಭೂಮಿ ಒಂದು ಭಾಗವಿದೆ. ನೀರು ಮೂರು ಭಾಗದಷ್ಟಿದೆ. ಆದ್ದರಿಂದಲೇ ಭೂಮಿಯನ್ನು ಅಗೆದರೆ ನೀರು ಸಿಗುವುದು. ಹಾಗೆ ಭೂಮಿಯೊಳಗಿರುವ ನೀರು ದ್ರವರೂಪದಲ್ಲಿರಬೇಕೆಂದರೆ ಅಗ್ನಿತತ್ವ ಇರಲೇಬೇಕು. ಇರದಿದ್ದರೆ ಆ ನೀರಿನ ಸ್ವರೂಪವು ಬರ್ಫದ (ಮಂಜಿನ) ಬಂಡೆಯಾಗಿ ಬಿಡುತ್ತಿತ್ತು. ಹಾಗೆ ಈ ಅಗ್ನಿತತ್ವ (ಬೆಂಕಿ) ಆದರೂ ವಾಯು (ಗಾಳಿ) ಇಲ್ಲದೆ ಇರಲಾರದು. ಇದನ್ನು ಶಾಲೆಯಲ್ಲಿ ಮಕ್ಕಳಿಗೆ ಪ್ರಯೋಗ ಮಾಡಿ ತೋರಿಸುತ್ತಾರೆ. ಅದು ಹೀಗೆ! ಉರಿಯುವ ಮೇಣದ ಬತ್ತಿಯೊಂದಕ್ಕೆ ಗಾಜಿನ ಲೋಟವೊಂದನ್ನು ಬೋರಲಾಗಿ ಮುಚ್ಚಿದಾಗ ಆ ಮೇಣದ ಬತ್ತಿಯು ಗಾಳಿಯ ಅಂಶವೂ ಇಲ್ಲವಾದ ನಂತರ ಆರಿಹೋಗುವುದು. ಹಾಗೆ ಈ ಭೂಮಿಯೊಳಗೆ ಗಾಳಿಯು ಸಂಚರಿಸಬೇಕೆಂದರೆ ಆಕಾಶ (ಬಯಲು) ತತ್ವ ಇರಲೇಬೇಕು. ಇರುತ್ತದೆಯೂ ಸಹ. ಹೀಗೆ ಬಯಲಿನಿಂದ ಗಾಳಿಯು, ಗಾಳಿಯಿಂದ ಬೆಂಕಿ, ಬೆಂಕಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯ ಮೇಲೆ ಗಿಡಮರ, ಗಿಡಮರದಿಂದ ಅನ್ನ, ಅನ್ನದಿಂದ ಜೀವಾತ್ಮ. ಇದು ಸೃಷ್ಟಿಯ ನಿಯಮ.

ಶಾಸ್ತ್ರಗಳು ಹೇಳುತ್ತವೆ "ಯಥಾ ಬ್ರಹ್ಮಾಂಡ ತಥಾ ಪಿಂಡಾಂಡ" ಎಂದು. ಅಂದರೆ ಈ ಬಾಹ್ಯ ಪ್ರಪಂಚ (ಪ್ರಕೃತಿ) ಹೇಗೆ ಪಂಚಮಹಾಭೂತಗಳಿಂದ ಆಗಿದೆಯೋ ಹಾಗೆಯೇ ಈ ನಮ್ಮ ಶರೀರವೂ ಸಹ, ಪಂಚಮಹಾಭೂತಗಳಿಂದ ಆಗಿರುವುದಾಗಿದೆ. ನಮ್ಮ ಮೈಮೇಲಿರುವ ಚರ್ಮವನ್ನು ಉಜ್ಜಿಕೊಂಡರೆ ಮಣ್ಣು ಬರುವುದು, ಅದು ಪೃಥ್ವಿತತ್ವ. ಶರೀರದೊಳಗೆ ರಕ್ತವಿದೆ. ಅದು ಜಲತತ್ವ. ಈ ರಕ್ತ ಹೆಪ್ಪುಗಟ್ಟದಂತೆ ದ್ರವರೂಪದಲ್ಲಿರಬೇಕೆಂದರೆ ಶರೀರದಲ್ಲಿ ಉಷ್ಣತೆ (ಅಗ್ನಿತತ್ವ) ಇರಲೇಬೇಕು. ಅದು ಇರುವುದೂ ಸಹ. ಮಾನವರಲ್ಲಿ ಉಷ್ಣಾಂಶ 98° ಯಷ್ಟಿರಬೇಕು. 98°-88° ಆದರೂ ಬದುಕುವುದಿಲ್ಲ. ಅದು 108° ಆದರೂ ಬದುಕುವುದಿಲ್ಲ. ಕೇವಲ 10° ವ್ಯತ್ಯಾಸದಲ್ಲಿ ಮಾನವನ ಸಾವು ಬದುಕುಗಳಿರುವುದು. ಈ ಉಷ್ಣತೆ (ಅಗ್ನಿತತ್ವ) ಶರೀರದಲ್ಲಿ ಜೋಪಾನವಾಗಿರಬೇಕೆಂದರೆ ಗಾಳಿಯು (ವಾಯುತತ್ವವು) ಇರಲೇಬೇಕು. ಆದುದರಿಂದಲೇ ನಾವುಗಳು ಉಸಿರಾಡುತ್ತಲಿರುವುದು. ಉಸಿರಾಟ ಸರಾಗವಾಗಿ ನಡೆಯಲು ಆಕಾಶ (ಬಯಲು) ತತ್ವ ಇರಲೇಬೇಕು. ಇರುತ್ತದೆಯೂ ಸಹ. "ಜೀವ ಇರುವವರೆಗೂ ಶಿವ, ಜೀವ ಹೋದ ನಂತರ ಈ ದೇಹ ಶವ" ಎನ್ನುವರು. ಪ್ರಾಣವಾಯುವಿನ ಸಂಚಾರವು ನಿಲ್ಲುವ ಪೂರ್ವದಲ್ಲಿ ನಮ್ಮ ಶರೀರದೊಳಗಿನ ಎಪ್ಪತ್ತೆರಡು ಸಾವಿರ (೭೨,೦೦೦) ನಾಡಿಗಳಲ್ಲಿರುವ ಬಯಲು (ಆಕಾಶ) ತತ್ವವು ಇಲ್ಲವಾಗಿಬಿಡುವುದು. ಆಗ ಪ್ರಾಣವಾಯುವಿನ ಸಂಚಾರ ನಿಂತು ಬಿಡುವುದು. ನಂತರ ಮೈ ತಣ್ಣಗಾಗುವುದು. ಅಂದರೆ ಅಗ್ನಿತತ್ವವು ಇಲ್ಲವಾಗುವುದು. ರಕ್ತ ಹೆಪ್ಪುಗಟ್ಟುವುದು. ಕೊನೆಗೆ ಭೂತತ್ವದ ಶರೀರ ಅಸ್ವಸ್ಥಗೊಳ್ಳುವುದು.

ಪಂಚಮಹಾಭೂತಗಳಲ್ಲಿ ಪಂಚತನ್ಮಾತ್ರಯಗಳು ಅಡಕವಾಗಿವೆ. ಅಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆನ್ನುವುವು. ಆಕಾಶತತ್ವದಲ್ಲಿ ಶಬ್ದತನ್ಮಾತ್ರವಿದೆ. ವಾಯುವಿನಲ್ಲಿ ಶಬ್ದ ಮತ್ತು ಸ್ಪರ್ಶ ತನ್ಮಾತ್ರ. ಅಗ್ನಿಯಲ್ಲಿ ಶಬ್ದ, ಸ್ಪರ್ಶ, ರೂಪ ತನ್ಮಾತ್ರ. ಜಲದಲ್ಲಿ ಶಬ್ದ, ಸ್ಪರ್ಶ,

ರೂಪ, ರಸ ತನ್ಮಾತ್ರ. ಪೃಥ್ವಿಯಲ್ಲಿ ಶಬ್ದ, ಸ್ಪರ್ಶ, ರೂಪ ರಸ, ಗಂಧಗಳೆಂಬ ಪಂಚತನ್ಮಾತ್ರಗಳ ವಿಶೇಷ ಗುಣವಿದೆ.

ಎರಡು ಮನೆಗಳ ಮಧ್ಯೆ ಒಂದು ಗೋಡೆಯಿದ್ದರೆ, ಈ ಕಡೆಯವರ ಮಾತು (ಶಬ್ದ) ಆಕಡೆಗೂ, ಆಕಡೆಯವರ ಮಾತು ಈಕಡೆಗೂ ಕೇಳಿಸುವುದಿಲ್ಲ. ಹಾಗೆ ಆ ಗೋಡೆಗೆ ಒಂದು ಸಣ್ಣ ರಂಧ್ರ (ಬಯಲುತತ್ವ)ವಿದ್ದರೆ, ಶಬ್ದತತ್ವದ ಕಾರ್ಯ ಅನುಭವಕ್ಕೆ ಬರುವುದು. ವಾಯುತತ್ವದಲ್ಲಿ ಶಬ್ದವಿದೆ, ಸ್ಪರ್ಶವಿದೆ. ಅಗ್ನಿಯಲ್ಲಿ ಶಬ್ದದ ಕ್ರಿಯೆಯಿದೆ, ಮುಟ್ಟಿದರೆ ಅನುಭವಕ್ಕೆ ಬರುತ್ತದೆ, ನೋಡಿದರೆ ಕಾಣಿಸುತ್ತದೆ. ಆದ್ದರಿಂದ ಅಗ್ನಿಯಲ್ಲಿ ಶಬ್ದ, ಸ್ಪರ್ಶ, ರೂಪಗಳೆಂಬ ಮೂರು ಗುಣಗಳಿವೆ. ನೀರಿನಲ್ಲಿ (ಜಲತತ್ವದಲ್ಲಿ) ಶಬ್ದಕ್ರಿಯೆಯಿದೆ. ಮುಟ್ಟಿದರೆ ಅನುಭವಕ್ಕೆ ಬರುವುದು, ನೋಡಿದರೆ ಕಾಣಿಸುವುದು. ರುಚಿಯ ಅನುಭವವೂ (ರಸಾನುಭವ) ಆಗುವುದು. ಹಾಗೆ ಭೂಮಿಯಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ (ವಾಸನೆ)ಗಳೆಂಬ ಐದೂ ತನ್ಮಾತ್ರಗಳಿರುವುವು.

ಈ ಶಬ್ದಾದಿ ಪಂಚವಿಷಯ (ತನ್ಮಾತ್ರ)ಗಳನ್ನು ಜೀವಾತ್ಮನು ಪಂಚಕರ್ಮೇಂದ್ರಿಯಗಳ ಮೂಲಕ ಪಡೆಯುವವನಾಗಿದ್ದಾನೆ. ಕಿವಿಯಲ್ಲಿ ಬಯಲಿದೆ (ಆಕಾಶತತ್ವವಿದೆ) ಆದ್ದರಿಂದ ಶಬ್ದ ಗ್ರಹಣವಾಗುವುದು. ಶರೀರದ ತುಂಬ ೭೨,೦೦೦ ನಾಡಿಗಳಲ್ಲಿ ವಾಯುವಿನ ಸಂಚಾರವಿದೆ. ಆದ್ದರಿಂದ ಶರೀರ ಪೂರ್ತಿ ಸ್ಪರ್ಶಾನುಭವವಾಗುವುದು. ಯಾವ ಭಾಗದಲ್ಲಿ ವಾಯುವಿನ ಸಂಚಾರವಿರುವುದಿಲ್ಲವೋ, ಆ ಭಾಗವು ಮಾತ್ರ ಸ್ಪರ್ಶಾನುಭವದ ಕೊರತೆಯನ್ನು ಎದುರಿಸಬೇಕಾಗುವುದು. ಉದಾಹರಣೆಗೆ ವ್ಯಕ್ತಿಯ ಯಾವುದೊ ಒಂದು ಭಾಗಕ್ಕೆ ಪಾರ್ಶ್ವವಾಯುವಿನಂತಹ ರೋಗವಿದ್ದರೆ ಸ್ಪರ್ಶಾನುಭವವಾಗುವುದಿಲ್ಲ. ಕಣ್ಣಿನ ಮೂಲಕ ರೂಪತತ್ವದ ಅನುಭವವಾಗುವುದು. ಅಂದರೆ ಕಣ್ಣಲ್ಲಿ ಅಗ್ನಿತತ್ವವು ಇರಬೇಕು. ಇದೆಯೂ ಸಹ. ಯಾಕೆಂದರೆ ಕತ್ತಲನ್ನು ಕತ್ತಲೆಂದು ಗುರುತಿಸಲು ಬೆಳಕಿನ ಸಹಾಯವು ಬೇಕೇಬೇಕು. ಆದ್ದರಿಂದ ಆ ಕಣ್ಣಿನಲ್ಲಿ ಅಗ್ನಿತತ್ವವಿದೆ. ನಾಲಿಗೆಗೆ ರಸಾನುಭವವಾಗುವದು. ನಾಲಿಗೆ ಸದಾ ಜಲತತ್ವದಿಂದ (ತೇವಾಂಶದ ಲಾವಾರಸ) ಕೂಡಿರುತ್ತದೆ. ಕೊನೆಯದಾಗಿ ವಾಸನೆ (ಗಂಧತ್ವವನ್ನು) ಮೂಗಿನ ಮೂಲಕ ತಿಳಿಯುವೆವೆ. ಮೂಗಿನಲ್ಲಿ ಪಂಚತತ್ವಗಳೂ ಇರುವುವು. ಆದ್ದರಿಂದ ಅಲ್ಲಿಂದ ವಾಸನೆಯನ್ನು ತಿಳಿಯಲು ಸಾಧ್ಯವಿದೆ.

ಭಗವಂತನ ಈ ಸೃಷ್ಟಿಯ ಬಗ್ಗೆ ಸಂಕ್ಷಿಪ್ತ ಪರಿಚಯ, ಸಿದ್ಧಾಂತದ ಪ್ರಕಾರ ಪರಶಿವ ಬ್ರಹ್ಮನಿಗೆ ಎರಡು ಅವಸ್ಥೆಗಳು. ಒಂದು ಕೇವಲಾವಸ್ಥೆ, ಮತ್ತೊಂದು ಲೀಲಾವಸ್ಥೆ. ಕೇವಲಾವಸ್ಥೆಯಲ್ಲಿ ಜಗತ್ತು ಮತ್ತು ಜೀವರಾಶಿಗಳು ಏನೇನೂ ಇರುವುದಿಲ್ಲ. ಎಲ್ಲವೂ ಶೂನ್ಯ. ಸರ್ವವೆಲ್ಲವನ್ನು ಶೂನ್ಯನಾದ ತಾನು ತನ್ನೊಳಗಡಗಿಸಿಕೊಂಡು ಬಿಟ್ಟಿರುತ್ತಾನೆ. ಅದು ಹೀಗೆ 'ಏಕಾಕಿನ್ಯೆವ ರಮತೇ' ಎಂಬಂತೆ. ಆ ಪರಶಿವನೊಬ್ಬನೇ ಅನಂತ ಅನಂತ ಕಾಲದ (ಕೋಟಿ ಕೋಟಿ ವರ್ಷಗಳ) ವರೆವಿಗೂ ಇದ್ದ! ಹಾಗೆ ಇದ್ದೂ ಇದ್ದೂ ಒಂದೊಮ್ಮೆ ಬೇಸರವಾಯಿತು. ಆಗ ಆತನಲ್ಲಿ 'ಇದಮ್ ಜಗತ್ ಸೃಜೇಯಮ್' ಎಂಬ ಇಚ್ಛೆಯುಂಟಾಯಿತು. ಹೇಗೆ ಸ್ತಬ್ಧವಾಗಿದ್ದ ಸಮುದ್ರದಲ್ಲಿ ವಾಯುವಿನ ಸಂಪರ್ಕವಾದ ತಕ್ಷಣ ಸೂಕ್ಷ್ಮ ಕಂಪನವು ಉಂಟಾಗುವಂತೆ, ಅಚಲನಾದ

ಪರಮಾತ್ಮನಲ್ಲಿಯೂ, ಸ್ವಲ್ಪ ಚಲನೆಯುಂಟಾಯಿತು. ಆ ಪರಶಿವನ ಚಲನಶಕ್ತಿಗೆ 'ವಿಮರ್ಶಶಕ್ತಿ' ಎಂದು ಕರೆಯುವರು ನಮ್ಮ ದಾರ್ಶನಿಕರು. ಹಾಗೆ ಆತನ 'ಇಚ್ಛಾಶಕ್ತಿ' ರೂಪವಾದ ವಿಮರ್ಶಶಕ್ತಿಯು ಅಂತರಂಗದಲ್ಲಿ 'ಜ್ಞಾನಶಕ್ತಿ'ಯೆಂತಲೂ, ಬಹಿರಂಗದಲ್ಲಿ 'ಕ್ರಿಯಾಶಕ್ತಿ' ಎಂತಲೂ ವಿಕಾಸಗೊಳ್ಳುವುದು.

ಉದಾಹರಣೆಗೆ ಒಬ್ಬ ವ್ಯಕ್ತಿ ಏನನ್ನೂ ಮಾಡದೆ ಅಲುಗಾಡದಂತೆ ಅದೆಷ್ಟೋ ದಿನ ಸುಮ್ಮನೆ ಕುಳಿತಿದ್ದಾನೆಂದು ಭಾವಿಸಿಕೊಳ್ಳೋಣ. ಹೀಗೆ ಬಹುಕಾಲ ಏಕಾಂತವಾಗಿ ಕುಳಿತ ಅವನಿಗೆ ಒಮ್ಮೆ ಬೇಸರವಾಗುವುದು. ಆಗ ಅವನಲ್ಲಿ ಸ್ವಲ್ಪ ಅಲುಗಾಟ (ಚಲನೆ) ಆಗುವುದು. ಆ ಚಲನೆಯ ಅರ್ಥ ಏನಾದರೂ ಮಾಡಬೇಕೆಂಬ ಇಚ್ಛೆಯಾಗಿರುತ್ತದೆ. ಅದನ್ನೇ 'ಇಚ್ಛಾಶಕ್ತಿ' ಎನ್ನುವುದು. ಮಾಡುವ ಕಾರ್ಯ ಏನು? ಅದನ್ನು ಹೇಗೆ ಮಾಡಬೇಕೆಂಬ ಜ್ಞಾನವೇ 'ಜ್ಞಾನಶಕ್ತಿ'. ಈ ಜ್ಞಾನಶಕ್ತಿ ಮತ್ತು ಇಚ್ಛಾಶಕ್ತಿಗಳೆರಡೂ ಅಂತರಂಗದಲ್ಲಿನ ಶಕ್ತಿಗಳು. ಅವೆರಡರ ಪ್ರಭಾವದಿಂದ ಬಹಿರಂಗದಲ್ಲಿ ಕ್ರಿಯಾರೂಪದಲ್ಲಿ ಕಾಣಿಸುವುದು. ಇದೇ 'ಕ್ರಿಯಾಶಕ್ತಿ'ಯು. ಹೀಗೆ ಭಗವಂನು ಕೇವಲಾವಸ್ಥೆಯಿಂದ ವಿಮುಖನಾಗಿ ಲೀಲಾವಸ್ಥೆಯ ಸ್ವರೂಪವನ್ನು ತಾಳಿದಾಗ ಸತ್ವ, ರಜ, ತಮಗಳೆಂಬ ತ್ರಿಗುಣಾತ್ಮಕ ಪ್ರಕೃತಿಯು ಜನಿತವಾಯಿತು.

'ಪ್ರ' ಎಂದರೆ ಪ್ರಪಂಚ ಹಾಗೂ ಸ್ತ್ರೀಯಂತಲೂ ಕರೆಯುವರು. 'ಕೃತಿ' ಎಂದರೆ ಆಕಾರವು. ಅಂದರೆ ಪಂಚಮಹಾಭೂತಗಳ ಆಕಾರವು. ಶಿವನ ಮಾಯೆಯ ಸ್ವರೂಪವು. ಮಾಯೆಯೆಂಬುದು ಸ್ತ್ರೀ. ಆದಿಶಕ್ತಿ ಎನಿಸಿಕೊಳ್ಳುವ ಆ ಜಗನ್ಮಾತೆಯು. 'ನ ಶಿವೇನ ವಿನ: ಶಕ್ತಿ: ನ ಶಕ್ತಿ ರಹಿತ ಶಿವ:' ಶಿವನಿಲ್ಲದೆ ಶಕ್ತಿಯು ಇರಲಾರಳು, ಶಕ್ತಿಯು ಇರದಿದ್ದರೆ ಆ ಪರಶಿವನಿಗೆ ಅರ್ಥವು ಬರಲಾರದು. ಇದನ್ನೇ ಕವಿರತ್ನ ಕಾಳಿದಾಸ ಹೀಗೆ ಹೇಳಿದ್ದಾನೆ.

ವಾಗಾರ್ಥವಿವ ಸಂಪೃಕ್ತೌ ವಾಗಾರ್ಥ ಪ್ರತಿ ಪತ್ತಯೇ ।
ಜಗತ: ಪಿತರೌವಂದೇ ಪಾರ್ವತೀಪರಮೇಶ್ವರೌ: ॥

ವಾಕ್ಯವಿದೆಯೆಂದರೆ ಅರ್ಥವಿರಬೇಕು, ಅರ್ಥವಿದೆಯೆಂದರೆ ವಾಕ್ಯವಿರಬೇಕು. ಹೀಗೆ ವಾಕ್ಯ ಮತ್ತು ಅರ್ಥಗಳು, ಅವಿನಾಭಾವ ಸಂಬಂಧ ಹೊಂದಿರುವಂತೆ, ಈ ಜಗದ ಸೃಷ್ಟಿಗೆ ಶಿವ ಮತ್ತು ಶಕ್ತಿಯರಿಬ್ಬರೂ ಕಾರಣರು. ಆದ್ದರಿಂದ ಆ ಇಬ್ಬರಿಗೂ ಮೊದಲು ವಂದಿಸುವೆನು ಎಂದು ರಘುವಂಶ ಕಾವ್ಯವನ್ನು ಆರಂಭಿಸುವ ಪೂರ್ವದಲ್ಲಿ ಹೀಗೆ ಶಿವಪಾರ್ವತಿಯರಿಬ್ಬರನ್ನೂ ಧ್ಯಾನಿಸಿದ್ದಾನೆ. ಶಿವ-ಶಕ್ತಿಯೆಂದರೆ! ಪುರುಷ ಮತ್ತು ಪ್ರಕೃತಿಯು.

ಚಂದ್ರನಿದ್ದಾನೆಂದರೆ ಚಂದ್ರಿಕೆ (ಬೆಳದಿಂಗಳು)! ಹೂ ಇದೆ ಎಂದರೆ ವಾಸನೆ. ಇವು ಹೇಗೆ ಅವಿನಾಭಾವ ಸಂಬಂಧವನ್ನು ಹೊಂದಿವೆಯೋ ಹಾಗೆ ಶಿವ ಮತ್ತು ಶಕ್ತಿ (ಮಾಯೆ)ಯರು ಅವಿನಾಭಾವ ಸಂಬಂಧವುಳ್ಳವರಾಗಿದ್ದಾರೆ. ಸಿದ್ಧಯ್ಯ ಪುರಾಣಿಕರು ಈ ಅವಿನಾಭಾವ ಸಂಬಂಧದ ಬಗ್ಗೆ ತಮ್ಮ ವಚನವೊಂದರಲ್ಲಿ ಹೀಗೆ ಹೇಳಿದ್ದಾರೆ.

ನಾ ಹುಟ್ಟುವಾ ಮುನ್ನ ನೀ ಹೇಗಿದ್ದೆಯಯ್ಯಾ
ಶಬ್ದ ಹುಟ್ಟದ ಮುನ್ನಿನ್ನ ಅರ್ಥದಂತೆ

ವಾದ್ಯ ಹುಟ್ಟದ ಮುನ್ನಿನ್ನ ನಾದದಂತೆ
ಕುಂಚ ಹುಟ್ಟದ ಮುನ್ನಿನ್ನ ಚಿತ್ರದಂತೆ
ಉಳಿ ಹುಟ್ಟದ ಮುನ್ನಿನ್ನ ಶಿಲ್ಪದಂತೆ
ದೇಹ ಹುಟ್ಟದ ಮುನ್ನಿನ್ನ ಪ್ರಾಣದಂತೆ ಇದ್ದೆಯಯ್ಯಾ
ಸ್ವತಂತ್ರಧೀರ ಸಿದ್ಧೇಶ್ವರಾ
ನಾ ಹುಟ್ಟಿದ ಮೇಲೆ ತಾನೆ
ಅರ್ಥಕ್ಕೆ ಶಬ್ದ-ನಾದಕ್ಕೆ ವಾದ್ಯ
ಚಿತ್ರಕ್ಕೆ ಕುಂಚ-ಶಿಲ್ಪಕ್ಕೆ ಉಳಿ
ನಿನಗೆ ಭಕ್ತದೊರತದು?

ಹೀಗೆ ಶಿವನು ಮೂಲ ಚೇತನವಾದರೂ, ಸೃಷ್ಟಿಯೆಂಬುದು ಶಿವನ ಮಾಯೆಯು. 'ಅಘಟಿತ ಘಟನಾ ಪಟೆಯಸೀ ಮಾಯಾ' ಅಂದರೆ, ಏನು ಬೇಕಾದುದನೆಲ್ಲಾ ಮಾಡಿ ತೋರಿಸುವಂಥದ್ದು ಮಾಯೆಯಾಗಿದೆ. ಅದರ ಬಗ್ಗೆ ತಿಳಿಯೋಣ.

ಸೃಷ್ಠಿ, ಶಿವನೊಬ್ಬನಿಂದಲ್ಲ ಶಕ್ತಿ (ಮಾಯೆ)ಯನ್ನೊಳಗೊಂಡು ನಡೆಯಿತು. 'ಮಾಯೆ' ಎಂದರೆ ಬೇರೇನೂ ಅಲ್ಲ. ಅದು ಈಶ್ವರನ ಶಕ್ತಿ. ಶಿವನದು ಸರ್ವಥಾ ಸುಪ್ತಾವಸ್ಥೆ. ಮಾಯೆ ಸದಾಕ್ರಿಯಾವಸ್ಥೆ. ಇದರ ಬಗ್ಗೆ ಶ್ವೇತಾಶ್ವತರೋಪನಿಷತ್ತು ಹೀಗೆ ಹೇಳಿದೆ.

''ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್ ।
ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥ ೪-೧೦ ॥

ಪ್ರಕೃತಿಯನ್ನು ಮಾಯೆಯೆಂದು ಮಹೇಶ್ವರ (ಶಿವ)ನನ್ನು ಮಾಯಾವಿಯೆಂದು ತಿಳಿಯಬೇಕು. ಈ ಜಗತ್ತೆಲ್ಲವೂ ಅವನ (ಶಿವನ) ಅವಯವಗಳಿಂದ ವ್ಯಾಪ್ತವಾಗಿದೆ.

ಹೌದು, ಯಾವುದು ನಿಜವಾಗಿ ಇಲ್ಲವೋ, ಯಾವುದನ್ನು ಹೀಗೆ ಎಂದು ನಿರ್ಧರಿಸಲಾಗುವುದಿಲ್ಲವೋ, ಅದು ಮಾಯೆಯು ಎಂಬುದು ವೇದಾಂತದ ಮಾತು. ಪ್ರಭು ದೇವರು ಸಹ ಯಾವುದೂ ನನ್ನದಲ್ಲ, ಎಲ್ಲವೂ ನಶ್ವರ ಎಂಬುದನ್ನು ಹೀಗೆ ಹೇಳಿರುವ.

ಹೇಮನಿನ್ನದಲ್ಲ, ಭೂಮಿ ನಿನ್ನದಲ್ಲ
ಕಾಮಿನಿಯು ನಿನ್ನವಳಲ್ಲ, ಇವೆಲ್ಲ ಜಗಕ್ಕಿಟ್ಟ ವಿಧಿ
ನಿನ್ನದೆಂಬುದು ಜ್ಞಾನರತ್ನ ಅದನ್ನು ಧರಿಸಿದೆಯಾದೊಡೆ
ನಿನ್ನಂತಹ ಸಿರಿವಂತರಿಲ್ಲ ಕಾಣಾ ಗುಹೇಶ್ವರಾ ॥

ಮಾಯೆ, ಇದು ಸ್ವಪ್ನಾವಸ್ಥೆಯ ಸ್ವರೂಪ. ಕನಸೊಂದು ಬಿದ್ದ, ಎಚ್ಚರಗೊಂಡನಂತರ ಸ್ವಪ್ನದಲ್ಲಿ ಕಂಡ ಸುಖದು:ಖಗಳಿಲ್ಲ. ವಸ್ತುವ್ಯಕ್ತಿಗಳೂ ಇರುವುದಿಲ್ಲ. ಹೀಗೆ ಈ ನಮ್ಮ ಹುಟ್ಟು ಸಾವುಗಳ ಮಧ್ಯವಿರುವ ಬದುಕು. ಈ ಬದುಕು ಸಹ ಒಂದು ದೊಡ್ಡ ಸ್ವಪ್ನವಿದ್ದಂತೆ. ಹಿಂದಿನದು ಅರಿವಿಲ್ಲ. ಮುಂದಿನದು ಗೊತ್ತಿಲ್ಲ. ಆದರೂ ಇರುವ ಪರ್ಯಂತರ, ಹೇಮ, ಭೂಮಿ,

ಕಾಮಿನಿಯರು ನನ್ನವು ಎಂಬ ಭ್ರಾಂತಿ. ಇದನ್ನೇ ಪ್ರಭುದೇವರು ಮಾಯೆ (ವಿಧಿ) ಎಂದಿರುವುದು.

ರಾಮಕೃಷ್ಣ ಪರಮಹಂಸರಿಗೊಮ್ಮೆ ವಿಕೃತ ಸ್ವರೂಪದ ಮಾಯೆ ಹೀಗೆ ಪ್ರತಿಬಿಂಬಿಸಿದಳಂತೆ. ಅವರೇ ಹೇಳಿರುವಂತೆ ಮೊದಲವರಿಗೆ ಒಂದು ಸಣ್ಣರಂಧ್ರ ಕಾಣಿಸಿತು. ಮತ್ತದು ದೊಡ್ಡದಾಗುತ್ತಾ ಹೋಯಿತು. ಆಮೇಲೆ ಅದೊಂದು ಹೆಣ್ಣಿನ ರೂಪ ತಾಳಿತು. ಆ ಹೆಂಗಸು ಮಗುವೊಂದನ್ನು ಹೆತ್ತಳು. ಹಡೆದ ಆ ಮಗುವನ್ನು ಹುಟ್ಟಿದ ಕೂಡಲೇ ನುಂಗಿದಳು. ಹೀಗೆ ಅವಳು ಲೆಕ್ಕವಿಲ್ಲದಷ್ಟು ಮಕ್ಕಳನ್ನು ಹಡೆದು, ಹಡೆದು ನುಂಗುತ್ತಿದ್ದಳು. ಇದನ್ನು ಕಂಡ ಪರಮಹಂಸರಿಗೆ ಅರ್ಥವಾಗಿತ್ತಂತೆ. ಇವಳು ಮತ್ತಾರಲ್ಲ. ಮಹಾನ್ ಮಾಯೆಯಂತೆಂದು.

ದೇವಿಯ ಪುರಾಣದಲ್ಲೂ ಸಹ ಚಿದಾನಂದವಧೂತರು ಹೀಗೆ ಬರೆದಿರುವರು. ವಶಿಷ್ಠರು ಶ್ರೀರಾಮಚಂದ್ರ ಸಭೆಯಲ್ಲಿ ಕುಳಿತಿರುತ್ತಾರೆ. ಶ್ರೀರಾಮ ವಶಿಷ್ಠರನ್ನು ಮಾಯೆ ಎಂದರೇನು? ಎಂದು ಕೇಳಿದನಂತೆ. ಅದಕ್ಕೆ ವಶಿಷ್ಠರು ಮಾಯೆಯೆಂಬುದು ಮಿಥ್ಯ ಎನ್ನುವರು. ಕೂಡಲೇ ವಶಿಷ್ಠರಿಗೆ ಮಾಯೆಯು ಆವರಿಸುತ್ತಾಳೆ. ವಶಿಷ್ಠರ ಮನ ಘೋರ ಅರಣ್ಯಕ್ಕೆ ಹೋಗುವುದು. ಅಲ್ಲೊಬ್ಬ ಬೇಡರವಳನ್ನು ಕಂಡು ಮೋಹಿತರಾಗುತ್ತಾರೆ. ಮದುವೆ ಆಗುತ್ತದೆ. ಮಕ್ಕಳಾಗುತ್ತಾರೆ. ಕೂಡಲೆ ತಾನೆಂತಹ ತಪ್ಪು ಮಾಡಿದೆನೆಂಬ ಅರಿವಾಗುತ್ತದೆ. ಮರಳಿ ಸಭೆಗೆ ಬರುತ್ತಾರೆ. ಆದರೆ ಮಾಯಾರೂಪದ ಬೇಡರ ಹೆಂಗಸು ಸಭೆಯಲ್ಲಿ ಬಂದು ಹೇಳುತ್ತಾಳೆ, "ಇವರು ನನ್ನನ್ನು ಮದುವೆಯಾಗಿ ಅನೇಕಾನೇಕ ಮಕ್ಕಳನ್ನು ಕೊಟ್ಟು ಹೇಳದೆ, ಕೇಳದೆ ಇಲ್ಲಿಗೆ ಬಂದು ದೊಡ್ಡ ಯತಿಗಳಂತೆ ಕುಳಿತಿದ್ದಾರೆ" ಎಂದೆನ್ನಲು. ವಶಿಷ್ಠರು ಸಭೆಯಲ್ಲಿ ತಲೆತಗ್ಗಿಸುತ್ತಾರೆ. ಕೂಡಲೆ ಶ್ರೀರಾಮಚಂದ್ರನು ಆ ಮಾಯೆಯನ್ನು ಇಲ್ಲವಾಗಿಸುತ್ತಾನೆ.

ಮಾಯೆಯಾದ ತನ್ನ ಸ್ವರೂಪವೇನು? ಎನ್ನುವುದರ ಬಗ್ಗೆ ಸ್ವತಃ ಆದಿಶಕ್ತಿ ಸ್ವರೂಪಳಾದ ಸೀತೆಯೇ ಹೀಗೆ ಹೇಳುತ್ತಾಳೆ. ಅಂದು ಶ್ರೀರಾಮಚಂದ್ರನ ಪಟ್ಟಾಭಿಷೇಕದ ಸಂದರ್ಭ. ಅಯೋಧ್ಯೆಯಲ್ಲಿ ಸಂಭ್ರಮವೋ ಸಂಭ್ರಮ. ಶ್ರೀರಾಮಚಂದ್ರ ರಾವಣನನ್ನು ಸಂಹರಿಸಿ ಸೀತೆಯನ್ನು ಅಯೋಧ್ಯೆಗೆ ಕರೆತಂದ ಸಂತೋಷಕ್ಕಾಗಿ ತನ್ನ ಪ್ರಜೆಗಳಿಗೆ ಉಡುಗೊರೆಗಳನ್ನು ಕೊಡುತ್ತಿದ್ದ. ದೂರ ನಿಂತಿದ್ದ ಹನುಮನನ್ನು ಕರೆದ ರಾಮಚಂದ್ರ "ಏಕೆ ಮಾರುತಿ, ನಿನಗೇನು ಬೇಕಿದೆ? ಅಷ್ಟು ದೂರ ಮೌನವಾಗಿ ನಿಂತು ಏನೋ ಚಿಂತೆ ಮಾಡುತ್ತಿರುವೆಯಲ್ಲಾ? ಯಾಕೆ ಎನ್ನುವನು.

ಹನುಮನು ಹೇಳುತ್ತಾನೆ, "ಪ್ರಭು ನಾನಿಲ್ಲಿಯವರೆಗೆ ನಿಮ್ಮ ದಾಸನಾಗಿ ಸೇವೆಯನ್ನೇನೋ ಮಾಡಿದೆ. ಆದರೆ ನಿಮ್ಮೀ ಜೀವನದ ರಹಸ್ಯವೇ ನನಗರ್ಥವಾಗುತ್ತಿಲ್ಲ. ದಯಮಾಡಿ ಆ ರಹಸ್ಯ ತಿಳಿಸಿದರೆ ಸಾಕು, ಅದೇ ನೀವು ನನಗೆ ಕೊಡುವ ಉಡುಗೊರೆ" ಎಂದ. ಆಗ ಶ್ರೀರಾಮಚಂದ್ರ ತನ್ನ ಪಕ್ಕದಲ್ಲಿದ್ದ ಸೀತೆಯ ಕಡೆಗೆ ನೋಡಿ, "ಸೀತಾ, ಹನುಮನಿಗೆ ನಮ್ಮಿಬ್ಬರ ಜೀವನದ ರಹಸ್ಯ ತಿಳಿಯುವ ಕುತೂಹಲವಾಗಿದೆ. ಆ ರಹಸ್ಯವನ್ನು ತಿಳಿಸಿ ಹನುಮನ ದಾಹವನ್ನು ಹೋಗಲಾಡಿಸು" ಎಂದನು.

ಕೂಡಲೇ ಸೀತೆ ಹನುಮನಿಗೆ ಹೇಳಿದಳು. "ಹನುಮಾ ನಾನು ಬೇರಾರೂ ಅಲ್ಲ. ನಾನು ಜಗದಾದಿ ಶಕ್ತಿ. ಮೂಲಪ್ರಕೃತಿ (ಮಾಯೆ). ಅಕಾರ್ಯನೂ, ಅಚಲನೂ ಆದ

ಮೂಲಪರಶಿವ ಬ್ರಹ್ಮದೊಳಗಿದ್ದುಕೊಂಡು, ಅದನ್ನು ವಿಧವಿಧವಾಗಿ ಮಾರ್ಪಾಡುಗೊಳಿಸುವ ಮಹಾನ್ ಮಾಯಾಶಕ್ತಿ. ಈ 'ರಾಮಾಯಣ' ಎಂಬುದು ನಾನು ಕಲ್ಪಿಸಿದ ಒಂದು ನಾಟಕ. ಶ್ರೀ ರಾಮಚಂದ್ರ ಎಂದೂ ಯಾವತ್ತೂ ಮಾರ್ಪಾಟುಗೊಳ್ಳದ ಶಾಶ್ವತ ಪುರುಷ. ಅಂದರೆ ಈತ ಪ್ರತಿಯೊಂದು ಜೀವಿಗಳ ದೇಹದೊಳಗಿರುವ ಆತ್ಮಚೇತನ. ಆದ್ದರಿಂದ ಈತನನ್ನು 'ಆತ್ಮಾರಾಮ' ಎಂದು ಕರೆಯುತ್ತಿರುವುದು. ಪರಮಾತ್ಮ (ಆತ್ಮ) ಮತ್ತು ಪ್ರಕೃತಿ (ಮಾಯೆ) ಇವುಗಳೆರಡನ್ನು ಸರಿಯಾಗಿ ಅರ್ಥ ಮಾಡಿಕೊಂಡರೆ ಸಾಕು, ರಾಮಾಯಣ ಅರ್ಥವಾದಂತೆ. ಆಧ್ಯಾತ್ಮ ತಿಳಿದಂತೆ" ಇಷ್ಟು ಹೇಳಿ ಸೀತೆ ಮತ್ತೊಂದು ದೃಷ್ಟಾಂತ ಕೊಡುತ್ತಾಳೆ. "ಹನುಮಾ, ಒಂದು ಹಣ್ಣಿದೆ. ಆ ಹಣ್ಣಿಗೆ ಕಿತ್ತಲೆ ಎಂಬ ಹೆಸರಿದೆ. ರೂಪವೂ ಇದೆ, ಆ ಹಣ್ಣನ್ನು ಹಿಂಡಿ ರಸ ತೆಗೆದು ಕುಡಿದ ನಂತರ ಹಣ್ಣೂ ಇಲ್ಲ, ರೂಪವೂ ಇಲ್ಲ, ಹೆಸರೂ ಇಲ್ಲ, ರಸವೂ ಇಲ್ಲ, ರಸದ ರುಚಿ ಮಾತ್ರ ತಾತ್ಕಾಲಿಕವಾಗಿರುತ್ತದೆ. ಆ ರುಚಿ ತೋರಿಸಲೂ ಬಾರದು, ಹೇಳಲಿಕ್ಕೂ ಬಾರದು, ಅನುಭವಕ್ಕೆ ಬರುವುದು. ಹೀಗೆ ಶ್ರೀರಾಮಚಂದ್ರನು. ಈತನ ಅನುಭವ ಒಮ್ಮೆಯಾಯಿತೆಂದರೆ ಸಾಕು ಆ ರುಚಿ ಶಾಶ್ವತವಾಗಿ ಉಳಿದುಬಿಡುವುದು. ಇದುವೇ ಜೀವನ್ಮುಕ್ತಿ" ಹೀಗೆ ತಮ್ಮ (ಪುರುಷ ಮತ್ತು ಪ್ರಕೃತಿಗಳ) ರಹಸ್ಯವನ್ನು ಹನುಮನ ಮುಂದೆ ಬಿಚ್ಚಿಟ್ಟಳು.

"ಮಮೇತಿ ಬಧ್ಯತೇ ಜಂತು: ನ ಮಮೇತಿ ವಿಮುಚ್ಯತೇ" ಈ ಜಡಪ್ರಪಂಚದ ವಸ್ತು ಮತ್ತು ವ್ಯಕ್ತಿಗಳ ಮೇಲೆ ನನ್ನವು ಎಂಬ ಭಾವ ಹೆಚ್ಚಾದಂತೆಲ್ಲಾ ಮಾಯೆಯೂ ಸಹ ದೊಡ್ಡವಳಾಗುತ್ತಾ ಹೋಗುವವಳು. ನನ್ನದೆಂಬ ಮೋಹ ಕಡಿತವಾದಂತೆಲ್ಲ, ಸಣ್ಣವಳಾಗುತ್ತಾ ಬರುವವಳು. ಆಗ ದು:ಖವೂ ಸಹ ಸಣ್ಣದಾಗುತ್ತಾ ಬರುವುದು. ಕೊನೆಗೆ ದು:ಖವು ಇಲ್ಲವಾಗುವುದು. ಸಂಪೂರ್ಣ ಇಲ್ಲವಾದಾಗ ದು:ಖ ನಾಶ, ಆಗ ಆನಂದ ಪ್ರಾಪ್ತಿ ಎಂದು ಶರಣರು ಹೇಳುತ್ತಾರೆ.

ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದೆ ಬೆಂಬತ್ತಿತ್ತು ಮಾಯೆ, ಯೋಗಿಗೆ ಯೋಗಿಣಿಯಾಯಿತ್ತು ಮಾಯೆ. ಸವಣಗೆ ಸವಣಿಯಾಯಿತ್ತು ಮಾಯೆ, ಯತಿಗೆ ಪರಾಕಿಯಾಯಿತ್ತು ಮಾಯೆ, ನಿನ್ನ ಮಾಯೆಗೆ ನಾನಂಜುವವಳಲ್ಲ, ಚನ್ನಮಲ್ಲಿಕಾರ್ಜುನದೇವಾ ನಿಮ್ಮಾಣೆ" (ಸವಣ–ಸನ್ಯಾಸಿ)

"ಬ್ರಹ್ಮ ಘನವೆಂದಡೆ ಬ್ರಹ್ಮನ ನುಂಗಿತ್ತು ಮಾಯೆ, ವಿಷ್ಣು ಘನವೆಂದಡೆ ವಿಷ್ಣುವ ನುಂಗಿತ್ತು ಮಾಯೆ, ರುದ್ರಘನವೆಂದಡೆ ರುದ್ರನ ನುಂಗಿತ್ತು ಮಾಯೆ, ತಾ ಘನವೆಂದಡೆ ತನ್ನ ನುಂಗಿತ್ತು ಮಾಯೆ, ಸರ್ವವೂ ನಿನ್ನ ಮಾಯೆ ಒಬ್ಬರನೊಳಕೊಂಡಿತ್ತೆ ಹೇಳಾ ಗುಹೇಶ್ವರಾ"

ಹೌದು ಮಾಯೆ ಸೃಜಿತ ಶರೀರ, ಮನ, ಬುದ್ಧಿ, ಚಿತ್ತ, ಅಹಂಕಾರ, ವಿಷಯ ಹಾಗೂ ಇಂದ್ರಿಯಗಳು. ಇಂದ್ರಿಯಗಳ ಹೊಡೆತಕ್ಕೆ ಇಂದ್ರನೂ ಸಹ ಸುಸ್ತಾದ. ಕಳಾಹೀನನಾದ ಅಪಮಾನಿಕನಾದ. ಇಂದ್ರಿಯಗಳೈವರಲ್ಲಿ ಎಲುಬಿಲ್ಲದ ಎರಡಂತೂ ಮಹಾಬಲಶಾಲಿಗಳು. ಒಂದು ನಾಲಿಗೆ, ಮತ್ತೊಂದು ಜನನೇಂದ್ರೀಯ.

ಶೈವ ಸಾಹಿತ್ಯಗಳಲ್ಲಿ ಒಂದು ದೃಷ್ಟಾಂತವಿದೆ. ಶಕ್ತಿ (ಮಾಯೆ) ಶಿವನನ್ನು ಕೇಳುತ್ತಾಳೆ.

ಪ್ರಭೂ "ನಿಮ್ಮ ಪ್ರಮಥಗಣಗಳೆಲ್ಲರೂ ಪವಿತ್ರರೇ?" ಎಂದು. ಶಿವ ಹೇಳುತ್ತಾನೆ, "ನಾನೇ ಪವಿತ್ರತೆಯಲ್ಲಿ ಅಪೂರ್ಣನು. ಇನ್ನು ಅವರ ಸಂಗತಿಯನ್ನಾದರೂ ಹೇಗೆ ಹೇಳಲಿ" ಎಂದಾಗ ಶಕ್ತಿ, "ಏಕೆ ಹೀಗೆ ಹೇಳುವಿರಿ ನೀವು ಪವಿತ್ರರಲ್ಲವೆ ಎನ್ನುವುದಕ್ಕೆ ಕಾರಣವೇನು?" ಎಂದು ಕೇಳಿದಾಗ, ಶಿವ ಹೇಳುತ್ತಾನೆ, "ಅದಕ್ಕೆ ಕಾರಣ ನೀನು. ಯಾಕೆಂದರೆ ನಾ ನಿನ್ನೊಂದಿಗೆ ನಡೆಸುತ್ತಿರುವ ಸಂಸಾರ. ಅಲ್ಲದೆ ನಿನ್ನ ಮಾಯಾಪ್ರಪಂಚದಲ್ಲಿ ನೀ ನನಗೆ ಹೋರಿಸಿರುವ ಜವಾಬ್ದಾರಿ ಬೇರೆ. ಇಷ್ಟಕ್ಕಿಂತ ಕಾರಣ ಮತ್ತೇನು ಬೇಕಿಲ್ಲ" ಎಂದು. ಶರಣರು ಸಹ ಹೇಳುತ್ತಾರೆ. ಸಂಸಾರವೆಂಬ ಸಾಗರ ಅದೆಷ್ಟು ಘೋರ ಎನ್ನುವುದನ್ನು ಹೀಗೆ.

**"ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು, ತೇಲಲೀಯದು ಗುಂಡು, ಮುಳಗಲೀಯದು ಬೆಂಡು, ಇಂತಪ್ಪ ಸಂಸಾರ ಶರಧಿಯ ದಾಂಟಿಸಿ, ಕಾಲಾಂತಕನೆ ಕಾಯೋ ಕೂಡಲ ಸಂಗಯ್ಯಾ"**

ಕಾಲಲಿ ಕಟ್ಟಿದ ಗುಂಡು ಅಂದರೆ ನಾನು, ನನ್ನದು, ನನ್ನವರು ಎನ್ನುವ ಸಂಸಾರವು, ಕೊರಳಲಿ ಕಟ್ಟಿದ ಬೆಂಡು. ಅಂದರೆ, ಸಂಸಾರವೆಂಬ ಘೋರ ಸಾಗರವನ್ನು ದಾಟಲು ದೀಕ್ಷಾಗುರುವು ಕಟ್ಟಿದ ಇಷ್ಟಲಿಂಗ (ಲಿಂಗಯಜ್ಞೋಪವೀತ). ಈ ಇಷ್ಟಲಿಂಗ (ದೀಕ್ಷೆ) ಸಂಸಾರ ದಾಟಲೆತ್ನಿಸುತ್ತಿದೆ. ಆದರೆ ಅದಕ್ಕೆ ಅವಕಾಶ ಕೊಡದೆ ಕಾಲಿಗೆ ಕಟ್ಟಿರುವ ಸಂಸಾರವೆಂಬ ಗುಂಡು ತೇಲಿಸಿ ದಡ ಸೇರಲು ಬಿಡುತ್ತಿಲ್ಲ. ಅರ್ಥಾತ್ ವೈರಾಗ್ಯ ಬೆಳೆಯುತ್ತಿಲ್ಲ. ಇಂತಹ ಸಂಧಿಗ್ದ ಸ್ಥಿತಿಯಲ್ಲಿರುವ ನನ್ನನ್ನು ಗುರಿ ಮುಟ್ಟಿಸುವವನು ನೀನೇ ಅಯ್ಯಾ ಎಂತೆಂದು ಆ ಕೂಡಲಸಂಗಯ್ಯನನ್ನು ಬೇಡಿದ್ದಾನೆ.

ಶ್ರೀಧರಾಚಾರ್ಯರು, ಶೈವೋಪಾಸಕರು. ಶಂಕರಾಚಾರ್ಯರ ಪರಂಪರೆಗೆ ಸೇರ್‍ದವರು. ಗೀತೆ ಹಾಗೂ ಭಾಗವತಕ್ಕೆ ಭಾಷ್ಯ ಬರೆದಿರುವರೂ ಸಹ. ಇವರಿಗೆ ಸಂಸಾರಿಗಳಾಗಬೇಕೆಂಬ ಇಚ್ಛೆ ಇರಲಿಲ್ಲ. ಆದರೆ ತಂದೆತಾಯಿಯರ ಬಲವಂತಕ್ಕೆ ಮದುವೆಯಾಗಬೇಕಾಯಿತು. ಮದುವೆಯಾದರು. ಒಂದು ಮಗುವೂ ಆಯಿತು. ಹೀಗಿರಲೊಮ್ಮೆ ಅವರ ಧರ್ಮಪತ್ನಿ ಅಕಾಲ ಮರಣಕ್ಕೊಳಗಾದಳು. ಶವಸಂಸ್ಕಾರಾದಿ ತಿಥಿ ಕಾರ್ಯಗಳೆಲ್ಲವೂ ಮುಗಿದಿದ್ದವು. ಒಂದು ದಿನ ಅವರ ಅಂತರಂಗದಲ್ಲಿ 'ನಾನಿನ್ನು ನಿಶ್ಚಿಂತ, ಸನ್ಯಾಸಕ್ಕೆ ಮಾರ್ಗ ಸಿಕ್ಕಿತು" ಎಂದುಕೊಳ್ಳುವಷ್ಟರಲ್ಲಿ ಅವರ ಮಗುವಿನ ಅಳುವ ಧ್ವನಿ ಕೇಳಿಸಿತು. "ಓಹೋ ಬಿಟ್ಟೆನೆಂದರೆ ಬಿಡದೀ ಮಾಯೆ, ಪುನಃ ನಾ ಸಂಸಾರಿಯೇ ಸನ್ಯಾಸಕ್ಕೆ ಮಾರ್ಗ ಸರಳವಿಲ್ಲ" ಎಂದು ಮನ ನುಡಿಯುತ್ತಿದ್ದಂತೆ ಅಲ್ಲೊಂದು ಘಟನೆ ನಡೆಯಿತು. ತೊಲೆಯ ಮೇಲಿದ್ದ ಒಂದು ಹಲ್ಲಿ ಮೊಟ್ಟೆ ಹಾಕಿತು. ಆ ಮೊಟ್ಟೆ ಶ್ರೀಧರಾಚಾರ್ಯರ ಮುಂದೆಯೇ ಬಿತ್ತು. ನೆಲಕ್ಕೆ ಬಿದ್ದ ಮೊಟ್ಟೆ ಒಡೆದುಕೊಂಡು ಮರಿಯೊಂದು ಹೊರಬಂತು. ಆ ಮರಿ ಹುಟ್ಟಿದ ಕೂಡಲೆ ಅಲ್ಲಿದ್ದ ಒಂದು ನೊಣವನ್ನು ತಿಂದಿತು. ಆಗ ಶ್ರೀಧರಾಚಾರ್ಯರು ತಮ್ಮ ಮನಸ್ಸಲ್ಲಿ ಹೀಗೆ ನಿರ್ಧರಿಸಿಕೊಂಡರು. "ಈಗ ತಾನೆ ಹುಟ್ಟಿಬಂದ ಹಲ್ಲಿಯಮರಿಗೆ ಯಾರೊಬ್ಬರ ಆಶ್ರಯವಿಲ್ಲದೆ ಆಹಾರವನ್ನು ಕೊಟ್ಟಾತ ಆ ಭಗವಂತ" ಅಂದಮೇಲೆ ನನ್ನ ಮಗುವಿನ ಲಾಲನೆ ಪಾಲನೆಯ ಜವಾಬ್ದಾರಿಯೂ ಆತನದ್ದಲ್ಲದೆ ನನ್ನದಾಗಲು ಸಾಧ್ಯವಿಲ್ಲ.

ನಾನು ಸನ್ಯಾಸಿಯಾಗಲು ಆ ಭಗವಂತನೇ ಈ ದೃಶ್ಯವನ್ನು ನನ್ನೆದುರಿಗೆ ತೋರಿಸಿರುವ. ಹೀಗೆ ನಿರ್ಧರಿಸಿ ಮಾಯೆಯ ಮುಸುಗನ್ನು ದೂರಸರಿಸಿ, ಶ್ರೇಷ್ಠಸನ್ಯಾಸಿಗಳೆಂದೆನಿಸಿ ಮಾವನ ಜನ್ಮ ಸಾರ್ಥಕಪಡಿಸಿಕೊಂಡರು.

ಹೌದು, ಮಾತೃಗರ್ಭದಲ್ಲಿದ್ದಾಗ ಪೋಷಿಸಿದ ಆ ಶಿವ ವಿಶ್ವಗರ್ಭಕ್ಕೆ ಕಾಲಿಟ್ಟ ಮೇಲೆಯೂ ಪೋಷಿಸುವವನು. ಹಲ್ಲು ಬರುವುದಕ್ಕಿಂತ ಮುಂಚೆ ತಾಯಿಯ ಮೊಲೆಯಲ್ಲಿ ಹಾಲನ್ನಿಟ್ಟು ರಕ್ಷಣೆಗೈಯುವವನು. ಹಲ್ಲು ಬಂದ ನಂತರ ಆಹಾರ ಕೊಡಲಾರದಷ್ಟು ಕಟುಕನಲ್ಲ ಆ ಪರಮಾತ್ಮ. ಇಷ್ಟು ಅರುವಿಗೆ ಬಂದರೆ ಸಾಕು. ಮಾಯೆ ದೂರದೂರ ಸರಿವಳು. ಆಧ್ಯಾತ್ಮ ಹತ್ತಿರವಾಗುವುದು. ಭಗವಂತನ ಸಾಕ್ಷಾತ್ಕಾರವಾಗುವುದು. ನಿತ್ಯಾನಂದದ ಪ್ರಾಪ್ತಿಯೂ ಲಭ್ಯವಾಗುವುದು. ಆದರೆ ಮನಸ್ಸು ಅಚಲವಾಗಿರಬೇಕು. ಇಲ್ಲದಿದ್ದರೆ ಅಕ್ಕಮ್ಮನು ಹೇಳಿರುವಂತೆ **"ಸವಣಗೆ (ಸನ್ಯಾಸಿಗೆ) ಸವಣಿಯಾಯಿತ್ತು ಮಾಯೆ"**.

ಒಂದು ದೃಷ್ಟಾಂತ. ಊರ ಹೊರಗೊಂದು ಕುಟೀರ. ಅಲ್ಲೊಬ್ಬ ಸನ್ಯಾಸಿಯ ವಾಸ. ಕುಟೀರಕ್ಕೆ ಬಂದು ಹೋಗುತ್ತಿದ್ದ ಭಕ್ತರು ಕೊಟ್ಟದ್ದರಲ್ಲಿಯೇ ಸಂತೃಪ್ತಿಯ ಜೀವನ ನಡೆದಿತ್ತು. ಹೀಗಿರಲೊಮ್ಮೆ ಕುಟೀರದೊಳಗೆ ಹಲವು ಇಲಿಗಳು ಸೇರಿಕೊಂಡಿದ್ದವು. ಆ ಇಲಿಗಳು ಸನ್ಯಾಸಿನ ಬಟ್ಟೆಗಳನ್ನೆಲ್ಲ ಕಡಿದು ಚಿಂದಿ ಚಿಂದಿ ಮಾಡಿದವು. ಅದಕ್ಕಾಗಿ ಬೆಕ್ಕೊಂದನ್ನು ಸಾಕಿದ. ಬೆಕ್ಕಿಗೆ ಹಾಲು ಬೇಕಿತ್ತು. ಹಾಲಿಗಾಗಿ ಹಸುವನ್ನು ಸಾಕಿದ. ಹಸುವನ್ನು ಪೋಷಣೆ ಮಾಡುವುದು ತನ್ನಿಂದಾಗಲಿಲ್ಲ. ಅದಕ್ಕೊಬ್ಬ ಬಡ ಹೆಂಗಸನ್ನು ನೇಮಿಸಿದ. ದಿನಗಳೆದವು. "ಬಿಟ್ಟೆನೆಂದರೆ ಬಿಡದೀ ಮಾಯೆ" ಎನ್ನುವಂತೆ ಅವರಿಬ್ಬರ ಮೇಲೆ ಮನ್ಮಥನ ಪಂಚಬಾಣಗಳ ಪುಷ್ಪವೃಷ್ಟಿಯಾಯಿತು. ಅಂದರೆ ಪ್ರೇಮಾಂಕುರದಿಂದ ಪ್ರಾರಂಭವಾಗಿ ಮದುವೆಯಾಗಿ, ಮಕ್ಕಳಾಗಲು ಅಪ್ಪಟ ಸಂಸಾರಿಯಾದರು.

ನಮ್ಮೆಲ್ಲರ ಸ್ಥಿತಿಯೂ ಇದೇ ಆಗಿದೆ. ಯಾಕೆಂದರೆ ನಮ್ಮ ಮನಸ್ಸಿನ ದೌರ್ಬಲ್ಯತೆಯೇ ಇದಕ್ಕೆ ಕಾರಣ. ೧೨ನೇ ಶತಮಾನದ ಶಿವಶರಣ ಅರುವಿನ ಮಾರಿತಂದೆ ಮನಸ್ಸಿನ ಚಾಂಚಲ್ಯದ ಬಗ್ಗೆ ಹೀಗೆ ಹೇಳುತ್ತಾನೆ.

**"ಎನ್ನ ಹೆಂಡತಿ ಹಾಲು ಕಾಸುವಾಗ ಹಾಲಿನ ಕುಡಿಕೆಯಲ್ಲಿ ಹಾವು ಬಿದ್ದು ಸತ್ತಿತ್ತು. ಹಾಲಿನಲ್ಲಿ ಹಾವಿನ ವಿಷ ತುಂಬಿತ್ತು. ಈ ಕಾರಣ ಮಡದಿಯನು ಬಿಡುವಂತಿಲ್ಲ, ಮಡಕೆಯನು ಹೊಡೆಯುವಂತಿಲ್ಲ, ಹಾಲನು ಕುಡಿಯುವಂತಿಲ್ಲ, ಇದಕ್ಕೆ ಇನ್ನಾವ ಮಾರ್ಗ"** ಎಂದು ಆ ಭಗವಂತನನ್ನು ಕೇಳಿದ್ದಾನೆ.

'ಹೆಂಡತಿ' ಎಂದರೆ ತನ್ನ ಬುದ್ಧಿ. ಹಾಲನ್ನು ಕಾಯಿಸುವಾಗ ಎಂದರೆ ಬುದ್ಧಿಯಲ್ಲಿ ಎದ್ದು ಬರುವ ಆಲೋಚನೆಗಳು. ಹಾಲಿನ ಕುಡಿಕೆ ಎಂದರೆ ನಮ್ಮ ಶರೀರ. "ಹಾವು ಬಿದ್ದು ಸತ್ತಿತ್ತು, ಹಾಲಿನ ಕುಡಿಕೆಯಲ್ಲಿ ಹಾವು ಬಿದ್ದು ಸತ್ತಿತ್ತು" ಹರಿದಾಡುವಂತಹ ಮನಸ್ಸಿನೊಳಗೆ ಶಬ್ದಾದಿ ಪಂಚವಿಷಯಗಳೆನ್ನುವವೇ ವಿಷ. ಹೀಗಿದೆ ಆ ಮಾಯೆಯ ಸ್ವರೂಪ. ಅಂದಮೇಲೆ

"ಉಂಡೂ ಉಪವಾಸಿ ಭೋಗಿಸಿಯೂ ಸನ್ಯಾಸಿ" ಎಂಬಂತೆ. ಅಂದರೆ ಮಡದಿಯನ ಬಿಡದಂತೆ, ಗಡಿಗೆಯನು ಒಡೆಯದಂತೆ, ಹಾಲನ್ನು ಕುಡಿದರೂ ಕುಡಿಯದಂತೆ ಇರುವ ಮಾರ್ಗವನ್ನು ಕರುಣಿಸಯ್ಯಾ ಎಂದು ಭಗವಂತನನ್ನು ಕೇಳಿದ್ದಾನೆ.

ಮಾಯೆ ಸಣ್ಣವಳಲ್ಲ. ಅವಳ ಬಗ್ಗೆ ಹೇಳುತ್ತಾ ಹೋದರೆ ಕೊನೆಯೇ ಇಲ್ಲ. ಆದರೆ ಈ ಅಂಕಣದ ಮುಕ್ತಾಯಕ್ಕೆ ಹೇಳುವುದೊಂದೇ ಮಾತು. ಜಗತ್ತಿನಲ್ಲಿರುವ ಸಮಸ್ತರ ಮನೋಭೂಮಿಕೆಯಲ್ಲಿ ಇಲ್ಲಸಲ್ಲದ ಆಟಗಳನ್ನಾಡಿಸಿ, ನಿಜಗುರಿಯತ್ತ ಹೆಜ್ಜೆ ಹಾಕಲು ಬಿಡದಂತಹ ಮಹಾನ್ ಮಾಟಗಾರ್ತಿಯೇ – ಆ ಮಾಯೆ! "ನಿನ್ನ ಮಾಯೆಗೆ ನಾನಂಜುವಳಲ್ಲ" ಎಂದಿರುವ ಅಕ್ಕಮ್ಮನಂತೆ ನಾವೂ ಸಹ ನಮ್ಮ ಮನಸ್ಸನ್ನು ನಿಶ್ಚಲವಾಗಿಟ್ಟುಕೊಂಡರೆ ಮಾತ್ರ ಮಾಯೆಯೆಂಬ ಮೋಹದ ಪರದೆಯನ್ನು ಹರಿದು ಹಾಕಬಹುದು, ಗುರಿಮುಟ್ಟಬಹುದು.

# ಪಶು–ರುದ್ರಭೂಮಿ

ಪಾಶ್ಚಾತ್ಯ ಪಂಡಿತರು ಯಾವ ಕಾರಣಕ್ಕೂ ಯಾವೊಂದು ದೇಶಗಳ ನಾಗರಿಕತೆಯನ್ನು ೫೦೦೦ ವರ್ಷಗಳಿಗಿಂತ ಹಿಂದೆ ತೆಗೆದುಕೊಂಡು ಹೋಗುವುದೇ ಇಲ್ಲ. ಏಕೆಂದರೆ ಅವರ ಗ್ರಂಥವೆನಿಸಿದ ಬೈಬಲ್ಲಿನ ಆಧಾರದಂತೆ ಈ ಭೂಮಿ ಸೃಷ್ಟಿಯಾಗಿರುವುದು ಕೇವಲ ೬೦೦೦ ವರ್ಷಗಳ ಹಿಂದೆ ಎಂಬುದು ಅವರ ನಂಬಿಕೆ. ನಂಬಿಕೆಯಲ್ಲ! ಅದವರ ಮೊಂಡುವಾದ. ಅವರ ಈ ಮೊಂಡುವಾದದಿಂದ ಸತ್ಯ ಮರೆಮಾಚುವುದು. ತಮ್ಮ ಬೈಬಲ್ಲನ್ನೇ ಅಗ್ರವೆಂದು ತೋರಿಸುವುದು.

ಈಜಿಪ್ಟ್ ಹಾಗೂ ಮೆಕ್ಸಿಕೋ ಜನಾಂಗದವರ ನಾಗರಿಕತೆ ಸುಮಾರು ೪೦,೦೦೦ ವರ್ಷಗಳಷ್ಟು ಹಿಂದೆಯೇ ಅಸ್ತಿತ್ವದಲ್ಲಿದ್ದರೂ ವಿಶ್ವಚರಿತ್ರೆ ಮಾತ್ರ ಈ ನಾಗರಿಕತೆಗಳನ್ನು ಕ್ರಿ.ಪೂ. ೩೦೦೦ ವರ್ಷಕ್ಕಿಂತ ಹಿಂದಕ್ಕೆ ಕೊಂಡೊಯ್ಯುವ ಕೆಲಸ ಮಾಡಿರುವುದಿಲ್ಲ. ಹಾಗೆ ನಮ್ಮ ಭಾರತ ದೇಶದ ನಾಗರಿಕತೆಯನ್ನು ಬರೆದಿರುವಂತಹ ಬ್ರಿಟಿಷರೂ ಸಹ ನಮ್ಮ ನಾಗರಿಕತೆಯನ್ನು ಕ್ರಿ.ಪೂ. ೨೫೦೦ ವರ್ಷಗಳಿಗಿಂತಲೂ ಹಿಂದೆ ಕೊಂಡು ಹೋಗಲು ಅವಕಾಶವನ್ನೇ ಕೊಟ್ಟಿರುವುದಿಲ್ಲ. ಅವರ ಪ್ರಕಾರ ರಾಮಾಯಣ ಕಾಲವು ಕ್ರಿ.ಪೂ. ೧೭೦೦ ವರ್ಷಗಳಾಗಿನದು. ಮಹಾಭಾರತ ಕ್ರಿ.ಪೂ. ೧೪೦೦ ವರ್ಷಗಳಾಗಿನದು. ಅಂದರೆ ಮಹಾಭಾರತಕ್ಕೂ, ರಾಮಾಯಣಕ್ಕೂ ಇರುವ ವರ್ಷಗಳ ಅಂತರ ಕೇವಲ ೩೦೦ ವರ್ಷಗಳಷ್ಟೆ!!

ಭಾರತೀಯರ ನಾಗರಿಕತೆಯ ಸನಾತನ ಕಾಲವನ್ನು ಪರಕೀಯರು ಇಷ್ಟು ಮುರಿದು ಹಾಕಿರುವರು. ಆದರೆ ನಮ್ಮವರೆ ಎನಿಸಿಕೊಳ್ಳುವ ಸ್ವದೇಶಿಗರು ಹಾಗೂ ಸ್ವಧರ್ಮಿಯರು ಆ ಪಾರಂಪರಿಕ ಕಾಲಮಾನವನ್ನು ಮತ್ತಷ್ಟು ಮುರಿದು ಹಾಕುತ್ತಿರುವುದು ನಮ್ಮಗಳ ದುರ್ದೈವವೇ ಸರಿ. ಆದರೆ ಅವರಿಗದು ಹರ್ಷದಾಯಕವಾಗಿರಬಹುದು. ಆದರೆ! ಅವರೊಮ್ಮೆ ನಾನು ನನ್ನ ಧರ್ಮಕ್ಕೆ, ದೇಶಕ್ಕೆ ಕೊಡುತ್ತಿರುವ ಕೊಡುಗೆ ಏನು? ಎಂದು ಪ್ರಶ್ನಿಸಿಕೊಳ್ಳಬೇಕಿತ್ತು.

ವೀರಶೈವ ಧರ್ಮದ ಬಗ್ಗೆ ವ್ಯಾಸಮಹರ್ಷಿಗಳು ಮಹಾಭಾರತದ ಅನುಪರ್ವದಲ್ಲಿ ಧರ್ಮರಾಜ ಮತ್ತು ಭೀಷ್ಮ ಪಿತಾಮಹರ ಬಾಯಿಯಿಂದ ಹೀಗೆ ನುಡಿಸಿದ್ದಾರೆ.

ಕಿಮಾಹು ಭರತ ಶ್ರೇಷ್ಠ ಪಾತ್ರಂ ವಿಪ್ರಾ ಸನಾತನ: ।
ಬ್ರಾಹ್ಮಂ ಲಿಂಗಿನಂ ಚೈವ ಬ್ರಾಹ್ಮಣಂ ವ್ಯಾಽಪ್ಯಲಿಂಗಿನಂ ॥
ಸ್ವವೃತ್ತಿಮಭಿಪನ್ನಾಯ ಲಿಂಗಿನೇಚೇತರಾಯ ಚ
ದೇಹಮಾಹುರ್ಮಹಾರಾಜ ಉಭಾವೇತೌ ತಪಶ್ವಿನೌ

(ಮ.ಭಾ.ಅ.ಶಾ.ಪ. ಅಧ್ಯಾಯ–೨೨)

"ಎಲೈ ಭರತ ಶ್ರೇಷ್ಟನಾದ ಭೀಷ್ಮನೇ, ಲಿಂಗಿ ಬ್ರಾಹ್ಮಣ (ವೀರಮಾಹೇಶ್ವರ, ಜಂಗಮ) ಮತ್ತು ಬ್ರಾಹ್ಮಣ (ವರ್ಣ ಪದ್ಧತಿಯಲ್ಲಿ ಬರುವ ಬ್ರಾಹ್ಮಣ) ಇವರಲ್ಲಿ ದಾನ ತೆಗೆದುಕೊಳ್ಳಲು ಯಾರು ಶ್ರೇಷ್ಠರು?" ಎಂಬ ಧರ್ಮರಾಜನ ಪ್ರಶ್ನೆಗೆ ಭೀಷ್ಮ ಪಿತಾಮಹರು, "ಎಲೈ ಧರ್ಮರಾಜನೇ

ತನ್ನ ಧರ್ಮದಲ್ಲಿ ನಿಷ್ಠೆಯುಳ್ಳ ಲಿಂಗಿ ಬ್ರಾಹ್ಮಣನೇ ಇರಬಹುದು. (ಅಂದರೆ ಲಿಂಗ ಯಜ್ಞೋಪವೀರವನ್ನು ಧರಿಸಿಕೊಂಡವನು) ಅಥವಾ ಅಲಿಂಗಿ ಬ್ರಾಹ್ಮಣನೇ ಇರಬಹುದು (ಲಿಂಗವಿಲ್ಲದ ಬರೀ ಯಜ್ಞೋಪವೀತವನ್ನು ಧರಿಸಿಕೊಂಡವನು) ಇಬ್ಬರೂ ತಪಸ್ವಿಗಳೇ. ಆದ್ದರಿಂದ ಇಬ್ಬರಿಗೂ ದಾನ ಮಾಡಬಹುದು ಎಂದು ಉತ್ತರಿಸಿದ್ದಾನೆ.

**ಶೈಲಾಸೇನ ಮಹಾಭಾಗ ವಿಚಿತ್ರಾ ಲಿಂಗಧಾರಕ: ।**
**ಶವಸ್ಯೋಪರಿ ಲಿಂಗಂಚ ದ್ರೀಯತೇ ಚ ಪುರಾತನೈ ।**
**ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವನಂ॥** (ಸ್ಕಂದ.ಕೇ.ಖಂ.೭–೪೧–೧೨)

ಸ್ಕಂದಪುರಾಣದ ಕೇದಾರಖಂಡದಲ್ಲಿ ಅದೇ ವ್ಯಾಸಮಹರ್ಷಿಗಳು ವೀರಶೈವರು ಆಚರಿಸುವ ಶಿರೋವ್ರತದ ಬಗ್ಗೆ ಹೀಗೆ ಅಚ್ಚರಿಯನ್ನು ವ್ಯಕ್ತಪಡಿಸಿದ್ದಾರೆ. ವೀರಶೈವರು ಜನನಪೂರ್ವ ಅಂದರೆ ಶಿಶುವು ಮಾತೃಗರ್ಭದಲ್ಲಿರುವಾಗ್ಗೆ ಲಿಂಗಧಾರಣ ಕ್ರಿಯೆಯನ್ನು ಮಾಡಿಸಿ ಮತ್ತೆ ಅವರು ಲಿಂಗದೇಹಿಗಳಾಗಿ ಜನಿಸಿ, ಜೀವನ ಪರ್ಯಂತರ ಲಿಂಗಧಾರಿಗಳಾಗಿಯೇ ಜೀವಿಸಿ, ಅವರು ದೇಹವನ್ನು ತ್ಯಾಗ ಮಾಡಿದಾಗ್ಯೂ ಲಿಂಗಸಹಿತ ಶವಸಂಸ್ಕಾರ ಮಾಡುತ್ತಿರುವುದು ವಿಶೇಷವಾಗಿದೆ. ಆಜನ್ಮ ಪರ್ಯಂತರದವರೆಗೂ ಆಚರಿಸುವಂತಹ ಈ 'ಮಹಾವ್ರತ'ವು ಅಚ್ಚರಿ ತರುವಂಥದ್ದಾಗಿದೆ.

ಭಾರತದ ಸಂಶೋಧನಾ ಇಲಾಖೆಯು ಸಿಂಧೂ ನದಿಯ ತೀರದ ಬಯಲಿನಲ್ಲಿ ಉತ್ಖನನ ಮಾಡಿ (ಅಗೆದು ಹೊರತೆಗೆ)ದುದರ ಫಲವಾಗಿ ಹರಪ್ಪಾ ಮೊಹೆಂಜೋದಾರೋ ಪಟ್ಟಣಗಳು ದೊರೆತವು. ಅವು ಕ್ರಿ.ಪೂ. ೫೦೦೦ ವರ್ಷಗಳ ಹಿಂದಿನ ಸಂಸ್ಕೃತಿಯು ಎಂದು ಸಂಶೋಧನೆಯಿಂದ ತಿಳಿದು ಬಂದಿತು. ಸುಮಾರು ೭೦೦೦ ವರ್ಷಗಳಷ್ಟು ಹಳೆಯದ್ದಾಗಿದೆ. ಪ್ರಪಂಚಕ್ಕೆಲ್ಲ ಪ್ರಖ್ಯಾತವಾದ ದ್ರಾವಿಡ ನಾಗರಿಕತೆಗಳಿಂದ ಕೂಡಿದದು, ಎಂಬುದು ಇತಿಹಾಸ ಸಂಶೋಧಕರಾದ ರುಮೇಯು, ರಷ್ಯ ಮೊದಲಾದ ವಿದ್ವಾಂಸರ ಅಭಿಪ್ರಾಯವಾಗಿದೆ. ಆ ನಗರಗಳಲ್ಲಿ 'ರುದ್ರಪಶುಪತಿ' ಯ ಭಾವಚಿತ್ರಗಳನ್ನು ಪರಿಶೋಧಿಸಿ ಬೆಳಕಿಗೆ ತಂದಿದ್ದಾರೆ. ಮ್ಯಾಕ್ಸ್‌ಮುಲ್ಲರ್, ಮಾರ್ಟಿಯರ್, ಬ್ಯೂಲರ್, ವಿಲ್ಲರ್ ಮುಂತಾದವರ ಪರಿಶೋಧನೆಯದು. ಅಲ್ಲಿ ವೀರಶೈವರ ಧಾರಣಕ್ಕೆ ಯೋಗ್ಯವಾದ ಚಿಕ್ಕಚಿಕ್ಕ ಲಿಂಗ (ಪೀಠಿಕೆ) ಗಳೂ ಸಹ ಸಿಕ್ಕಿರುವುವು ಎಂದು ಹೇಳುವರು. ಅಂದರೆ ಆಗಲೂ ಲಿಂಗಧಾರಿಗಳಿದ್ದರು; ಹಾಗೂ ವೀರಶೈವ ಧರ್ಮ ಪ್ರಚಲಿತದಲ್ಲಿತ್ತೆಂದು ತಿಳಿದುಬರುವುದು. ಶ್ರೀ ಕೆ.ಎಸ್. ದೀಕ್ಷಿತರು ಬರೆದಿರುವ ''ಪ್ರೀ ಹಿಸ್ಟಾರಿಕ್ ಸಿವಿಲಿಜೇಷನ್' ಎಂಬ ಗ್ರಂಥದಲ್ಲಿ ಲಿಂಗಗಳು 'ಶಿವಶಕ್ತಿ' ಎಂದು ಹೇಳುತ್ತಿರಬೇಕು ಎಂದು ಬರೆದಿರುವರು.

**ರುದ್ರ: ಪಶುನಾಮಾಧಿ: ಪತಿರಿತಿ ವಯಂಬ್ರಹ್ಮಾದಯ: ।**
**ಸರ್ವೇ ಪಶವ: ಅಸ್ಮಾಕಂ ತ್ವಮೇಕ: ಪತಿರೀತಿ: ॥** (ಯಜುರ್ವೇದ)

ಲಿಂಗ ಸ್ವರೂಪನಾದ ರುದ್ರದೇವನು ಜೀವಾತ್ಮರಿಗೆಲ್ಲ ಪತಿಯು (ಅಂಗಸತಿ–ಲಿಂಗಪತಿ ಸಿದ್ಧಾಂತದಂತೆ) ಜೊತೆಗೆ ರುದ್ರದೇವನು ಪತಿಧರ್ಮಿ ಹಾಗೂ ಅನಾದಿ ವೀರಶೈವಕರ್ತನೆಂದು ಹೇಳಿದಂತಿದೆ. ಏಕೆಂದರೆ ಪರಮೇಶ್ವರ ಆಗಮದಲ್ಲಿ ಹೀಗಿದೆ.

ಅವಧೂತಶ್ಚ, ಸನ್ಯಾಸಿ, ಯೋಗಿ, ಪಾಶಪತ: ಶ್ರಿವ:
ಲಿಂಗೀ, ವಿರೋ, ವೀರಶೈವೋ ಮಹಾಮಹೇಶ್ವರೋ ಯತಿ:
ಪರ್ಯಾಯ ನಾಮಾನ್ಯೇತಾನಿ ವೀರಶೈವಸ್ಯಯೋಗಿನ: ॥ (ಪಾರಮೇಶ್ವರಾಗಮ)

ಅವಧೂತ ಸನ್ಯಾಸಿ ಯೋಗಿಪಾಶುಪತ, ಶೈವ, ಲಿಂಗಿ, ವೀರಶೈವ, ಮಹೇಶ್ವರ, ಯತಿ. ಈ ಹತ್ತು ಪರ್ಯಾಯ ನಾಮಗಳು ಈ 'ವೀರಶೈವ'ದ ಪದಕ್ಕೆ ಹೊಂದುವುಗಳಾಗಿವೆ. ಹೀಗೆ ಇತಿಹಾಸಗಳಲ್ಲಿ ವೀರಶೈವ ಧರ್ಮದ ಕುರುಹವನ್ನು ಕಾಣಬಹುದಾಗಿದೆ. ಈ ಶೈವ (ಶಿವ) ಹಾಗೂ ವೀರಶೈವ ಪರಂಪರೆಗಳಲ್ಲಿ 'ಪಾಶುಪತ' ವೆಂಬ ಸಿದ್ಧಾಂತವೊಂದು ಅಡಕವಾಗಿದೆ. ಆ ಸಿದ್ಧಾಂತದ ಬಗ್ಗೆ ಸಂಕ್ಷಿಪ್ತ ಪರಿಚಯ.

'ಪಶು-ಪಾಶ-ಪತಿ' ಇದರ ಪರಿಪೂರ್ಣ ಜ್ಞಾನವೇ ಪಾಶುಪತ ಸಿದ್ಧಾಂತದ ತಿರುಳು. ಈ ಬಗ್ಗೆ ಪಾರಮೇಶ್ವರಾಗಮದಲ್ಲಿ ಶ್ಲೋಕವೊಂದು ಹೀಗಿದೆ.

ಪಶು-ಪಾಶ-ಪತಿಜ್ಞಾನಂ ಜ್ಞಾನ ಮಿತ್ಯಭಿಧೀಯತೇ ।
ಷಡದ್ವ ಶುದ್ಧಿರ್ವಿಧಿನಾ ಗುರ್ವಾಧೀನಾ ಕ್ರಿಯೋಚ್ಯತೇ ॥ (ವಿರಮಹೇಶ್ವರಾಗಮ)

ಪಶು-ಪಾಶ-ಪತಿ ಜ್ಞಾನವೇ ನಿಜವಾದ ಜ್ಞಾನವು. ತನುತ್ರಯ, ಜೀವತ್ರಯ, ಲಿಂಗತ್ರಯ ಜ್ಞಾನ, ಶಿವಧರ್ಮದ ಶಿವಾಗಮಿಕ ಜ್ಞಾನವೇ ನಿಜಜ್ಞಾನವು. ದೀಕ್ಷಾತ್ರಯಗಳಿಂದ ಮಲತ್ರಯಗಳನ್ನು ಕಳೆದುಕೊಂಡು 'ಪಶು' ತನವು ಪರಿಹಾರವಾಗಿ 'ಪತಿ'ತನವು ಪ್ರಾಪ್ತವಾಗಬೇಕು. (ಜೀವ ಭಾವವೇ ಪಶುಭಾವವು. ಶಿವಭಾವವೇ ಪತಿಭಾವವು) ಇದೇ ವೀರಶೈವಧರ್ಮದೊಳಗಿನ ಒಂದು ಅಂಗ. ಅದೇ 'ಪಾಶುಪತ' ಸಿದ್ಧಾಂತವು.

'ಪಶು' ಎಂದರೆ ಜೀವ. 'ಪಾಶ' ಎಂದರೆ ಮಲ, 'ಪತಿ' ಎಂದರೆ ಪರಶಿವ. ಅಂದರೆ ಜೀವಾತ್ಮನು ಆಣವ, ಮಾಯೆ, ಕಾರ್ಮಿಕಗಳೆಂಬ ತ್ರಿಮಲಗಳಿಂದ ಬಂಧಿತನಾಗಿರುವನು. ಆದ್ದರಿಂದ ತನ್ನ ಮೂಲ ಸ್ವರೂಪವನ್ನು ಮರೆತಿರುವನು. ಆ ಕಾರಣ ಶ್ರೀ ಗುರುವಿನಿಂದ ವೇದಾ, ಮಂತ್ರ ಮತ್ತು ಕ್ರಿಯೆಗಳೆಂಬ ತ್ರಿವಿಧ ದೀಕ್ಷೆಯನ್ನು ಪಡೆದಾಗ ಪರಿಶುದ್ಧನಾಗಿ, ಜೀವ (ಪಶು)ಭಾವ ಅಳಿದು, ಪತಿ (ಶಿವ)ಭಾವ ಹೊಂದುವನು.

ತನುತ್ರಯವೆಂದರೆ ಕಾರಣ-ಸೂಕ್ಷ್ಮ-ಸ್ಥೂಲ ಎಂಬ ಮೂರು ಶರೀರಗಳು. ಇವನ್ನು ವೀರಶೈವ ಧರ್ಮದಲ್ಲಿ ಯೋಗಾಂಗ, ಭೋಗಾಂಗ, ತ್ಯಾಗಾಂಗಗಳೆಂದು ಕರೆದಿರುವರು. ಗುರುವು ತನ್ನ ಅಮೃತ ಹಸ್ತವನ್ನು ಶಿಷ್ಯನ ಬ್ರಹ್ಮಸ್ಥಾನದ ಮೇಲಿರಿಸಿ, (ಹಸ್ತಮಸ್ತಕಯೋಗ) ತನ್ನ ಕೃಪಾದೃಷ್ಟಿಯ ಅವಲೋಕನದಿಂದ ಶಿಷ್ಯನಲ್ಲಿನ ಆಣವಮಲ (ನಾನು ಜೀವಾತ್ಮ ಎಂಬ ಅಣುಭಾವ)ವನ್ನು ನಶಿಸಿದಾಗ ಶಿಷ್ಯನಲ್ಲಿ 'ಶಿವೋऽಹಂ' ಭಾವೋತ್ಪತ್ತಿಯಾಗುವುದು. ಇದು ಭಾವಲಿಂಗ ಎನಿಸುವುದು. (ವೇದಾದೀಕ್ಷೆಯಲ್ಲಿ ಏಳು ವಿಧವಾದ ದೀಕ್ಷೆಗಳಿವೆ. ಹೆಚ್ಚಿನ ವಿವರಗಳಿಗೆ ಕಾಶಿ ಜಗದ್ಗುರುಗಳವರ ಶ್ರೀ ಸಿದ್ಧಾಂತ ಶಿಖಾಮಣಿಯ ಪ್ರವಚನ ಪ್ರಭೆಯೆಂಬ ಗ್ರಂಥವನ್ನು ನೋಡಿರಿ) ಮಂತ್ರೋಪದೇಶ ಪ್ರಧಾನವಾದ ದೀಕ್ಷೆಯು ಮಂತ್ರದೀಕ್ಷೆಯು. ಇದರ ಪ್ರಭಾವದಿಂದ ಶಿಷ್ಯನ ಸೂಕ್ಷ್ಮ ಶರೀರದಲ್ಲಿನ (ಮನಸ್ಸಿನಲ್ಲಿನ) ಮಾಯಾಮಲವು ನಿವೃತ್ತಿಯಾಗಿ (ಪ್ರಾಕಾಲಿಂಗವು

ಅಳವಡುತ್ತದೆ. ಈ ದೀಕ್ಷೆ ಭೋಗಾಂಗ ದೀಕ್ಷೆಯು. ಕ್ರಿಯಾಪ್ರಧಾನವಾದ ದೀಕ್ಷೆಯು ಕ್ರಿಯಾ ದೀಕ್ಷೆಯಾಗಿದೆ. (ಈ ದೀಕ್ಷೆಯಲ್ಲಿಯೂ ಸಹ ಏಳು ಅವತಾರಗಳಿರುವುವು.) ಈ ದೀಕ್ಷೆಯಿಂದ ಶಿಷ್ಯನಲ್ಲಿನ ಕಾರ್ಮಿಕಮಲವು ನಾಶವಾಗುವುದು. ಈ ದೀಕ್ಷೆಗಳಿಂದ ಶಿಷ್ಯನ ಪೂರ್ವದ ಮಾಂಸಪಿಂಡವು ನಾಶವಾಗಿ ಮಂತ್ರಪಿಂಡವಾಗುವುದು. ಇಷ್ಟಲಿಂಗದಲ್ಲಿ ಆತ್ಮಸ್ವರೂಪವನ್ನು ಅನುಭವಿಸುವಂತೆ ಶಿಷ್ಯನ ಮನಸ್ಸಿನಲ್ಲಿ ಮಾಡುವ ಉದ್ದೇಶವೇ ಈ ದೀಕ್ಷಾಕ್ರಿಯೆಯಾಗಿದೆ. ಜೀವಾತ್ಮನ ಪಶು ಭಾವ ಕಳೆದು ಪತಿ ಭಾವ ಉತ್ಪತ್ತಿ ಮಾಡುವ ಕ್ರಿಯೆಯ ಬಗ್ಗೆ ಸಂಸ್ಕೃತ ಕವಿಯೊಬ್ಬ ಹೀಗೆ ಹೇಳುತ್ತಾನೆ.

**ಆಹಾರ ನಿದ್ರ ಭಯ ಮೈಥುನಂ ಚ ಸಾಮಾನ್ಯಮೇತತ್ ಪಶುಭಿರ್ನರಾಣಾಮ್।**
**ಜ್ಞಾನ ಹಿತೇಷಾಮಧಿಕೋ ವಿಶೇಷಾ: ಜ್ಞಾನೇನಹೀನ ಪಶುಭಿ: ಸಮಾನ ॥**

ಕೇವಲ ಊಟ, ನಿದ್ರೆ, ಭಯ ಮತ್ತು ಮೈಥುನ (ಸಂತಾನೋತ್ಪತ್ತಿ) ಇವು ಮಾತ್ರವೇ ಮನುಷ್ಯನಿಗೂ ಸಹ ಪಶುವಿನಂತೆ ಸಾಮಾನ್ಯ ಧರ್ಮಗಳಾಗಿಬಿಟ್ಟವು. ಜ್ಞಾನದಲ್ಲಿ ಅಧಿಕವಾದ ವಿಶೇಷಜ್ಞಾನವು (ಆತ್ಮಜ್ಞಾನವು) ಇದನ್ನರಿಯದೆ, ಕೇವಲ ಅವುಗಳ ವ್ಯಾಪಾರಾದಿಗಳನ್ನು ಮಾಡುತ್ತಿರುವ ಮನುಷ್ಯನೂ ಸಹ ಪಶುವಿಗೆ ಸಮಾನನು ಎಂದು ಹೇಳಿರುವನು. ಬಸವಣ್ಣನವರೂ ಸಹ ತನ್ನ ನೆಚ್ಚಿನ ದೈವ ಆ ಕೂಡಲ ಸಂಗಮನಲ್ಲಿ ಹೀಗೆ ಕೇಳಿಕೊಳ್ಳುತ್ತಾರೆ. ಶಬ್ದಾದಿ ಪಂಚವಿಷಯಗಳಲ್ಲಿ ಮೋಹಿತನಾಗಿರುವ ನಾನೂ ಸಹ ಪಶುವಿದ್ದಂತೆ. ಆದ್ದರಿಂದ ನನಗೆ ಅಂತಹ ಭಾವ ಮೂಡಿಬಾರದಂತಹ ಬುದ್ಧಿಯನ್ನು ಅನುಗ್ರಹಿಸು. ಎಂಬ ರೀತಿಯಲ್ಲಿ ಈ ವಚನದಲ್ಲಿ ಹೇಳಿರುವನು.

**ವಿಷಯವೆಂಬ ಹಸುರೆನ್ನ ಮುಂದೆ ತಂದು ಪಸರಿಸಿದೆಯಯ್ಯಾ**
**ಪಶುವೇನು ಬಲ್ಲದು? ಹಸಿರೆಂದುಳಿಸುವುದು**
**ವಿಷಯ ರಹಿತವನೆ ಮಾಡಿ ಭಕ್ತಿರಸವ ದಣಿಯ ಮೇಯಿಸಿ**
**ಸುಬುದ್ಧಿಯೆಂಬ ಉದಕವನೆರೆದು**
**ನೋಡಿ ಸಲಹಯ್ಯಾ ಕೂಡಲ ಸಂಗಮದೇವಾ ॥**

ಬಹುಶ: ಶಿವನ ಎಲ್ಲಾ ದೇವಾಲಯಗಳಲ್ಲಿ ಶಿವಲಿಂಗದ ಎದುರಿಗೆ, ನೇರವಾಗಿ ಒಂದು ನಂದಿ ವಿಗ್ರಹವಿರುತ್ತದೆ. ಅದು ಮತ್ತೇನಲ್ಲ, 'ಪಶುಪತಿ' ಸಿದ್ಧಾಂತದ ಕುರುಹು. ನಂದಿ, ಪಶು, ಶಿವಲಿಂಗ, ಪತಿ! ಪಶು ಪತಿಯಲ್ಲಿ ಸಮರಸವಾಗಲು ನಿರಂತರ ಯೋಗ ನಡೆದಿದೆ. ಶಿವನಿಗಿಂತ ಶಿವಶರಣ ಶ್ರೇಷ್ಟನಾದ್ದರಿಂದ ಶಿವನ ಪೂರ್ವ ಶಿವಶರಣರ ದರ್ಶನ ಮಾಡುವುದು ಬಹಳ ಶ್ರೇಷ್ಟ. ಆದ್ದರಿಂದ ಶಿವಾಲಯಗಳಲ್ಲಿ ಶಿವನಿಗಿಂತ ಮೊದಲು ನಂದಿಯ ದರ್ಶನ ಮಾಡಬೇಕೆಂಬುದು ಈ ಕೆಳಗಿನ ಶ್ಲೋಕದ ಉದ್ದೇಶ.

**ವೃಷಸ್ಯ ವೃಷಣಂ ದೃಷ್ಟ್ವಾ ಈಶ್ವರಸ್ಯಾವಲೋಕನಂ ।**
**ಶೃಂಗ ಮಧ್ಯೇ ಶಿವಂದೃಷ್ಟ್ವಾ ಕೈಲಾಸಂ ಭವತಿದೃವಂ ॥**

ಶಿವನನ್ನು ಯಾವಾಗಲೂ ನಂದೀಶ್ವರನ ಕೊಂಬುಗಳ ಮಧ್ಯೆದಲ್ಲಿ ನೋಡಬೇಕು.

ಪ್ರತಿತಿಂಗಳ ಮಾಸ ಶಿವರಾತ್ರಿ, ದಕ್ಷಿಣಾಯನ ಪುಣ್ಯಕಾಲಧಲ್ಲಿ ಮತ್ತು ಮಹಾಶಿವರಾತ್ರಿಯಂದು ನೋಡಿದರೆ ಶಿವಸಾಯಜ್ಯ ಪ್ರಾಪ್ತವಾಗುವುದು. ಮತ್ತೊಂದು ಶ್ಲೋಕವು ಶಿವನ ಪೂರ್ವ ನಂದಿ ದರ್ಶನ ಮಾಡಿಕೊಳ್ಳಬೇಕೆಂದು ಹೀಗೆ ಹೇಳಿದೆ.

ನಂದೀಶ್ವರ ನಮಸ್ತೇಸ್ತು ಸಾಂದ್ರಾನಂದ ಪ್ರದಾಯಕ ।
ಮಹದೇವಸ್ಯ ಸೇವಾರ್ಥಂ ಅನುಜ್ಞಾಂ ದಾತಮರ್ಹಸಿ ॥

ನಂದೀಶ್ವರನನ್ನು ನೋಡಿ ಮೊದಲು ಪ್ರಾರ್ಥನೆ ಮಾಡಿ. ಆನಂತರ ಶಿವದರ್ಶನ ಪಡೆಯಬೇಕು.

ವೀರಶೈವ ಧರ್ಮಾಚಾರಿಗಳಾದ ನಮ್ಮ ಹಿಂದಿನವರು (ಹಿರಿಯರು) ಇಷ್ಟಲಿಂಗ ಪೂಜೆ ಮಾಡಿಕೊಳ್ಳುವ ಸಂದರ್ಭದಲ್ಲಿ ವಾಮ (ಎಡ) ಹಸ್ತದಲ್ಲಿ ಇಷ್ಟಲಿಂಗವನ್ನು ಇಟ್ಟುಕೊಂಡು ಮತ್ತೆ ಆ ಇಷ್ಟಲಿಂಗಕ್ಕೂ ಮತ್ತು ತಮ್ಮ ಮುಖಕ್ಕೂ ಎದುರಾಗುವಂತೆ ನಂದಿಯ ವಿಗ್ರಹವಿರುವ ಬೆಳ್ಳಿಯ ಉಂಗುರವೊಂದನ್ನು ಅನಾಮಿಕ ಬೆರಳಿಗೆ ಹಾಕಿಕೊಂಡು ಇಷ್ಟಲಿಂಗಾನುಸಂಧಾನ ಮಾಡುತ್ತಿದ್ದರು.

ಬಹುಶ: ಕೆಲವರು ಇಷ್ಟಲಿಂಗವು ನಮ್ಮ ಕಡೆಗೆ ಮುಖವಾಗಿದೆ ಎಂದು ಭಾವಿಸಿರಬಹುದು. ಇಲ್ಲ ಅದು (ಲಿಂಗ) ನಮಗೆ ಬೆನ್ನು ಮಾಡಿಯೇ ನಮ್ಮ ಅಂಗೈ ಮೇಲಿರುತ್ತದೆ. ಯಾಕೆಂದರೆ ಇಷ್ಟಲಿಂಗದ ಜಲಧಾರೆ ಹೆಬ್ಬೆರಳ ಕಡೆ ಮಾಡಿಕೊಂಡು ನಮ್ಮ ಎಡ ಹಸ್ತದಲ್ಲಿ ಲಿಂಗ ಧರಿಸುವುದರಿಂದ ಲಿಂಗದ ಹಿಂಭಾಗವೇ ನಮ್ಮ ಮುಖದ ಕಡೆಗೆ ಇರುತ್ತದೆ. ಇದು ಅದ್ವೈತದ ಸಿದ್ಧಾಂತವಾಗಿದೆ. 'ಶೀವೋsಹಂ' ತನ್ನನ್ನು ತಾನು ಪೂಜೆ ಮಾಡಿಕೊಳ್ಳುವುದು, ಅರ್ಥಾತ್ ಆತ್ಮದರ್ಶನ. ಉದಾಹರಣೆಗೆ ಗುರುಗಳೊಬ್ಬರು ಪೂಜೆಗೆ ಕುಳಿತಿರುತ್ತಾರೆ ಎಂದು ಭಾವಿಸಿಕೊಳ್ಳೋಣ. ಆಗ ಯಾರೋ ಒಬ್ಬರು ಬಂದು ಸೇವಾಮರಿಯನ್ನು "ಗುರುಗಳು ಏನ್ಮಾಡ್ತಾರೆ?" ಎಂದು ಪ್ರಶ್ನಿಸುವರು. ಅದಕ್ಕುತ್ತರವಾಗಿ ಅವನು "ಪೂಜೀಗೆ ಕುಂತಾರೆ" ಅಥವಾ "ಪೂಜೆ ಮಾಡ್ಕೊಂಬಾಕ ಹತ್ಯಾರ" ಎಂದು ಹೇಳುವನು. ಯಾರ ಪೂಜೆಗೆ ಕುಂತಾನ? ತನ್ನ ಪೂಜೆಗೆ ತಾನು ಕುಂತಾನ! ಅಂದರೆ ಇಷ್ಟಲಿಂಗ ಆತನ ಆತ್ಮ ದರ್ಶನ ಮಾಡಿಸುವಂತಹ ಒಂದು ಕನ್ನಡಿ ಮಾತ್ರ.

ಇದು ನರ-ಹರನಾಗುವ, ಜೀವ-ಶಿವನಾಗುವ, ಅಂಗ-ಲಿಂಗವಾಗುವ, ಪಶು-ಪತಿಯಾಗುವುದೇ, ವೀರಶೈವ ಸಿದ್ಧಾಂತವು. ಆದ್ದರಿಂದ ನಮ್ಮ ಕಾವ್ಯನಾಮದಲ್ಲಿ "ಪಶು" ಎಂಬುದು ನಾಮವಾಗಿದೆ. ಆದರೆ ಊರು!?

ಉತ್ತರಾರ್ಧ "ರುದ್ರಭೂಮಿ" ಶಿವನ ವಾಸಸ್ಥಾನ ರುದ್ರಭೂಮಿ! ಸ್ಮಶಾನ! "ಸರ್ವಂ ಶಿವಮಯಂ ಜಗತ್" ಎಂಬಂತೆ ಈ ಜಗತ್ತಿನ ತುಂಬವೂ ಶಿವನೇ ತುಂಬಿಕೊಂಡಿರುವುದರಿಂದ ಇಡೀ ಜಗತ್ತೇ ರುದ್ರಭೂಮಿ. ಅಂದರೆ ಸ್ಮಶಾನವು.

ಕರ್ಣನ ಅವಸಾನದ ಸಂದರ್ಭವದು. ಸಾವು ನಿಶ್ಚಿತವೆಂಬುದು ಕರ್ಣನಿಗೆ

ಅರ್ಥವಾಗಿದೆ. ಅಂತಹ ಸಂದರ್ಭದಲ್ಲಿ ಶ್ರೀಕೃಷ್ಣಪರಮಾತ್ಮನ ಪರೀಕ್ಷೆ ಬೇರೆ. ಓರ್ವ ಬ್ರಾಹ್ಮಣ ವಟು ವೇಷದಲ್ಲಿ ಬಂದು ಭಿಕ್ಷೆ ಬೇಡಿದ್ದಾನೆ. ಅಂತಹ ಸಂದರ್ಭದಲ್ಲೂ ಕರ್ಣನು ಪ್ರಸನ್ನ ಚಿತ್ತದಿಂದ ದಾನ ಮಾಡಿದ್ದ. ಕರ್ಣನ ತ್ಯಾಗ ಬುದ್ಧಿಗೆ ಮೆಚ್ಚಿದ ಶ್ರೀಕೃಷ್ಣಪರಮಾತ್ಮನು ತನ್ನ ನಿಜಸ್ವರೂಪವನ್ನು ತೋರಿಸಿ, "ಏನನ್ನಾದರೂ ವರಬೇಡು" ಎಂದು ಕೇಳಿದ.

ಕರ್ಣನು "ನಾನು ಬೇಡುವಂಥದ್ದು ಏನೂ ಇಲ್ಲ. ಬೇಡುವುದು ನನಗೆ ಗೊತ್ತೇ ಇಲ್ಲ!" ಎಂದು ಹೇಳಿಬಿಟ್ಟ.

ಪರಮಾತ್ಮನದಕ್ಕೆ "ಇಲ್ಲಾ ದೈವ ಪರೀಕ್ಷೆಯಲ್ಲಿ ಗೆದ್ದಂತಹ ಭಕ್ತನಿಗೆ ಏನಾದರೂ ವರ ಕೊಡದೆ ಹೋದರೆ, ನನ್ನ ದೈವೋಪಚಾರಕ್ಕೆ ಕುಂದು ಬರುತ್ತದೆ. ಆದ್ದರಿಂದ ನೀನು ನಿನಗಲ್ಲದಿದ್ದರೂ, ನನ್ನ ದೈವೋಪಚಾರದ ನೇಮವನ್ನು ರಕ್ಷಿಸುವ ಸಲುವಾಗಿಯಾದರೂ ಬೇಡಲೇ ಬೇಕು, ಬೇಡು" ಎಂದು ಕೇಳಿಕೊಂಡ.

ಕರ್ಣನು, "ಹಾಗಾದರೆ ನಾನು ಸಾಯುವುದು ಖಚಿತ. ಆದ್ದರಿಂದ ನಾನು ಸತ್ತ ನಂತರ ಈ ನನ್ನ ಶರೀರವನ್ನು ಸಾವೇ ಇಲ್ಲದ ಜಾಗದಲ್ಲಿ ಸಂಸ್ಕಾರ ಮಾಡು" ಎಂದು ಕೇಳಿಕೊಂಡ.

ಕೃಷ್ಣನದಕ್ಕೆ 'ತಥಾಸ್ತು' ಎಂದ.

ಕರ್ಣನು ಸ್ವಲ್ಪ ಸಮಯದ ನಂತರ ಮರಣ ಹೊಂದಿದ. ಕರ್ಣನಿಗೆ ಕೊಟ್ಟ ಮಾತಿನಂತೆ ಶ್ರೀಕೃಷ್ಣ ಪರಮಾತ್ಮ ಕರ್ಣನ ಪಾರ್ಥಿವ ಶರೀರವನ್ನು ಕೈಯಲ್ಲಿ ಹಿಡಿದುಕೊಂಡು ಸಾವೇ ಇಲ್ಲದಂತಹ ಜಾಗವನ್ನು ಹುಡುಕಲು ಹೊರಟ. ಬ್ರಹ್ಮಾಂಡಗಳನ್ನೆಲ್ಲ ತಿರುಗಿದ. ಪರಮಾತ್ಮನಿಗೆ ಬ್ರಹ್ಮಾಂಡಗಳೆಲ್ಲವುಗಳಲ್ಲೂ ಸಾವಿಲ್ಲದ ಜಾಗ ಸಿಗಲಿಲ್ಲ. ಯಾಕೆಂದರೆ ಜಗತ್ತು ಹುಟ್ಟಿದಾಗಿನಿಂದ ಹಿಡಿದು ಇಂದಿನ ಪರ್ಯಂತರ ಆಳ ಲಕ್ಷ ಜೀವರಾಶಿಗಳು ಅದೆಷ್ಟೋ ಬಾರಿ ಹುಟ್ಟುಟ್ಟಿ ಸತ್ತಿವೆ. ಅಂದಾದ ಮೇಲೆ ಇಡೀ ಬ್ರಹ್ಮಾಂಡವೇ "ಸ್ಮಶಾನ". ಅರ್ಥಾತ್ "ರುದ್ರಭೂಮಿ" ಆದ್ದರಿಂದ ಸರ್ವಾಂತರ್ಯಾಮಿಯಾದ ಶಿವನ ವಾಸಸ್ಥಾನ ರುದ್ರಭೂಮಿ. ಅದುವೇ ಕೈಲಾಸ.

'ನನ್ನ ಮನೆ', 'ನನ್ನ ಊರು' ಎಂಬುದೆಲ್ಲವೂ ಭ್ರಾಂತಿ. ಯಾವುದೂ ನಾನಲ್ಲ. ಯಾವುದೂ ನನ್ನದಲ್ಲ. "ಸರ್ವಂ ಶಿವಮಯಂ ಜಗತ್" ಎಲ್ಲವೂ ಶಿವನದು. ಆದ್ದರಿಂದ ನನ್ನ ಕಾವ್ಯನಾಮವನ್ನು "ಪಶು-ರುದ್ರಭೂಮಿ" ಎಂದಿಟ್ಟುಕೊಂಡಿರುವುದು.

ಕಾವ್ಯನಾಮವೊಂದು ನನಗೆ ಬೇಕಿತ್ತು. ಅದಕ್ಕೆ ವೀರಶೈವ ಸಿದ್ಧಾಂತಕ್ಕೆ ಮೆರಗು ಕೊಡುವಂತಹ ಈ ನಾಮಾಂಕಿತವನ್ನು ನಾನು ಆಯ್ಕೆ ಮಾಡಿಕೊಂಡಿರುವೆನಷ್ಟೇ.

ಬರೆಯುವುದು ನನ್ನ ಹವ್ಯಾಸವಾಗಿದೆ. ಇದರಿಂದ ಭೌತಿಕದ ಲಾಭಾಧಿಗಳಂತೂ ಯಾವೊಂದು ಇಲ್ಲ. ಆದರೆ, ನನ್ನ ಸುಪ್ತಭಾವವು ಜಾಗ್ರತಗೊಳ್ಳುವುದಷ್ಟೇ.

ಮುದ್ದಣ್ಣ ಮಹಾಕವಿ. ಆತ ತನ್ನ ಹೆಂಡತಿಯ ಆಸೆ ಆಕಾಂಕ್ಷೆಗಳನ್ನು ಈಡೇರಿಸಲಾರದಷ್ಟು ಕಡುಬಡವ. ಈ ಕಾರಣದಿಂದಲೊಮ್ಮೆ ಸತಿಪತಿಗಳಿಬ್ಬರಲ್ಲಿ ವೈಮನಸ್ಸು

ಬಂದಿರಬೇಕು. ಯಾಕೆಂದರೆ ಒಂದು ದಿನ ಮುದ್ದಣ್ಣ ಪೂಜೆಗೆ ಕುಳಿತವನು ಎಷ್ಟು ಹೊತ್ತಾದರೂ ಎದ್ದು ಬರಲಿಲ್ಲ. ಇದನ್ನು ನೋಡಿದ ಮನೋರಮ! "ಶ್ರೀ ಏನ್ರೀ ಯಾಕೆ ಇಷ್ಟೊತ್ತಾದ್ರೂ ಪೂಜೆ ಮುಗಿಲಿಲ್ವಾ? ಯಾಕೀವತ್ತು ಇಷ್ಟೊತ್ತು?" ಎಂದು ಪ್ರಶ್ನಿಸಿದಳು.

"ಇವತ್ತು ನಾನು ಜಪ ಮಾಡ್ತಿರೋದು ಸಪ್ತಾಕ್ಷರಿ ಮಹಾಮಂತ್ರ. ಆ ಮಂತ್ರ ಬೇಗ ಮುಗಿಯೋದಿಲ್ಲ" ಎಂದುತ್ತರಿಸಿದ.

"ಅದ್ಯಾವುದ್ರೀ ಸಪ್ತಾಕ್ಷರಿ ಮಹಾಮಂತ್ರ. ನಾನು ಪಂಚಾಕ್ಷರಿ, ಷಡಾಕ್ಷರಿ, ದ್ವಾದಶಾಕ್ಷರಿ ಮಹಾಮಂತ್ರಗಳಿವೆ ಎಂದು ಕೇಳೀನಿ" ಎಂದಳು.

"ಅದೇ ಕಣೇ ನಿನ್ನ ಆಸೆ ಈಡೇರಿಸೋದು 'ಭವತೀ ಭಿಕ್ಷಾಂ ದೇಹಿ' ಎಂಬ ಮಹಾಮಂತ್ರ. ಅದನ್ನು ಸಿದ್ಧಿ ಮಾಡ್ಕೋ ಬೇಕೋ ಬೇಡ್ವೋ?" ಎಂದು ಕೇಳಿದ್ದ!

ಈ ಕವಿಗಳ ನೋವು ನಲಿವಿನ ಬಗ್ಗೆ ನನ್ನದೊಂದು ಕವನ.

ನನ್ನ ಚಿಂತನೆಯ ಕಂತೆಗಳನ್ನೆಲ್ಲ
ಸಂತೆಯಲ್ಲಿಟ್ಟಿದ್ದೆ! ಮಾರಾಟಕ್ಕೆಂದು
ಕೊಳ್ಳುವವರಾರೂ ಕಾಣಲಿಲ್ಲ
ಚಿಂತಿಸಿ ಚಿಂತಿಸಿ ಏನು ಮಾಡಿದ್ದೆ ಗೊತ್ತೇ?
ಪುಕ್ಕಟೆ ಹಂಚಿದ್ದೆ, ನಿಟ್ಟುಸಿರ ಹೆಜ್ಜೆ ಎಳೆದಿದ್ದೆ
ಮರುದಿನ ಸಿಕ್ಕ ಒಬ್ಬ ಅಂದಿದ್ದ!
"ಅಲ್ರೀ ನೀವ್ಯಾಕ ಮುಂದೆ ಬರ್ಲಿಲ್ಲಾ" ಎಂದು
ಅದಕೆ ನನ್ನ ಗುರು ಶ್ರೀ ಸಿದ್ಧಲಿಂಗ ಮಹಾಂತ
ನನ್ನ ಮನಕೆ ತಿದ್ದಿ ಬುದ್ಧಿ ಹೇಳಿದ್ದ!!
"ನೀನಿವನ ಮುಂದೆಯಾದರೂ ಬಂದಿರುವೆಯಲ್ಲಾ
ಯಾರೊಬ್ಬರ ಮುಂದೆಯೂ ಬರದ ಸಾಹಿತಿಗಳು ಬಹಳಷ್ಟಿಹರೋ
ಅದ ನೀ ತಿಳಿ ಪಶುವೇ" ಎಂತೆಂದು

ಪಶು–ರುದ್ರಭೂಮಿ

# ಗ್ರಂಥ ಮುದ್ರಣದ ದಾನಿಗಳು

ಶ್ರೀಮತಿ ಗಂಗಮ್ಮ
ಶ್ರೀ ಬಸವರಾಜಯ್ಯ ಸ್ವಾಮಿ
ರಾಂಪುರ-577 540



5001-00

ಶ್ರೀಮತಿ ವಿಜಯಲಕ್ಷ್ಮಿ
ಶ್ರೀ ಕೆ.ಎಂ. ವೃಷಭೇಂದ್ರಯ್ಯ ಸ್ವಾಮಿ
ಮೆಟ್ರಿ



5000-00

ಶ್ರೀಮತಿ ಭಾರತಿ ವಾಣಿ
ಶ್ರೀ ಸಿದ್ಧಲಿಂಗಸ್ವಾಮಿ ಓರ್ವಾಯಿ ಮಠ
ಪಿ.ಡಿ.ಓ., ಹೊಸಪೇಟೆ



5000-00

ಶ್ರೀಮತಿ ರಾಜೇಶ್ವರಿ
ಶ್ರೀ ರೇವಯ್ಯಸ್ವಾಮಿ ಹಿರೇಮಠ
ಬಯಲುವದ್ದಿಗೇರಿ



5000-00

ಶ್ರೀಮತಿ ಸುಶೀಲಮ್ಮ
ಶ್ರೀ ಕೆ.ಎಂ. ಸೋಮೇಶ್ವರಯ್ಯ
ಬಾಗಲಗುಂಟೆ
ಬೆಂಗಳೂರು-73



5000-00

ಶ್ರೀಮತಿ ರೂಪ
ಶ್ರೀ ಬಿ.ಕೆ. ನರೇಂದ್ರಬಾಬು
ಬಾಗಲಗುಂಟೆ
ಬೆಂಗಳೂರು-73



5000-00

ಶ್ರೀಮತಿ ಶಾಂಭವಿ
ಶ್ರೀ ಅಂಗಡಿ ಜಂಬಣ್ಣ ಧಣಿ
ಸೋಮಲಾಪುರ
ಹೊಸಪೇಟೆ ತಾ॥



5000-00

ಶ್ರೀಮತಿ ರಾಜೇಶ್ವರಿ
ಶ್ರೀ ಕೆ. ಮಹಂತೇಶ, B.E.
S/o. ಶ್ರೀ ಡಿ. ಸಂಗಪ್ಪನವರು
ಧರ್ಮಸಾಗರ



5000-00

ಶ್ರೀಮತಿ ಟಿ. ಕಮಲಮ್ಮ
ಶ್ರೀ ಎಲ್. ಆಂಜನೇಯಲು
ಪ್ರಾಂಶುಪಾಲರು, ತುಮಕೂರು
(ಜಂಗಮರಹಳ್ಳಿ, ಪಾವಗಡ ತಾ॥)



5000-00

ಕುಮಾರಿ ವೈಷ್ಣವಿ
D/o. ಶ್ರೀ ಮಂಜುನಾಥ ಸಂಗಟಿ
ಪಾಲಕೊಪ್ಪ



5000-00

ಬಿ|| ಆರುಷ್
S/o. ಶ್ರೀ ಮಂಜುನಾಥ ಸಂಗಟಿ
ಪಾಲಿಕೊಪ್ಪ



5000-00

ಶ್ರೀಮತಿ ನಿರ್ಮಲ ಹಿರೇಮಠ
S/o. ಶ್ರೀ ಕೆ.ಎಂ. ನಿರಂಜನಕುಮಾರ
ಬಾಗಲಗುಂಟೆ,
ಬೆಂಗಳೂರು-73



5000-00

ಶ್ರೀಮತಿ ಎಂ. ಅಶ್ವಿನಿ
ಶ್ರೀ ಎಂ. ರವಿ
ಬಾಣಾವರ
ಬೆಂಗಳೂರು-73



5000-00

ಶ್ರೀಮತಿ ಲಕ್ಷ್ಮಿ
ಶ್ರೀ ರಾಮುಡು ಯಡವಲಿ
ಗ್ರಾ.ಪಂ. ಸದಸ್ಯರು
ಹಳೆದರೋಜ-583 129



3000-00

ಈ ಜಗತ್ತಿನಲ್ಲಿ ಜೀವಾತ್ಮರ ಜೀವನ ಅವರವರು ಅಂದುಕೊಂಡಂತಿರುತ್ತದೆ.
ದುಃಖಿಯೆಂದುಕೊಂಡರೆ – ದುಃಖಿ.
ಸುಖಿಯೆಂದುಕೊಂಡರೆ – ಸುಖಿ.
ಆನಂದನೆಂದುಕೊಂಡರೆ – ಆನಂದ ಪುರುಷ.

ಜಗತ್ತು ಮತ್ತು ಜೀವನ ಇವೆರಡನ್ನು ಅನುಮಾನದಿಂದ ನೋಡುವವರು ಕೆಲವರು. ಇರುವುದನ್ನು ಇರುವಂತೆ ನೋಡುವವರು ಬಹಳರು. ಇರುವುದನ್ನು ಬಿಟ್ಟು ಬರಿಯದನ್ನರಿತವರು! ಬರೆದುದನ್ನು ಬಿಟ್ಟು ಬರಿಯ ಹಾಳೆಯನ್ನು ಓದುವವರು ವಿರಳರು.

ಈ ವಿರಳರು ಸಂಪಾದಿಸಿರುವ ಶಕ್ತಿ ಸಾಮಾನ್ಯದ್ದಲ್ಲ. ಕಷ್ಟಸಾಧ್ಯ. ಅದು ಹೇಗೆಂದರೆ! ಈ ಭೂಮಿಗಿರುವ ಗುರುತ್ವಾಕರ್ಷಣ ಶಕ್ತಿಯನ್ನು ಮೀರಿ ವಿಮಾನವೊಂದು ಆಕಾಶದಲ್ಲಿ ಹಾರಾಡುವುದೆಂದರೆ ಅದಕ್ಕೆ ವಿಶೇಷವಾದ ಶಕ್ತಿಯೊಂದಿರಲೇಬೇಕು. ಇರುತ್ತದೆಯೂ ಸಹ. ಹಾಗೆ ಪ್ರಾಕೃತಿಕ ಕಷ್ಟಸುಖಗಳನ್ನು ಮೀರಿ ಜೀವಾತ್ಮನು ಪರಮಾನಂದವನ್ನು ಅನುಭವಿಸಬೇಕೆಂದರೆ ಇ(ತೋ)ರಲಾರದ್ದನ್ನು ಅರಿಯಬೇಕೆಂದರೆ, ಬರಿಯ ಹಾಳೆಯನ್ನೋದಬೇಕೆಂದರೆ! ಅಗೋಚರ ಶಕ್ತಿಯೊಂದು ಜೀವಾತ್ಮರಲ್ಲಿ ಸಂಚಾರಗೊಳ್ಳುತ್ತಿರಬೇಕು. ಅಂತಹ ಪರಮಶಕ್ತಿ ಸಂಪಾದಕರೇ! ಶರಣ-ಸಂತ-ಮಹಾಂತರು. ಇವರು ಅಮೃತರು-ಆನಂದಪುರುಷರು.

ಆ ಮಹಾಮಹಿಮರ ಮಹಿಮಂತಿಕೆಯ ನಡೆ-ನುಡಿಗಳೇ 'ಶಿವಕೀರ್ತನೆ'. ಅದುವೇ ಈ ನನ್ನ ಲೇಖನ "ಚೇತನ-ಸಂಕೀರ್ತನ".

ಇದು ಇದ್ದವರ ಕಥೆಯಲ್ಲ
ಇದ್ದು ಸತ್ತವರ ಕಥೆ!
ಸತ್ತು ಇದ್ದವರ ಕಥೆ!

ಇರುವನೆನ್ನುವರಂತೆ
ರಾಗವಿದೆ–ದ್ವೇಷವಿದೆ!
ತನ್ನ ತಾ ತೋರಿಕೊಳ್ಳುವ–
–ಜಂಬವಿದೆ!
ಗುಣವಂತರ–
–ತೇಜೋವಧೆಯಿದೆ!

ಇದ್ದು ಸತ್ತವರಂತೆ...!
ಸತ್ತು ಇದ್ದವರಂತೆ...!
ಅರಿವಿದೆ–ಆನಂದವಿದೆ!
ಶ್ರೀಗುರು ಸಿದ್ಧಲಿಂಗನ
ಕೃಪಾಕಟಾಕ್ಷವಿದೆ ॥

ಲೌಕಿಕರ ದೃಷ್ಟಿಯಲಿ
ಇದ್ದರೇನು? ಸತ್ತರೇನು?
ಆ ಸಾವು ಗೆದ್ದ–
–ಮಹಾಂತರಿಗೆ ।
ಶರಣಾರ್ಥಿ ।
ಶರಣು ಶರಣಾರ್ಥಿ ॥



ಪಶು-ರುದ್ರಭೂಮಿ
M : 9620415184
9902258933

ಬೆಲೆ : ರೂ. 120-00